# ಹಾವೇರಿ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯ, ಹಂಪಿಗೆ
ಸಾದರಪಡಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು
ಯಲ್ಲಣ್ಣ ಕೆ.

ಮಾರ್ಗದರ್ಶಕರು
ಡಾ. ಎಂ. ಕೊಟ್ರೇಶ್
ಸಹಪ್ರಾಧ್ಯಾಪಕರು
ತುಮಕೂರು ವಿಶ್ವವಿದ್ಯಾನಿಲಯ



ಸಮಾಜ ವಿಜ್ಞಾನ ನಿಕಾಯ
ಶಾಸನ ಶಾಸ್ತ್ರ ವಿಭಾಗ,
ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ - ೫೮೩೨೭೬
೨೦೧೩

# ಹಾವೇರಿ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯ, ಹಂಪಿಗೆ
ಸಾದರಪಡಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು

**ಯಲ್ಲಣ್ಣ ಕೆ.**

ಮಾರ್ಗದರ್ಶಕರು

**ಡಾ. ಎಂ. ಕೊಟ್ರೇಶ್**
ಸಹಪ್ರಾಧ್ಯಾಪಕರು
ತುಮಕೂರು ವಿಶ್ವವಿದ್ಯಾನಿಲಯ



ಸಮಾಜ ವಿಜ್ಞಾನ ನಿಕಾಯ
ಶಾಸನ ಶಾಸ್ತ್ರ ವಿಭಾಗ,
**ಕನ್ನಡ ವಿಶ್ವವಿದ್ಯಾಲಯ**
ಹಂಪಿ, ವಿದ್ಯಾರಣ್ಯ - ೫೮೩೨೭೬
೨೦೧೩

## ಸಂಶೋಧಕರ ಪ್ರಮಾಣ ಪತ್ರ

**"ಹಾವೇರಿ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ"** ಎಂಬ ವಿಷಯವನ್ನು ಕುರಿತು ಡಾ. ಎಂ. ಕೊಟ್ರೇಶ್, ಸಹಪ್ರಾಧ್ಯಾಪಕರು, ಇತಿಹಾಸ ಮತ್ತು ಪುರಾತತ್ವ ವಿಭಾಗ, ತುಮಕೂರು ವಿಶ್ವವಿದ್ಯಾಲಯ, ತುಮಕೂರು ಇವರ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯ, ಹಂಪಿ ಶಾಸನಶಾಸ್ತ್ರ ವಿಭಾಗದಲ್ಲಿ ಪಿಎಚ್.ಡಿ ಪದವಿಗಾಗಿ ಸಂಶೋಧನೆ ನಡೆಸಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಿದ್ದೇನೆ.

ಈ ಪ್ರಬಂಧವನ್ನು ಭಾಗಶಃವಾಗಿಯಾಗಲಿ, ಪೂರ್ಣವಾಗಿಯಾಗಲಿ ಈ ವಿಶ್ವವಿದ್ಯಾಲಯ ಅಥವಾ ಬೇರಾವುದೇ ವಿಶ್ವವಿದ್ಯಾಲಯಗಳ ಪದವಿ, ಡಿಪ್ಲೊಮಾ ಅಥವಾ ತತ್ಸಮಾನ ಪದವಿಗಾಗಿ ಈ ಹಿಂದೆ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ಹಂಪಿ

ದಿನಾಂಕ : 30-07-2013

ಸಂಶೋಧಕರು

(ಯಲ್ಲಣ್ಣ ಕೆ.)
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಮಾರ್ಗದರ್ಶಕರ ಪ್ರಮಾಣ ಪತ್ರ

**ಶ್ರೀ ಯಲ್ಲಣ್ಣ ಕೆ.** ಅವರು ನನ್ನ ಮಾರ್ಗದರ್ಶನದಲ್ಲಿ ಸಂಶೋಧನ ವಿದ್ಯಾರ್ಥಿಯಾಗಿ ಅಧ್ಯಯನ ನಡೆಸಿ ಸಿದ್ಧಪಡಿಸಿದ **"ಹಾವೇರಿ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ"** ಎಂಬ ಮಹಾಪ್ರಬಂಧವನ್ನು ಪಿಎಚ್.ಡಿ., ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಶಾಸನಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಈ ಮಹಾಪ್ರಬಂಧವನ್ನು ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ತುಮಕೂರು

ದಿನಾಂಕ : 30-07-2013

ಮಾರ್ಗದರ್ಶಕರು

M. Kotresh.

(ಡಾ. ಎಂ. ಕೊಟ್ರೇಶ್)
ಸಹ ಪ್ರಾಧ್ಯಾಪಕರು
ಇತಿಹಾಸ ಮತ್ತು ಪುರಾತತ್ವ
ಸಂಶೋಧನ ಮತ್ತು ಅಧ್ಯಯನ ವಿಭಾಗ
ತುಮಕೂರು ವಿಶ್ವವಿದ್ಯಾನಿಲಯ
ತುಮಕೂರು.

# ಹಾವೇರಿ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ

## ಪರಿವಿಡಿ

# ಅಧ್ಯಾಯ – ೧

- ಪೀಠಿಕೆ
- ಅಧ್ಯಯನದ ಉದ್ದೇಶ
- ಅಧ್ಯಯನದ ವಿಧಾನ
- ಅಧ್ಯಯನದ ಸ್ವರೂಪ
- ಇದುವರೆಗೆ ನಡೆದ ಅಧ್ಯಯನದ ಸಮೀಕ್ಷೆ
- ವ್ಯಾಪ್ತಿ
- ಭೌಗೋಳಿಕ ಲಕ್ಷಣಗಳು

**ಪೀಠಿಕೆ:**

ಮಾನವನು ಪ್ರಾಚೀನ ಕಾಲದಿಂದಲೂ ನಿಸರ್ಗದೊಂದಿಗೆ ಸಹಜೀವಿ. ಈತ ಏನೆಲ್ಲಾ ಸಾಧನೆಗೈದರೂ ನಿಸರ್ಗವನ್ನು ಮಟ್ಟಿ ನಿಲ್ಲಲು ಸಂಪೂರ್ಣವಾಗಿ ಸಾಧ್ಯವಿಲ್ಲ ಹೀಗಿರುವ ಮಾನವನ ಊರು, ನೀರು, ಸೂರು ಮುಂತಾದ ಅವಶ್ಯಕತೆಗಳ ವಾದಿಯಾಗಿದ್ದಾನೆ. ಅಂತಹ ಅವಶ್ಯಕತೆಗಳಲ್ಲಿ ಮನುಷ್ಯನ ದೇಹ ರಕ್ಷಣೆಯು ಒಂದು. ಕಲ್ಲುಬಂಡೆಗಳಲ್ಲಿ, ಮರಗಿಡಗಳ ಆಸರೆಯಲ್ಲಿ ಬೆಳೆಯುತ್ತಿದ್ದ ಮನುಷ್ಯ ತನ್ನ ಶರೀರ ರಕ್ಷಣೆಗೆ ಆದ್ಯತೆ ನೀಡುತ್ತಾ ಸಾಗಿದ್ದಾನೆ. ಅಂತಹ ಕ್ರಮಗಳಲ್ಲಿ ಮರದ ಎಲೆ, ತೊಗಟೆ ಮುಂತಾದವುಗಳು ಒಂದು ಹಂತ. ಇವುಗಳ ಹಾದಿಯಲ್ಲಿ ಮುಂದುವರೆದಿದ್ದೆ ಸಂಸ್ಕೃತಿ ಮತ್ತು ನಾಗರೀಕತೆ ಎಂಬ ಅಂಶಗಳು ಮಾನವನ ವಿಕಾಸದೊಂದಿಗೆ ಬೆರೆಯುತ್ತಾ ಬಂದಿವೆ. ಈ ಎರಡು ಅಂಶಗಳ ಆಧಾರದ ಮೇಲೆ ವಿದ್ವಾಂಸ ಶ್ರೀ ಎಸ್. ಶ್ರೀಕಂಠಶಾಸ್ತ್ರಿಯವರು ಸಂಸ್ಕೃತಿ ಮತ್ತು ನಾಗರೀಕತೆ ಮಾನವ ಬದುಕಿನ ಎರಡು ಮುಖಗಳು ಎಂದು ಅಭಿಪ್ರಾಯಪಟ್ಟಿದ್ದಾರೆ.[೧] ಇಂಗ್ಲೀಷಿನ 'Culture' ಎಂಬ ಪದಕ್ಕೆ ಸಮಾನವಾಗಿ 'ಸಂಸ್ಕೃತಿ' ಎಂಬ ಪದವನ್ನು ಬಳಸಲಾಗಿದ್ದು, ಇದಕ್ಕೆ ನಿರ್ದಿಷ್ಟವಾದ, ಅರ್ಥ ಕೊಡುವುದು ಕಷ್ಟದಾಯಕ. ಎಂ. ಚಿದಾನಂದಮೂರ್ತಿ ಅವರು ಅಭಿಪ್ರಾಯಪಡುವಂತೆ "ಮನುಷ್ಯನಲ್ಲಿನ ಮೃಗತ್ವವನ್ನು ಅಳಿಸಿ ನಿಜವಾದ ಮಾನವೀಯತೆಯನ್ನು ಸ್ಥಾಪಿಸುವುದೇ ಸಂಸ್ಕೃತಿ, ಇದು ಪ್ರಧಾನವಾಗಿ ಮಾನವನ 'ಆಂತರಂಗಿಕವಾದ ವಿಕಾಸಕ್ಕೆ ಸಂಬಂಧಿಸಿದ್ದು."[೨] "ಜನತೆಯ ಧರ್ಮ, ಮೌಲ್ಯ, ಕಲೆಗಳು, ಸಾಹಿತ್ಯ, ರಾಜಕೀಯ ಉಡುಗೆ-ತೊಡುಗೆ, ಉದ್ಯೋಗ, ಆರ್ಥಿಕ ಸ್ಥಿತಿ, ಕಾನೂನು ಮತ್ತು ಆಚರಣೆ ಇತ್ಯಾದಿ ಎಲ್ಲವನ್ನೂ ಸಂಸ್ಕೃತಿ ಒಳಗೊಳ್ಳುತ್ತದೆ"[೩] ಎಂಬುದನ್ನು ಸ್ಪಷ್ಟಪಡಿಸಿದ್ದಾರೆ.

ಎಸ್. ಶ್ರೀಕಂಠಶಾಸ್ತ್ರಿ ಅವರು "ಸಂಸ್ಕೃತಿ ಶಬ್ದವು ಕೃಷಿ ಎಂಬ ಭೂವಾಚಕ ಶಬ್ದ ಸಂಬಂಧದಿಂದ ವ್ಯವಸಾಯವನ್ನು 'ನಾಗರೀಕತೆ' ಎಂಬುದು ನಗರ ಜೀವನವನ್ನೂ ಸೂಚಿಸುವುದು" ಎಂದು ಹೇಳುತ್ತಾರೆ.[೪] ನಾಗರೀಕತೆ ಭೌತಿಕ ಸಂಪತ್ತನ್ನು ಪ್ರತಿನಿಧಿಸಿದ್ದು, ಭಾಹ್ಯ ಪ್ರಧಾನ, ಬಾಹ್ಯ ಜೀವನವನ್ನು ಅವಲಂಬಿಸಿದೆ. ಅದೇ ರೀತಿ ವ್ಯಕ್ತಿಯ ಆಚಾರ-ವಿಚಾರ, ಧರ್ಮ, ಸಾಹಿತ್ಯ, ಕಲೆಗಳಲ್ಲಿ ವ್ಯಕ್ತಿಯ ಸ್ವಭಾವವು ಸಂಸ್ಕೃತಿಯಾಗಿರುತ್ತದೆ.[೫] ಒಟ್ಟಿನಲ್ಲಿ ಸಂಸ್ಕೃತಿಯು ಮಾನವನ ಸಮಗ್ರ ಜೀವನ ವಿಧಾನವನ್ನು ಹೇಳುತ್ತದೆ. ಒಂದು ಪ್ರದೇಶದ ಚರಿತ್ರೆಯೆಂದರೆ ಆ ಪ್ರದೇಶವನ್ನಾಳಿದ ರಾಜ ಮಹಾರಾಜರು, ರಾಣಿಯರು ವಾಸಿಸುತ್ತಿದ್ದ ಅರಮನೆ ಹಾಗೂ ಸಾಮ್ರಾಜ್ಯದ ವರ್ಣನೆ ಎಂದು ಭಾವಿಸಲಾಗಿತ್ತು. ಆದರೆ ಕೆಲವು ದಶಕಗಳಿಂದೀಚೆಗೆ ಪ್ರಾದೇಶಿಕ/ಸ್ಥಳೀಯ ಚರಿತ್ರೆಗೆ ಹೆಚ್ಚು ಮಹತ್ವ ನೀಡಿ ಅಧ್ಯಯನ

ಮಾಡಲಾಗುತ್ತಿದೆ. ಇಂದು ಸ್ಥಳೀಯ ಚರಿತ್ರೆಯಲ್ಲಿ ಗ್ರಾಮ, ಹೋಬಳಿ, ತಾಲೂಕು ಹಾಗೂ ಜಿಲ್ಲೆಗಳ ಮಟ್ಟದಲ್ಲಿ ಸಂಶೋಧನೆ, ಅಧ್ಯಯನಗಳು ನಡೆಯುತ್ತಿವೆ. ಇಂತಹ ಸಂಶೋಧನ ಅಧ್ಯಯನಗಳು ಸ್ಥಳೀಯ ಚರಿತ್ರೆಯಲ್ಲಿ ಮಹತ್ವಪೂರ್ಣವಾದ ಹೆಜ್ಜೆಗುರುತುಗಳು. ಪ್ರಾದೇಶಿಕ/ಸ್ಥಳೀಯ ಚರಿತ್ರೆ ಅಧ್ಯಯನದಲ್ಲಿ ರಾಜಕೀಯ ಇತಿಹಾಸದ ಜೊತೆ ಜೊತೆಗೆ ಅಂದಿನ ಸಾಂಸ್ಕೃತಿಕ ಬದುಕಿನ ಅಧ್ಯಯನಕ್ಕೆ ಮಹತ್ವ ನೀಡಲಾಗುತ್ತಿದೆ. ಗತಕಾಲದಲ್ಲಿ ಆ ಪ್ರದೇಶದಲ್ಲಿ ಬದುಕಿ ಬಾಳಿದ ಮಾನವನ ಜೀವನ ವಿಧಾನ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಜೀವನ ಸಮಸ್ಯೆ, ಜೀವನ ಮೌಲ್ಯ ಇತ್ಯಾದಿಗಳ ಕುರಿತ ಅಧ್ಯಯನವನ್ನು ಸಾಂಸ್ಕೃತಿಕ ಅಧ್ಯಯನವೆಂದು ಹೇಳಬಹುದು. ಒಟ್ಟಾರೆ ಗತಕಾಲದ ಮಾನವನ ಚರಿತ್ರೆ ಅಂದಿನ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಕಲೆ ಮತ್ತು ವಾಸ್ತುಶಿಲ್ಪ ಮುಂತಾದ ಸಂಗತಿಗಳನ್ನು ಕುರಿತ ವಿಶ್ಲೇಷಣಾತ್ಮಕ ಅಧ್ಯಯನವೇ 'ಸಾಂಸ್ಕೃತಿಕ ಅಧ್ಯಯನ'.

ಯಾವುದೇ ಒಂದು ಪ್ರದೇಶದ ಸಾಂಸ್ಕೃತಿಕ ಇತಿಹಾಸ ಅಧ್ಯಯನಕ್ಕೆ ಆಕರಗಳು ಬಹುಮುಖ್ಯ. ಅಂತಹ ಆಕರಗಳಲ್ಲಿ ಶಾಸನಗಳು ನಮಗೆ ಮೂಲ ಪರಿಕರಗಳಾಗುತ್ತವೆ. ಆ ಶಾಸನಗಳು ನಮ್ಮ ನಾಡಿನ ಚಾರಿತ್ರಿಕ ಸಂಪತ್ತು ಹಾಗೂ ಹೆಚ್ಚಿನ ನಿಕರವಾದ ಆಧಾರಗಳನ್ನು ಒದಗಿಸಬಲ್ಲ ದಾಖಲೆಗಳಾಗಿವೆ. ಈ ಆಕರ ಸಾಮಾಗ್ರಿಗಳೆಲ್ಲವೂ ಗತಕಾಲದ ಇತಿಹಾಸ ಮತ್ತು ಸಂಸ್ಕೃತಿಯನ್ನು ಸಾರುವ ವಿಭಿನ್ನ ನೆಲೆಯಲ್ಲಿ ಸಹಾಯಕವಾಗುತ್ತವೆ. ಶಾಸನಗಳನ್ನು ಪ್ರಧಾನವಾಗಿಟ್ಟುಕೊಂಡು, ಪ್ರದೇಶದ ಗತಕಾಲದ ಮಾನವನ ಚರಿತ್ರೆ ಹಾಗೂ ಸಂಸ್ಕೃತಿಯನ್ನು ವ್ಯವಸ್ಥಿತವಾಗಿ ಕಟ್ಟಿಕೊಡಬಹುದೆಂಬುದು ಪ್ರಸ್ತುತ ಅಧ್ಯಯನದ ಆಶಯವಾಗಿದೆ.

ಪ್ರಸ್ತುತ "ಹಾವೇರಿ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ಎಂಬ ಶೀರ್ಷಿಕೆ ಅಡಿಯಲ್ಲಿ ಅಧ್ಯಯನ ಕೈಗೊಂಡು ಇಡೀ ಹಾವೇರಿ ಜಿಲ್ಲೆಯಲ್ಲಿ ದೊರೆಯುವ ಶಾಸನಗಳು, ಪ್ರಾಚ್ಯ ಅವಶೇಷಗಳು ದೇವಾಲಯಗಳು, ಮೂರ್ತಿಶಿಲ್ಪಗಳು ಹಾಗೂ ಹಾವೇರಿ ಜಿಲ್ಲೆಯಲ್ಲಿ ದೊರೆಯುವ ಶಾಸನಗಳನ್ನು ಬೇರೆ ಬೇರೆ ಭಾಗದ ಶಾಸನಗಳೊಂದಿಗೆ ತುಲನಾತ್ಮಕವಾಗಿ ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ. ಹಾವೇರಿ ಜಿಲ್ಲೆಯಲ್ಲಿ ೦೭ ತಾಲ್ಲೂಕುಗಳಿದ್ದು, ಇತರೆ ಜಿಲ್ಲೆಗಳಿಗೆ ಹೋಲಿಸಿದರೆ ಹಾವೇರಿ ಜಿಲ್ಲೆಯ ಭೌಗೋಳಿಕ ಲಕ್ಷಣ ವಿಶಿಷ್ಟವಾಗಿದ್ದು, ಇತ್ತ ಬಯಲು ಸೀಮೆಯೂ ಅಲ್ಲದ, ಅತ್ತ ಮಲೆನಾಡು ಪ್ರದೇಶವೂ ಅಲ್ಲದ ಹಾವೇರಿ ಜಿಲ್ಲೆ ಅರೆಮಲೆನಾಡಾಗಿದ್ದು, ಜನಜೀವನಕ್ಕೆ ಅತ್ಯಂತ ಉಪಯುಕ್ತ ಪ್ರದೇಶ. ಸಾಂಸ್ಕೃತಿಕವಾಗಿ, ಐತಿಹಾಸಿಕವಾಗಿ ಹಾವೇರಿ ಜಿಲ್ಲೆ ಗಮನಾರ್ಹವಾದದ್ದು. ಇಲ್ಲಿಯ ತುಂಗಭದ್ರಾ ನದಿಗಳ ಆಶ್ರಯದಲ್ಲಿ ಪ್ರಾಗೈತಿಹಾಸಿಕ ಕಾಲದಿಂದಲೂ ಜನವಸತಿಗಳನ್ನು ಗುರುತಿಸಬಹುದು. ಹಾವೇರಿ ತಾಲ್ಲೂಕಿನ ಜಲ್ಲಾಪುರ, ರಾಣೆಬೆನ್ನೂರು ತಾಲ್ಲೂಕಿನ ಚನ್ನಾಪುರ, ನಲವಾಗಲ ಮತ್ತು ನದೀಹರಳಹಳ್ಳಿ, ಹಾನಗಲ್ಲು ತಾಲ್ಲೂಕಿನ ವರ್ದಿ ಮೊದಲಾದ ಸ್ಥಳಗಳಲ್ಲಿ ಪುರಾತನ ನೆಲೆಗಳು

ಅಪಾರ ಪ್ರಮಾಣದಲ್ಲಿ ಕಂಡುಬಂದಿವೆ.[೬] ನವ ಶಿಲಾಯುಗದ ಸಂಸ್ಕೃತಿಗಳಿಗೆ ಸಂಬಂಧಿಸಿದಂತೆ ರಾಣಿಬೆನ್ನೂರು ತಾಲ್ಲೂಕಿನ ಅಸುಂಡಿ, ಮುದೇನೂರುಗಳಲ್ಲಿ ದೊರಕಿವೆ ಚಾರಿತ್ರಿಕ ಕಾಲ ಘಟ್ಟದಲ್ಲಿ ಮೌರ್ಯ ಮತ್ತು ಶಾತವಾಹನರ ಕಾಲದಲ್ಲಿ ಪ್ರಾರಂಭವಾಗಿ ಮುಂದುವರೆದು ಬಂತು. ಬನವಾಸಿ ಕದಂಬರು ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಳಚೂರಿ ಯಾದವ, ವಿಜಯನಗರ ಅರಸರು ನಂತರ ಅದಿಲ್‌ಶಾಹೀ ಆಡಳಿತಕ್ಕೆ ಒಳಪಟ್ಟಿತ್ತು.[೭] ಸಾಂಸ್ಕೃತಿಕ ಚರಿತ್ರೆಯ ನಿರ್ಮಾಣದಲ್ಲಿ ಸ್ಮಾರಕಗಳು ಅಮೂಲಾಗ್ರ ಪಾತ್ರ ವಹಿಸುತ್ತವೆ. ಸ್ಮಾರಕಗಳಲ್ಲಿ ದೇವಾಲಯ, ಕೋಟೆ–ಕೊತ್ತಲ, ಅರಮನೆ, ಕೆರೆ–ಕಟ್ಟೆ ಮುಂತಾದವುಗಳನ್ನು ಕಾಣಬಹುದು. ಇವು ಗತಕಾಲದ ಮಾನವನ ಆರ್ಥಿಕ ಜೀವನದ ಬೆನ್ನೆಲುಬಾಗಿದ್ದವು. ಅವುಗಳಲ್ಲಿ ಕೆಲವು ಇಂದಿಗೂ ಬಳಕೆಯಾಗುತ್ತಿರುವುದು ಅಂದಿನ ವಾಸ್ತುರಚನೆಯ ತಾಂತ್ರಿಕ ಕೌಶಲ್ಯಕ್ಕೆ ಸಾಕ್ಷಿಯಾಗಿದೆ. ಇಲ್ಲಿನ ಶಿಲ್ಪ ಸಂಪತ್ತು ಅಪಾರವಾಗಿದ್ದು, ಶಿಲ್ಪಗಳಲ್ಲಿ ಮೂರ್ತಿಶಿಲ್ಪಗಳು ಹಾಗೂ ಸ್ಮಾರಕ ಶಿಲ್ಪಗಳು ಕಂಡುಬರುತ್ತವೆ.

ಇಲ್ಲಿನ ಶಾಸನ ಸಂಪತ್ತು ಹಾವೇರಿ ಜಿಲ್ಲೆಯ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಅಧ್ಯಯನಕ್ಕೆ ಅಮೂಲ್ಯವಾದ ಆಕರ ಸಂಪತ್ತುಗಳಾಗಿವೆ. ಪ್ರಾಚೀನ ಕಾಲದಿಂದ ಜೈನ, ಶಾಕ್ತ, ಶೈವ, ವೈಷ್ಣವ ಮುಂತಾದ ಧಾರ್ಮಿಕ ಪಂಥಗಳು ಇಲ್ಲಿನ ದೇವಾಲಯಗಳು ಹಾಗೂ ಶಿಲ್ಪಾವಶೇಷಗಳ ಮೂಲಕ ಉಳಿದುಬಂದಿದ್ದು, ತನ್ನದೇ ಆದ ವಿಶೇಷತೆಯನ್ನು ಹೊಂದಿದೆ.

## ಅಧ್ಯಯನದ ಉದ್ದೇಶ:

ಯಾವುದೇ ಒಂದು ಪ್ರದೇಶದ ಇತಿಹಾಸ ರಚನೆಗೆ ಆ ದೇಶದ ಐತಿಹಾಸಿಕ ಮತ್ತು ಭೌಗೋಳಿಕ ಅಂಶಗಳು ಸಹಾಯಕವಾಗಿವೆ ಅಂದರೆ ಆ ಪ್ರದೇಶದಲ್ಲಿ ವಾಸಿಸುವ ಮಾನವನು ಬದುಕಿದ ರೀತಿ, ಕಟ್ಟಿದ ಕಲೆ, ಜೀವನದ ಸಮಸ್ಯೆಗಳು, ಜೀವನದ ಮೌಲ್ಯಗಳು ಇವುಗಳನ್ನು ಒಳಗೊಂಡ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ವಿಷಯಗಳನ್ನು "ಸಾಂಸ್ಕೃತಿಕ ಅಧ್ಯಯನ" ಎಂದು ಕರೆಯಲಾಗುತ್ತದೆ. ಇವುಗಳ ಪರಿಮಿತಿಯಲ್ಲಿ "ಹಾವೇರಿ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ಎಂಬ ಶೀರ್ಷಿಕೆ ಅಡಿಯಲ್ಲಿ ಸಂಶೋಧನಾತ್ಮಕವಾಗಿ ನಡೆಸಿದ ಅಧ್ಯಯನದ ಫಲವೇ ಈ ಸಂಶೋಧನಾ ಮಹಾಪ್ರಬಂಧ.

ಈ ನಾಡಿನ ಸಾಂಸ್ಕೃತಿಕ ಚರಿತ್ರೆಯನ್ನು ತಿಳಿಯಲು ಪ್ರಮುಖವಾಗಿ ಪುರಾತನ ಅವಶೇಶಗಳು ಬಹುಮುಖ್ಯವಾಗಿವೆ. ಅಂತಹ ಪುರಾತತ್ವ ಅನ್ವೇಷಣೆ, ಶೋಧನೆ, ಸಂಗ್ರಹಣೆ. ವಿಶ್ಲೇಷಣೆ ಮತ್ತು ಪ್ರಕಟಣೆ ಒಂದು ನಾಡಿನ ಜೀವನಾಡಿಗಳೆನಿಸಿದ ಊರುಗಳಿಂದ ಅಥವಾ ಗ್ರಾಮಗಳಿಂದ ಆರಂಭವಾಗುತ್ತದೆ ಮತ್ತು ಆ ನಾಡಿನ ಸಾಂಸ್ಕೃತಿಕ ಇತಿಹಾಸದ ಬಹುಮುಖಿ ಚಿತ್ರಣವನ್ನು ವಸ್ತುನಿಷ್ಠವಾಗಿ ಪುನರ್ ರಚಿಸಬಹುದಾಗಿದೆ.

ಈ ಪ್ರದೇಶದ ಇತಿಹಾಸವನ್ನು ತಿಳಿಯಲು ಅಲ್ಲಿ ದೊರೆಯುವ ಶಾಸನಗಳೇ ಪ್ರಮುಖ ಆಕರಗಳಾಗಿವೆ. ಇವುಗಳು ನಮ್ಮ ನಾಡಿನ ಇತಿಹಾಸ ಮತ್ತು ಚಾರಿತ್ರಿಕ ಸಂಪತ್ತು ಎಂದರೆ ತಪ್ಪಾಗಲಾರದು. ಈ ದೃಷ್ಠಿಯಿಂದ ಶಾಸನಗಳನ್ನು ಆಧಾರಗಳನ್ನಾಗಿ ಇಟ್ಟುಕೊಂಡು ಅನೇಕ ಅಧ್ಯಯನಗಳು ನಡೆಯುತ್ತದೆ ಯಾವುದೇ ಒಂದು ರಾಜಮನೆತನದ ಶಾಸನಗಳನ್ನು ಆಧಾರವನ್ನಾಗಿಟ್ಟುಕೊಂಡು ಸಮಕಾಲೀನ ಅಧ್ಯಯನ ಕೈಗೊಳ್ಳುವುದು ಅಲ್ಲಿ ಕಂಡುಬರುವ ಅನೇಕ ಶೈಲಿಯ ದೇವಾಲಯಗಳನ್ನು ಆಧಾರವಾಗಿ ಇಟ್ಟುಕೊಂಡು ಅವುಗಳ ನಿರ್ಮಾಣ ಮತ್ತು ಸಾಂಸ್ಕೃತಿಕ ಅಧ್ಯಯನವನ್ನು ಮಾಡುವುದು ಸಮಂಜಸವೆನಿಸುತ್ತದೆ. ಈ ಹಿನ್ನೆಲೆಯಲ್ಲಿ ನಾನು ಹಾವೇರಿ ಜಿಲ್ಲೆಯ ಶಾಸನಗಳನ್ನು ಸಾಂಸ್ಕೃತಿಕ ಅಧ್ಯಯನಕ್ಕೆ ಒಳಪಡಿಸಿಕೊಂಡು ರಾಜಕೀಯ, ಆಡಳಿತ, ಸಾಮಾಜಿಕ, ಆರ್ಥಿಕ, ಧಾರ್ಮಿಕ ವಿಷಯಗಳ ನೆಲೆಗಟ್ಟಿನಲ್ಲಿ ಅಧ್ಯಯನ ಮಾಡುವ ಉದ್ದೇಶವನ್ನು ಒಳಗೊಂಡಿದೆ.

## ಅಧ್ಯಯನ ವಿಧಾನ:

ನನ್ನ ಸಂಶೋಧನೆಯ ಶೀರ್ಷಿಕೆಗೆ ಅನುಗುಣವಾಗಿ ಹಾವೇರಿ ಜಿಲ್ಲೆಯಲ್ಲಿ ಕಂಡು ಬರುವ ಶಾಸನಗಳನ್ನು ಆಧಾರವಾಗಿಟ್ಟುಕೊಂಡು ಕ್ಷೇತ್ರಕಾರ್ಯವನ್ನು ಮಾಡಿ ಆಯಾ ಗ್ರಾಮಗಳಿಗೆ ಭೇಟಿ ನೀಡಿ ಅಲ್ಲಿ ದೊರೆಯುವ ಮಾಹಿತಿಯನ್ನು ಸಂಗ್ರಹಿಸಲಾಯಿತು ನಂತರ ಅವುಗಳನ್ನು ಇಂಡೆಕ್ಸ್ ಕಾರ್ಡ್‌ಗಳಲ್ಲಿ ಶಾಸನ ದೊರೆತಿರುವ ಗ್ರಾಮ, ಸ್ಥಳ, ಕಾಲ, ಭಾಷೆ, ಲಿಪಿ ಅರಸರನ್ನು ಒಳಗೊಂಡಂತಹ ಮಾಹಿತಿಯನ್ನು ಕುರಿತು ಪಟ್ಟಿಯನ್ನು ತಯಾರಿಸಿಕೊಂಡಿದ್ದು, ಜೊತೆಗೆ ಅಲ್ಲಿ ಕಂಡುಬರುವ ದೇವಾಲಯಗಳು, ಶಿಲ್ಪಗಳು ಹಾಗೂ ಶಾಸನಗಳ ವಿವರವಾದ ಮಾಹಿತಿಯನ್ನು ಛಾಯಾಚಿತ್ರಗಳೊಂದಿಗೆ ಸಂಗ್ರಹಿಸಲಾಲಾಗಿದೆ. ಇದರೊಂದಿಗೆ ಶಾಸನಗಳಲ್ಲಿ ದೊರೆತ ಮಾಹಿತಿಯನ್ನು ವಿಶ್ಲೇಷಣಾತ್ಮಕವಾಗಿ ಅಧ್ಯಯನ ಮಾಡಿ ವಿಷಯವನ್ನು ಸಂದರ್ಭೋಚಿತವಾಗಿ ಬಳಸಿಕೊಂಡಿದ್ದೇನೆ. ಹಾವೇರಿ ಜಿಲ್ಲೆಗೆ ಸಂಬಂಧಪಟ್ಟಂತೆ ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್ ಸಂಪುಟ ೧೮, ೧೯ ಮತ್ತು ೨೧ ಹಾಗೂ ಧಾರವಾಡ ಜಿಲ್ಲಾ ಗ್ಯಾಜಿಟೀಯರ್, ಕರ್ನಾಟಕ ಇನ್ಸ್‌ಕ್ರಿಪ್ಷನ್ ೧ ರಿಂದ ೬, ಎಫಿಗ್ರಾಫಿಯಾ ಇಂಡಿಕಾ, ನಿಯತಕಾಲಿಕೆಗಳು ಹಾಗೂ ಇತಿಹಾಸದರ್ಶನ ಇವುಗಳಲ್ಲಿ ಮಾಹಿತಿಗಳು ಉಲ್ಲೇಖಗಳು ಲಭ್ಯವಿದ್ದರೂ ಇವುಗಳು ಒಂದೆಡೆ ದೊರೆಯುವುದಿಲ್ಲ. ಈ ಹಿನ್ನೆಲೆಯಿಂದ ಅವುಗಳನ್ನು ಒಟ್ಟುಗೂಡಿಸಿ ಜೊತೆಗೆ ಇವುಗಳಲ್ಲಿ ಉಲ್ಲೇಖವಾದ ಮಾಹಿತಿಯನ್ನು ಆಧರಿಸಿ ದೊರೆಯುವ ಹೊಸ ಹೊಸ ವಿಷಯಗಳನ್ನು ಹೊರತರುವ ಪ್ರಯತ್ನ ಮಾಡಲಾಗಿದೆ.

## ಸ್ವರೂಪ:

ಪ್ರಸ್ತುತ ಅಧ್ಯಯನವು ಎಂಟು ಅಧ್ಯಾಯಗಳನ್ನು ಒಳಗೊಂಡಿದೆ. ಅವುಗಳಲ್ಲಿ ಮೊದಲನೆಯ ಅಧ್ಯಾಯವು ಪೀಠಿಕೆಯಾಗಿದ್ದು, ಅದರಲ್ಲಿ ಅಧ್ಯಯನದ ಉದ್ದೇಶ. ಸ್ವರೂಪ.

ವ್ಯಾಪ್ತಿ, ಭೌಗೋಳಿಕ ಲಕ್ಷಣಗಳು ಹಾಗೂ ಶಾಸನಗಳ ಅರ್ಥ – ಇದೂವರೆಗೂ ನಡೆದಿರುವ ಅಧ್ಯಯನಗಳ ಬಗ್ಗೆ ಮಾಹಿತಿಯನ್ನು ಒಳಗೊಂಡಂತೆ ಚರ್ಚಿಸಲಾಗಿದೆ.

ಎರಡನೇ ಅಧ್ಯಾಯವು ರಾಜಕೀಯ ಇತಿಹಾಸವಾಗಿದ್ದು, ಇತಿಹಾಸ ಪೂರ್ವಕಾಲ, ಬನವಾಸಿ, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ಹಾನಗಲ್ಲು ಕದಂಬರು, ಗುತ್ತಲದ ಗುತ್ತರು, ನೂರಂಬಾಡ ಕದಂಬರು, ದೇವಗಿರಿಯ ಯಾದವರು, ಹೊಯ್ಸಳರು ಮತ್ತು ವಿಜಯನಗರ ಸಾಮ್ರಾಜ್ಯದ ಅರಸರು ಹಾವೇರಿ ಜಿಲ್ಲೆಯಲ್ಲಿ ಆಳ್ವಿಕೆ ನಡೆಸಿದ ಮಾಹಿತಿಯನ್ನು ತಿಳಿಸಲಾಗಿದೆ.

ಮೂರನೇ ಅಧ್ಯಾಯವು ಆಡಳಿತವಾಗಿದ್ದು, ರಾಜ, ರಾಣಿ, ಮಂತ್ರಿಮಂಡಲ ಇತರ ಅಧಿಕಾರಿ ವರ್ಗ, ಸೈನ್ಯಾಡಳಿತ, ಪ್ರಾಂತ್ಯಾಡಳಿತ, ಗ್ರಾಮಾಡಳಿತ ಮತ್ತು ನ್ಯಾಯಾಡಳಿತಕ್ಕೆ ಸಂಬಂಧಪಟ್ಟಂತೆ ಚರ್ಚಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಆರ್ಥಿಕ ವ್ಯವಸ್ಥೆಗೆ ಸಂಬಂಧಿಸಿದ, ಕೃಷಿ, ನೀರಾವರಿ, ಬೆಳೆಗಳು. ತೆರಿಗೆಗಳು, ವ್ಯಾಪಾರ, ತೂಕ ಮತ್ತು ಅಳತೆ ಹಾಗೂ ನಾಣ್ಯಪದ್ಧತಿ ಬಗ್ಗೆ ಮಾಹಿತಿಯನ್ನು ನೀಡಲಾಗಿದೆ.

ಅಧ್ಯಾಯ ಐದರಲ್ಲಿ ಸಾಮಾಜಿಕ ವಿಷಯಗಳಿಗೆ ಸಂಬಂಧಿಸಿದಂತೆ ಜಾತಿ ವ್ಯವಸ್ಥೆ – ಬ್ರಾಹ್ಮಣರು, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರು, ಸ್ತ್ರೀಯರ ಸ್ಥಾನಮಾನ ವಿವಾಹ ಹಾಗೂ ಸ್ಮಾರಕಗಳಿಗೆ ಸಂಬಂಧಪಟ್ಟಂತೆ ವೀರಗಲ್ಲು, ಮಾಸ್ತಿಗಲ್ಲು ಹಾಗೂ ನಿಷಧಿಕಲ್ಲುಗಳ ಬಗ್ಗೆ ಕೂಲಂಕುಷವಾಗಿ ಈ ಅಧ್ಯಯನದಲ್ಲಿ ವಿವರಿಸಲಾಗಿದೆ.

ಅಧ್ಯಾಯ ಆರರಲ್ಲಿ ಧಾರ್ಮಿಕ ವ್ಯವಸ್ಥೆಗೆ ಸಂಬಂಧಿಸಿದಂತೆ ಬೌದ್ಧ, ಜೈನ, ಶೈವ, ವೈಷ್ಣವ, ವೀರಶೈವ, ಕಾಳಮುಖರು ಹಾಗೂ ಶಿಕ್ಷಣಕ್ಕೆ ಸಂಬಂಧಪಟ್ಟಂತೆ ವಿದ್ಯಾಭ್ಯಾಸ, ಅಗ್ರಹಾರಗಳು ಮತ್ತು ಮಠಗಳ ಬಗ್ಗೆ ಶಾಸನಗಳಲ್ಲಿ ಉಲ್ಲೇಖವಾದ ಮಾಹಿತಿಯನ್ನು ಕುರಿತು ಚರ್ಚಿಸಲಾಗಿದೆ.

ಅಧ್ಯಾಯ ಏಳರಲ್ಲಿ ದೇವಾಲಯಗಳು ಮತ್ತು ಶಿಲ್ಪಗಳಿಗೆ ಸಂಬಂಧಿಸಿದಂತೆ ಗರ್ಭಗೃಹ, ಸುಖನಾಸಿ ನವರಂಗ, ಮುಖಮಂಟಪ, ಅಧಿಷ್ಠಾನ ಭಿತ್ತಿ, ಪ್ರಾಕಾರ, ಶಿಖರ ದೇವಾಲಯಗಳ ಶೈಲಿಯ ವಿವರವನ್ನು ಒಳಗೊಂಡಂತೆ ಮಾಹಿತಿ ನೀಡಲಾಗಿದೆ ಹಾಗೂ ದೇವಾಲಯದಲ್ಲಿ ಕಂಡುಬರುವ ಮೂರ್ತಿಶಿಲ್ಪಗಳ ಸಂಕ್ಷಿಪ್ತ ಮಾಹಿತಿಯನ್ನು ಪ್ರಚುರಪಡಿಸಲಾಗಿದೆ.

ಅಧ್ಯಾಯ ಎಂಟು ಸಮಾರೋಪವಾಗಿದ್ದು, ಮೇಲೆ ತಿಳಿಸಿದ ಎಲ್ಲಾ ಅಧ್ಯಯನಗಳ ಕೂಲಂಕುಷ ಮಾಹಿತಿಯನ್ನು ಇಲ್ಲಿ ಚರ್ಚಿಸಲಾಗಿದ್ದು, ಕೊನೆಯಲ್ಲಿ ಗ್ರಂಥಋಣ. ನಕಾಶೆಗಳು

ಮತ್ತು ಛಾಯಾಚಿತ್ರಗಳನ್ನು ಒಳಗೊಂಡಂತೆ ಈ ಸಂಶೋಧನಾ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

**ಅಧ್ಯಯನದ ಸಮೀಕ್ಷೆ :**

ಶಾಸನಗಳ ಸಾಂಸ್ಕೃತಿಕ ಸಂಶೋಧನೆ ೨೦ನೇ ಶತಮಾನದ ಮಧ್ಯಭಾಗದ ಕನ್ನಡ ನಾಡಿನಲ್ಲಿ ವ್ಯವಸ್ಥಿತವಾಗಿ ಕಾಣಿಸಿಕೊಂಡ ಶೈಕ್ಷಣಿಕ ಶಿಸ್ತು, ಸಾಂಸ್ಕೃತಿಕ ಅಧ್ಯಯನ ಶಾಸನಗಳನ್ನು ಆಧರಿಸಿ ಜೊತೆಗೆ ಅದಕ್ಕೆ ಪೂರಕವಾದ ಆಧಾರಗಳನ್ನು ಬಳಸಿಕೊಂಡು ಅಧ್ಯಯನ ಮಾಡುವಂತಹದು ಆಗಿದೆ. ಡಾ. ಎಂ. ಚಿದಾನಂದಮೂರ್ತಿಯವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಎಂಬ ಸಂಶೋಧನ ಗ್ರಂಥದಲ್ಲಿ ಸಾಮಾಜಿಕ, ರಾಜಕೀಯ, ಧಾರ್ಮಿಕ, ವಿಷಯಗಳ ಜೊತೆಗೆ ಸಾಂಸ್ಕೃತಿಕ ದೃಷ್ಟಿಕೋನದಿಂದ ಕೆಲವು ವಿಷಯಗಳನ್ನು ವಿಶ್ಲೇಷಿಸಿದ್ದಾರೆ. ದೇವಾಲಯಗಳನ್ನು ಕುರಿತು ಒಂದು ಪ್ರತ್ಯೇಕ ಅಧ್ಯಯನವನ್ನು ಹಾಕಿಕೊಂಡು ಅವುಗಳ ಸಾಂಸ್ಕೃತಿಕ ಮಹತ್ವವನ್ನು ಚರ್ಚಿಸಿದ್ದಾರೆ. ಆದೆ ರೀತಿ ಈ ಅಧ್ಯಾಯವು ಕ್ರಿ.ಶ. ೪೫೦ ರಿಂದ ಕ್ರಿ.ಶ. ೧೧೫೦ರವರೆಗಿನ ಕನ್ನಡ ಶಾಸನಗಳ ಅಧ್ಯಯನ ಕಾಲಮಿತಿಗೆ ಒಳಪಟ್ಟ ಕೃತಿಯಾಗಿದೆ.[೮]

ಇವುಗಳಲ್ಲದೆ ಕರ್ನಾಟಕ ಪರಂಪರೆ ಮತ್ತು ಕರ್ನಾಟಕ ಚರಿತ್ರೆಯಂತಹ ಗ್ರಂಥಗಳಲ್ಲಿ ಕರ್ನಾಟಕದ ವಾಸ್ತುಶಿಲ್ಪವನ್ನು ಕುರಿತ ಪ್ರಬುದ್ಧ ಲೇಖನಗಳು ಪ್ರಕಟವಾಗಿವೆ. ಹಲವು ಅಭಿನಂದನಾ ಗ್ರಂಥ ಮತ್ತು ವಿಶೇಷ ಸ್ಮರಣ ಸಂಚಿಕೆಗಳಲ್ಲಿ ಕರ್ನಾಟಕ ವಾಸ್ತುಶಿಲ್ಪ ಕಲೆಗಳಿಗೆ ಮಾತ್ರ ಅಧ್ಯಯನವು ಸೀಮಿತವಾಗಿದೆ. ದೇವಾಲಯಗಳ ವಾಸ್ತುಶಿಲ್ಪವನ್ನು ಕುರಿತು ಅನೇಕ ಸಂಶೋಧನಾ ಗ್ರಂಥಗಳು ಪ್ರಕಟಗೊಂಡಿವೆ. ಪ್ರಕಟವಾಗಿರುವ ನಿಬಂಧಗಳೂ ಇವೆ. ಇವುಗಳೆಲ್ಲವೂ ಹೆಚ್ಚಾಗಿ ಆಂಗ್ಲಭಾಷೆಯಲ್ಲಿಯೇ ಇರುವುದನ್ನು ಗಮನಿಸಿದಾಗ ದೇವಾಲಯಗಳನ್ನು ಕುರಿತು ಕನ್ನಡ ಭಾಷೆಯ ಸಂಶೋಧನಾ ಗ್ರಂಥಗಳ ಕೊರತೆ ಎದ್ದು ಕಾಣುತ್ತದೆ.

ವಿಜಯನಗರ ಸಾಮ್ರಾಜ್ಯದ ಕುರಿತು ಇದುವರೆಗೆ ಅನೇಕ ಕೃತಿಗಳು ಪ್ರಕಟಗೊಂಡಿದ್ದರೂ ಅವುಗಳಲ್ಲಿ ಹೆಚ್ಚಿನ ಕೃತಿಗಳು ಆಂಗ್ಲಭಾಷೆಯಲ್ಲಿ ರಚನೆಗೊಂಡಿವೆ. ಇವುಗಳಲ್ಲಿ ಹಲವು ಗ್ರಂಥಗಳು ಬೇರೆ ಬೇರೆ ಅಧ್ಯಯನದ ದೃಷ್ಟಿಕೋನವನ್ನು ಇಟ್ಟುಕೊಂಡು ಕೈಗೊಂಡಿರುವ ಗ್ರಂಥಗಳಾಗಿವೆ. ಅದರಲ್ಲಿ ರಾಜಕೀಯ ಚಿತ್ರಣ, ಧಾರ್ಮಿಕ ಚಿತ್ರಣ, ದೇವಾಲಯದ ವಾಸ್ತುವಿಶೇಷವನ್ನು ಕುರಿತಾಗಿ ಅಧ್ಯಯನ ಮಾಡಿರುವುದು ಹಾಗೂ ಒಂದು ರಾಜಮನೆತನದ ಒಟ್ಟು ಪ್ರಸಿದ್ಧ ಅರಸರನ್ನು ಕುರಿತು ಅವನ ಜೀವನಚರಿತ್ರೆಯನ್ನು ವಿಶ್ಲೇಷಿಸುವ ಅಧ್ಯಯನದ ಒಂದು ಸಾಂಸ್ಕೃತಿಕ ಪರಂಪರೆಯನ್ನಿಟ್ಟಿಕೊಂಡು ರಚಿಸಿರುವ ಗ್ರಂಥ ಮೂರ್ತಿಶಿಲ್ಪಕಲೆಗಳನ್ನು ಮುಖ್ಯವಾಗಿ ಸಿದ್ಧಪಡಿಸಿದ ಗ್ರಂಥ ಜಿಲ್ಲೆಯಲ್ಲಿನ ಹಲವು ದೇವಾಲಯಗಳನ್ನು ಕುರಿತಂತೆ ರಚಿಸಿರುವ ಗ್ರಂಥ ಇಡೀ ರಾಜ್ಯವನ್ನು ಅಧ್ಯಯನ ವ್ಯಾಪ್ತಿಗೆ ಸೇರಿಸಿಕೊಂಡು ಅಲ್ಲಿನ ಎಲ್ಲಾ

ದೇವಾಲಯಗಳನ್ನು ಕುರಿತು ಸಮಗ್ರವಾಗಿ ಅಧ್ಯಯನ ಮಾಡಿದ ನಿಬಂಧ ಗ್ರಂಥಗಳು ಮುಂತಾದವು ವಿಜಯನಗರ ಇತಿಹಾಸವನ್ನು ತಿಳಿಯಪಡಿಸುವಲ್ಲಿ ಸಹಕಾರಿಯಾಗುತ್ತದೆ. ಇವುಗಳಲ್ಲಿನವು ಅಂದಿನ ಸಮಕಾಲೀನ ಚಾರಿತ್ರಿಕ ಸಾಂಸ್ಕೃತಿಕ ಚಿತ್ರಣವನ್ನು ನೀಡುವ ಮಹತ್ವವಾದ ಗ್ರಂಥಗಳಾಗಿವೆ. ಇವುಗಳಲ್ಲಿ 'ಅನಿತಾ ವರ್ಗಿಸ್ ಅವರ 'Religious traditions at Vijayanagara',[೯] ಅಗ್ನಿ ಎಲ್. ಡೆಲ್ಲಾಪಿಕೋಲಾ ಮತ್ತು ಇತರರು ರಚಿಸಿರುವ 'Sculpture Vijayanagara Iconography & style',[೧೦] ಭಾರ್ಗವಿ ಶಿವಯ್ಯ ಅವರ 'Krishnadevaraya his life and achievements',[೧೧] ಕೆ.ಎಂ.ಸುರೇಶ ಅವರ 'Sculptural Art of Hampi',[೧೨] ಆರ್.ಎನ್.ಸಲೆಟೂರೇ 'Vijayanagara Art',[೧೩] ಎಸ್. ರಾಜಶೇಖರ ಅವರ 'Karnataka Architecture',[೧೪] ಸಿ.ಎಸ್. ಪಾಟೀಲ್ ಅವರ 'Temples of Bellary and Raichur District'[೧೫] ಗ್ರಂಥಗಳಲ್ಲಿ ನಿಬಂಧಕಾರರು ತಮ್ಮದೆ ಆದ ವ್ಯಾಪ್ತಿಯಲ್ಲಿ ವಿಜಯನಗರದ ಹಲವು ಮುಖಗಳನ್ನು ಕುರಿತು ಸೂಕ್ಷ್ಮವಾಗಿ ಅಧ್ಯಯನ ಕೈಗೊಂಡ ವಿಶ್ಲೇಷಿಸಿದ್ದಾರೆ.

ಶೇಷಶಾಸ್ತ್ರಿ ಆರ್. ಅವರ 'ಕರ್ನಾಟಕದ ವೀರಗಲ್ಲುಗಳು'[೧೬] (೧೯೮೨) ಎಂಬ (ಪಿಎಚ್.ಡಿ.) ಗ್ರಂಥದಲ್ಲಿ ವೀರಗಲ್ಲಿನ ಉಗಮ ಮತ್ತು ವಿಕಾಸದೊಂದಿಗೆ ಇತಿಹಾಸದಲ್ಲಿ ಅವುಗಳ ಪಾತ್ರವೇನು ? ಎಂಬುದರ ಬಗ್ಗೆ ವಿವರವಿದೆ. ಇದರಲ್ಲಿ ವೀರಗಲ್ಲುಗಳ ಪಾಠ ಮತ್ತು ಶಿಲ್ಪವನ್ನು ಮುಖ್ಯವಾಗಿ ಗಮನದಲ್ಲಿಟ್ಟುಕೊಂಡು ಸಾಂಸ್ಕೃತಿಕ ಮತ್ತು ಸಾಮಾಜಿಕ ಅಂಶಗಳನ್ನು ಗುರುತಿಸಿ ವಿಶ್ಲೇಷಿಸಿದ್ದಾರೆ. ಶೇಠೆ ಬಿ.ಎಸ್. ಅವರ 'ಕರ್ನಾಟಕದಲ್ಲಿ ಸತಿಪದ್ಧತಿ' (೧೯೯೧) ಎಂಬ ಪಿಎಚ್.ಡಿ. ಗ್ರಂಥದಲ್ಲಿ[೧೭] ಕರ್ನಾಟಕದಲ್ಲಿ ಸತಿಪದ್ಧತಿಯ ಉಗಮ ಮತ್ತು ವಿಕಾಸದೊಡನೆ ಅವರ ಅಂತಿಮ ಹಂತದವರೆಗಿನ ವಿಮರ್ಶೆಯನ್ನು ನೀಡಿದ್ದಾರೆ. ಪ್ರಪಂಚದಾದ್ಯಂತ ಯಾವ ರೀತಿಯಲ್ಲಿ ಸತಿಪದ್ಧತಿ ಇದ್ದಿತೆಂಬುದನ್ನು ಉದಾಹರಣೆಗಳ ಸಹಿತ ವಿವರಿಸಿದ್ದಾರೆ. ಶಾಸನ ಪಾಠ ಮತ್ತು ಶಿಲ್ಪ ಮತ್ತು ಲಕ್ಷಣಗಳ ಜೊತೆಗೆ ಹಲವು ಸಾಹಿತ್ಯಾಧಾರಗಳನ್ನು ಬಳಸಿಕೊಂಡು ಸತಿಪದ್ಧತಿಯ ವಿವರಣೆಯನ್ನು ನೀಡಿದ್ದಾರೆ.

ಚಿದಾನಂದಮೂರ್ತಿರವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಮತ್ತು ವೀರಗಲ್ಲುಗಳು ಮತ್ತು ಮಾಸ್ತಿಗಲ್ಲುಗಳು ಎಂಬ ಪುಸ್ತಕಗಳಲ್ಲಿ ಸವಿವರವಾದ ಮಾಹಿತಿಯನ್ನು ಒದಗಿಸಿದ್ದಾರೆ.[೧೮] ಈ ಕೃತಿಗಳ ಸಂಶೋಧನೆ ಗ್ರಂಥಗಳ ಸ್ಫೂರ್ತಿಯಾಗಿರುವುದುಂಟು. ಇದೇ ರೀತಿಯಲ್ಲಿ ಶೆಟ್ಟರ್ ಎಸ್. ಅವರ 'ಮೆಮೋರಿಯಲ್ ಸ್ಟೋನ್',[೧೯] ಪರಮಶಿವಮೂರ್ತಿ ಡಿ.ವಿ. ಅವರ 'ಕನ್ನಡ ಶಾಸನಶಿಲ್ಪ',[೨೦] ರಮೇಶ ಕೆ.ವಿ. ಅವರ 'ಕರ್ನಾಟಕ ಶಾಸನ ಸಮೀಕ್ಷೆ',[೨೧] ಹಿರೇಮಠ ಬಿ.ಆರ್. ಅವರ 'ವೀರಗಲ್ಲುಗಳು',[೨೨] ಕಲಬುರ್ಗಿ ಎಂ.ಎಂ. ಅವರ 'ಸಮಾಧಿ-

ಬಲಿದಾನ–ವೀರಮರಣ ಸ್ಮಾರಕಗಳು'[೨೬] ಮುಂತಾದ ಗ್ರಂಥಗಳು ವೀರಗಲ್ಲು ಮತ್ತು ಮಹಾಸತಿಕಲ್ಲುಗಳ ಬಗ್ಗೆ ವಿವರಣೆಯನ್ನು ನೀಡುತ್ತವೆ. ಈ ಹಿನ್ನೆಲೆಯಲ್ಲಿ ಹಾವೇರಿ ಜಿಲ್ಲೆಯ ಕೆಲವು ಮುಖ್ಯವಾದ ಸಂಗತಿಗಳನ್ನುಳ್ಳ ಶಾಸನಸಹಿತ ವೀರಗಲ್ಲು ಮಹಾಸತಿಕಲ್ಲು ಮತ್ತು ನಿಷದಿಕಲ್ಲುಗಳ ಬಗ್ಗೆ ಆಯಾ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಡಾ. ಬಿ.ಆರ್. ಹಿರೇಮಠ 'ಶಾಸನ ಅಧ್ಯಯನ' (೨೦೧೨) ಎಂಬ ಗ್ರಂಥವು ಅತ್ಯಮೂಲ್ಯವಾಗಿದ್ದು ಇದರಲ್ಲಿ[೨೭] ಶಾಸನಗಳು, ನಿಷಧಿಗಳು, ವರ್ತಕರು, ಸುಂಕ, ಮಾರಾಟ, ಮಧ್ಯಕಾಲೀನ ಕರ್ನಾಟಕದ ವರ್ತಕರ ದಾನಕಾರ್ಯಗಳು, ನೇಕಾರರು, ದೇವದಾಸಿಗಳು, ಧಾರ್ಮಿಕ ಮತ್ತು ಆರ್ಥಿಕ ಹಾಗೂ ಸಾಮಾಜಿಕ ವಿಷಯಗಳು ಸಂಬಂಧಿಸಿದಂತೆ ಅತ್ಯುಪಯುಕ್ತ ಮಾಹಿತಿಯನ್ನು ನೀಡಲಾಗಿದ್ದು ಇದು ಒಟ್ಟು ೨೬೯ ಪುಟಗಳನ್ನು ಒಳಗೊಂಡ ಗ್ರಂಥವಾಗಿದೆ.

ಡಾ. ಹೆಚ್. ಗುಡ್ಡದೇಶ್ವರಪ್ಪರವರ 'ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ'[೨೮] (೨೦೧೦) ಎಂಬ ಪಿಎಚ್.ಡಿ. ಗ್ರಂಥವು ೨೨೨ ಪುಟಗಳನ್ನು ಒಳಗೊಂಡಿದ್ದು, ರಾಜಕೀಯ, ಆರ್ಥಿಕ, ಆಡಳಿತಪದ್ಧತಿ, ಆರ್ಥಿಕ ಪರಿಸ್ಥಿತಿ, ಸಮಾಜ ಮತ್ತು ಸಂಸ್ಕೃತಿ, ಧಾರ್ಮಿಕ ಪರಿಸ್ಥಿತಿ ಹಾಗೂ ಶಾಸನೋಕ್ತ ದೇವಾಲಯಗಳು, ಶಾಸನಗಳಲ್ಲಿ ಗ್ರಾಮನಾಮಗಳು ಮತ್ತು ಸಮಾರೋಪ, ರಾಜರ ವಂಶಾವಳಿ, ನಕಾಶೆಗಳು, ದೇವಾಲಯಗಳ ರೇಖಾಚಿತ್ರಗಳು, ಗ್ರಂಥಸೂಚಿಯನ್ನು ಒಳಗೊಂಡ ಸಾಂಸ್ಕೃತಿಕ ಹಿನ್ನೆಲೆಯ ಕೃತಿಯಾಗಿದ್ದು ಸಂಶೋಧಕರಿಗೆ ಅತ್ಯಮೂಲ್ಯ ಕೃತಿಯಾಗಿದೆ.

ಡಾ. ಸಿದ್ಧಲಿಂಗಪ್ಪ ಕೊಟ್ನಕಲ್‌ರವರ 'ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ' (೨೦೧೦) ಎಂಬ ಗ್ರಂಥದಲ್ಲಿ[೨೯] ಕೊಪ್ಪಳ ಜಿಲ್ಲೆಯ ಶಾಸನಗಳ ಸಮಗ್ರ ಅಧ್ಯಯನ, ರಾಜಕೀಯ, ಆಡಳಿತ, ಧಾರ್ಮಿಕ, ಶೈಕ್ಷಣಿಕ ದೇವಾಲಯಗಳು, ಸಾಮಾಜಿಕ ವ್ಯವಸ್ಥೆ, ಶಾಸನಗಳು, ಪಾರಿಭಾಷಿಕ ಮತ್ತು ಸಾಂಸ್ಕೃತಿಕ, ಛಂದಸ್ಸು, ಸ್ಥಳನಾಮಗಳ ಅಧ್ಯಯನ, ಸಮಾರೋಪ, ಗ್ರಂಥಋಣ, ಶಾಸನಗಳ ಪಡಿಅಚ್ಚು, ಭಾವಚಿತ್ರವನ್ನೊಳಗೊಂಡಂತೆ ಸಮಗ್ರವಾಗಿ ಅಭ್ಯಸಿಸಿ ಹೊರತಂದಿರುವ ಕೃತಿಯು ಅತ್ಯಂತ ಮಹತ್ವದ್ದಾಗಿದೆ.

ಹೆಚ್. ತಿಪ್ಪೇರುದ್ರಸ್ವಾಮಿಯವರ 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ' (೨೦೧೦) ಎಂಬ ಗ್ರಂಥವು ಸಂಶೋಧಕರಿಗೆ ಅತ್ಯಂತ ಉಪಯುಕ್ತವಾದ ಮಾಹಿತಿ ನೀಡುವ ಕೃತಿಯಾಗಿದ್ದು[೩೦] ಇದರಲ್ಲಿ ಭಾರತೀಯ ಸಂಸ್ಕೃತಿ, ಕರ್ನಾಟಕ ರಾಜ್ಯ, ಕನ್ನಡ ಜನಪದ, ಶಾಸನಗಳಲ್ಲಿ ಸಂಸ್ಕೃತಿ, ಸಾಹಿತ್ಯದಲ್ಲಿ ಸಂಸ್ಕೃತಿ, ಸಾಹಿತ್ಯದಲ್ಲಿ ಸಂಸ್ಕೃತಿ, ಜಾನಪದ ಸಾಹಿತ್ಯ, ವಾಸ್ತುಶಿಲ್ಪ ಮತ್ತು ಶಿಲ್ಪ ಸಂಗೀತ ಮತ್ತು ನೃತ್ಯ ಮತ್ತು ಸಾಹಿತ್ಯ ಕಲೆ ಹೀಗೆ ಒಂಭತ್ತು ಅಧ್ಯಾಯಗಳನ್ನು ಒಳಗೊಂಡಿದ್ದು ಕರ್ನಾಟಕದ ಸಾಂಸ್ಕೃತಿಕ ಜಗತ್ತಿನ ಅಧ್ಯಯನ ಹಿನ್ನೆಲೆಯಲ್ಲಿ ಸಂಶೋಧನಾತ್ಮಕವಾಗಿ ಅಧ್ಯಯನ

ನಡೆಸುವ ಇತಿಹಾಸ ಆಸಕ್ತಿ ಹೊಂದಿರುವರಿಗೆ ಪ್ರಸ್ತುತದಲ್ಲಿ ಸ್ಪರ್ಧಾತ್ಮಕವಾಗಿ ಅಭ್ಯಸಿಸುವಾಗ ಅಮೂಲ್ಯ ಗ್ರಂಥ ಮತ್ತೊಂದಿಲ್ಲ ಎಂಬಂತೆ ಒಟ್ಟು ೮೧೬ ಪುಟಗಳನ್ನು ಹೊಂದಿದ ಕೃತಿಯಾಗಿದೆ.

ಡಿ.ಎಂ. ನಾಗರಾಜುರವರ 'ಕಲ್ಯಾಣ ಚಾಲುಕ್ಯರ ಶಾಸನಗಳ ಸಾಂಸ್ಕೃತಿಕ ಅಧ್ಯಯನ' (೨೦೧೨) ಎಂಬ ಗ್ರಂಥವು[೨೮] ಧಾರ್ಮಿಕ, ಸಾಮಾಜಿಕ, ಆರ್ಥಿಕ, ವಿದ್ಯಾಭ್ಯಾಸ ಪದ್ಧತಿ, ದೇವಾಲಯಗಳ ಸಮಾರೋಪ ಛಾಯಾಚಿತ್ರಗಳು, ಗ್ರಂಥಋಣ ಶಾಸನಗಳ ಸೂಚಿಪಟ್ಟಿಗಳನ್ನೊಳಗೊಂಡಂತೆ, ಶಾಸನಗಳ ಹಿನ್ನೆಲೆಯಲ್ಲಿ ಇತಿಹಾಸವನ್ನು ಹೊಂದಿದ ಗ್ರಮಥವಾಗಿದ್ದು ಇದು ಒಟ್ಟು ೩೫೭ ಪುಟಗಳನ್ನು ಒಳಗೊಂಡಿದೆ.

ಭಾರತೀಯ ವಿದ್ವಾಂಸರುಗಳಾದ ಪಿ.ಕೆ. ಆಚಾರ್ಯ, ಎನ್. ವೆಂಕಟರಮಣ, ಅಗರವಾಲ್, ಕೆ.ಟಿ. ಮಹಾಲಿಂಗಂ ಮುಂತಾದವರು ಮತ್ತು ವಿದೇಶಿ ಪಾಶ್ಚಾತ್ಯ ವಿದ್ವಾಂಸರುಗಳಾದ ಜೇಮ್ಸ್‌ಫರ್ಗ್ಯೂಸನ್, ಹೆನ್ರಿಕಲ್ಸ್, ಇ.ಬಿ. ಹಾವಲ್ ಮುಂತಾದವರು ದೇವಾಲಯಗಳ ಸಾಂಸ್ಕೃತಿ ಪರಿಸರದ ಕುರಿತಾದ ಕೆಲವು ಅಧ್ಯಯನ ಮಾಡಿದ್ದಾರೆ. ಇವೆಲ್ಲ ಅಧ್ಯಯನಗಳ ಮುಖ್ಯವಾಗಿ ದೇವಾಲಯಗಳ ಸಂಸ್ಕೃತಿ, ಪರಿಸರ, ಧಾರ್ಮಿಕ ಮತ್ತು ಸಾಂಸ್ಕೃತಿಕ ವಾಸ್ತುಶಿಲ್ಪದ ಮಹತ್ವವನ್ನು ಕುರಿತು ವ್ಯಾಪಕವಾದ ಅಧ್ಯಯನ ನಡೆದಿರುವುದು ಕಂಡುಬರುತ್ತದೆ.

ದೇವಾಲಯಗಳ ಮತ್ತು ಶಾಸನಗಳನ್ನು ಕುರಿತಂತೆ ಈವರೆಗಿನ ಅಧ್ಯಯನವು ಗಮನಿಸಿದರೆ ಅಧ್ಯಯನವು ಎರಡು ರೀತಿಯಲ್ಲಿ ನಡೆದಿವೆ. ಮೊದಲನೆಯದಾಗಿ ವಾಸ್ತುಶಿಲ್ಪವನ್ನು ಪ್ರಧಾನವಾಗಿ ಗಮನಿಸಿ ನಡೆಸಿದ ಅಧ್ಯಯನ; ಎರಡನೆಯದಾಗಿ ದೇವಾಲಯಗಳಿಗೆ ಸಂಬಂಧಿಸಿದಂತೆ ಶಾಸನಗಳನ್ನು ಆಧರಿಸಿ ದೇವಾಲಯ ವಿವಿಧ ಚಟುವಟಿಕೆಗಳತ್ತ ಬೆಳಕು ಚೆಲ್ಲುವ ಅಧ್ಯಯನ ನಡೆಸಿದೆ. ಶಿಲ್ಪಸೂತ್ರಗಳು, ಆಗಮಗಳು, ಮಾಯಮತ, ಮಾನಸಾರ ಇತ್ಯಾದಿಗಳು ದೇವಾಲಯ ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳ ಬಗ್ಗೆ ವಿವರಿಸುವ ಪ್ರಾಚೀನ ಗ್ರಂಥಗಳು ಅದರಂತೆ ವಾಸ್ತುಶಿಲ್ಪ ಕುರಿತು ಜೇಮ್ಸ್‌ಫರ್ಗ್ಯೂಸನ್,[೨೯] ಅಲೆಗ್ಸಾಂಡರ್ ರೀ, ಹೆನ್ಸಿಕಕನ್ಸ್ ಪಸಿಚಾನ್ಸ್ ಸ್ಟೆಲ್ಲಾಕ್ರಾಂರಿಚ್ ಮುಂತಾದ ಪಾಶ್ಚಾತ್ಯ ವಿದ್ವಾಂಸರು ಮತ್ತು ಭಾರತೀಯ ವಿದ್ವಾಂಸರಾದ ಆನಂದ.ಕೆ., ಕುಮಾರಸ್ವಾಮಿ 'ಇಂಡಿಯನ್ ಟೆಂಪಲ್ ಫಾರ್ಮ್' ೧೯೭೭, ಗ್ರಂಥದಲ್ಲಿ ಎಂ.ವಿ. ಥಾಕೆ ಅವರು 'ವಾಸ್ತುಶಿಲ್ಪ' ಗ್ರಂಥಗಳು ಸೂಚಿಸುವ[೩೦] ನಾಗರ, ದ್ರಾವಿಡ ವೇಸರ, ಭೂಮಿಜ ಹಾಗೂ ಕಳಿಂಗ ಶೈಲಿಯ ದೇವಾಲಯ ಮಾದರಿಗಳನ್ನು ಕನ್ನಡ ಶಾಸನಗಳಲ್ಲಿ ಗುರುತಿಸಿದ್ದಾರೆ.

ಆ್ಯಡಮ್‌ಹ್ಯಾನ್ಸಿ ಅವರ 'ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್, ದ ಕರ್ನಾಟಕ ದ್ರಾವಿಡ ಟ್ರೆಡಿಶನ್' ೧೯೯೫, ಗ್ರಂಥವು[೩೧] ಬಾದಾಮಿ ಚಾಲುಕ್ಯರ ಕಾಲದಿಂದ ಹೊಯ್ಸಳರ ಕಾಲದವರೆಗೆ

ದೇವಾಲಯಗಳ ಊರ್ಧ್ವಮುಖ ರಚನೆಗಳಾದ ಅಧಿಷ್ಠಾನ ಭಿತ್ತಿ, ಪ್ರಸ್ತರ, ಹಾರಗಳು, ಶಿಖರ ಹಾಗೂ ಸ್ತೂಪಗಳಲ್ಲಿ ಹಂತ ಹಂತವಾಗಿ ಆದ ಮಾರ್ಪಾಟುಗಳನ್ನು ವಿವರಿಸುವಲ್ಲಿ ಸಫಲವಾಗಿವೆ. ಕೂಟ ಎಡಿಕ್ಯೂಲ್ ಎಂದು ಹಾರಗಳ ಒಂದೊಂದು ಭಾಗಗಳೊಂದಿಗೆ ಭಿತ್ತಿಯ ಭಾಗವನ್ನು ಸೇರಿಸಿ ವಿವರಿಸುವ ರೀತಿಯ ಹೆಚ್ಚು ಸ್ಪಷ್ಟತೆಯನ್ನು ಒದಗಿಸುತ್ತದೆ. ಈ ಗ್ರಂಥವು ಕೇವಲ ಊರ್ಧ್ವಮುಖ ರಚನೆಗಳಿಗೆ ಸೀಮಿತವಾಗಿದ್ದು ದೇವಾಲಯಗಳ ತಿರ್ಯಙ್ಮುಖ ರಚನೆಗಳನ್ನ ಅಭ್ಯಸಿಸಿಲ್ಲ.

ಜೆ. ಜ್ಞಾನಾನಂದ ಅವರ ವಾಸ್ತು ಪುರುಷ ನೆಲೆ ಹಿನ್ನೆಲೆ ೧೯೯೨ 'ಶಿಲ್ಪದರ್ಶ' ಸಂಪುಟ – ೧ ೨೦೦೧, ಹಾಗೂ ಸಂಪುಟ – ೨, ೨೦೦೨ರಲ್ಲಿ ದೇವಾಲಯ ವಾಸ್ತುಶಿಲ್ಪ ಕುರಿತು ಮತ್ತು ಪ್ರತಿಮಾ ಲಕ್ಷಣಗಳ ವಿವರಣೆ ಇದೆ.[೩೨] ಇದೇ ನಿಟ್ಟಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ 'ಕರ್ನಾಟಕದ ನೆಲೆಗಳು' ಎಂಬ ಮಾಲಿಕೆಯಲ್ಲಿ ನಾಲ್ಕನೆಯ ಸಂಪುಟವಾದ ವಾಸ್ತು ೧೯೯೩ ಗ್ರಂಥದಲ್ಲಿ ಬಾ.ರಾ. ಗೋಪಾಲ ಅವರು ದೇವಾಲಯ ವಾಸ್ತುಶಿಲ್ಪದ 'ಆರಂಭಕಾಲ', 'ಉಚ್ಛ್ರಾಯಕಾಲ' ಹಾಗೂ 'ಅನವತಿಯ ಕಾಲ' ಎಂದು ವಿಭಾಗಿಸಿ ಚರ್ಚಿಸಿದ್ದಾರೆ. ಜೊತೆಗೆ ವಾಸ್ತುಶಾಸ್ತ್ರದ ಪ್ರಾಚೀನ ಗ್ರಂಥಗಳ ಬಗ್ಗೆ ಪ್ರತ್ಯೇಕ ಅಧ್ಯಾಯವನ್ನು ಮಾಡಿ ವಿವರಿಸಿದ್ದಾರೆ.[೩೩] ಇದು ಸಂಶೋಧಕರಿಗೆ, ಮಾರ್ಗದರ್ಶಕರಿಗೆ ನಿಲುಕುತ್ತದೆ. ವಾಸ್ತುಶಾಸ್ತ್ರದ ಪ್ರಾಚೀನ ಗ್ರಂಥಗಳನ್ನು ಆಧರಿಸಿ ದೇವಾಲಯಗಳ ಹೊರರಚನೆಗಳನ್ನು ಅಧ್ಯಯಿಸುವ ಕೆಲಸವಾಗಿದೆ. ಕೂ.ಸ.ಅಪರ್ಣ ಅವರ[೩೪] 'ದೇವಾಲಯ ವಾಸ್ತುಶಿಲ್ಪ ಪರಿಚಯ' ೧೯೯೯, ಹಾಗೂ ಎಂ.ಎನ್. ಪ್ರಭಾಕರ ಅವರ[೩೫] 'ದೇವಾಲಯ ವಾಸ್ತು ಚಂದ್ರಿಕೆ' ೨೦೦೦, ಪುಸ್ತಕಗಳು ಉಪಯುಕ್ತವಾಗಿವೆ.

ನನ್ನ ಸಂಶೋಧನಾ ಶೀರ್ಷಿಕೆಗೆ ಸಂಬಂಧಿಸಿದಂತೆ ಮುಖ್ಯವಾಗಿ 'South Indian Inscriptions, Volume XVIII, published by the director General Archaeological Survey of India, New Delhi – ೧೧' ಕನ್ನಡ ವಿಷಯ ವಿಶ್ವಕೋಷ, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು, ಸಿ. ಮಹಾದೇವ[೩೬] ಇತರರು ಕರ್ನಾಟಕ ದೇವಾಲಯಗಳ ಕೋಶ, ಹಾವೇರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯, ಡಾ. ಜಿ. ಕುಲಕರ್ಣೀ, 'ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು'[೩೭] ೨೦೦೭–೦೮, ಹನುಮಾಕ್ಷಿಗೋಗಿ – 'ಅನುಶಾಸನ'[೩೮] – ೨೦೦೨, ಭೋಜರಾಜಪಾಟೀಲ, 'ನಾಗರಖಂಡ – ೭೦ ಒಂದು ಅಧ್ಯಯನ'[೩೯] – ೧೯೯೫, ಜೆ.ಎಂ. ನಾಗಯ್ಯ 'ಕಲಕೇರಿ'[೪೦] – ೧೯೯೫, 'ಧಾರವಾಡ ಜಿಲ್ಲೆ ಶಾಸನ ಸೂಚಿ' : ಎಂ.ಎಂ.ಕಲಬುರ್ಗಿ(ಸಂ.): ೧೯೭೫.[೪೧] ಕುಲಕರ್ಣಿ ಸತೀಶ್, 'ಹಾವೇರಿ ತಾಲೂಕು ದರ್ಶನ' – ೧೯೮೭.[೪೨] ಚೆನ್ನಕ್ಕ ಎಲಿಗಾರ,

'ಬಂಕಾಪುರಶೋಧ', ೧೯೯೦,[೪೩] ಚೆನ್ನಕ್ಕ ಪಾವಟೆ, 'ರಾಷ್ಟ್ರಕೂಟ ಸಾಮಂತ ಚಲ್ಲಕೇತನರು' – ೧೯೯೯,[೪೪] ಚೆನ್ನಕ್ಕ ಪಾವಟೆ, 'ಹಾನಗಲ್ಲ ಕದಂಬರು' – ೧೯೯೦, ವಾಸುದೇವ ಬಡಿಗೇರ, 'ಹಾನಗಲ್ಲು' – ೨೦೦೮, ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಜಯದೇವಪ್ಪ ಜೈನಕೇರಿ – 'ಕರ್ನಾಟಕ ಶಿಲ್ಪ ಸಂಸ್ಕೃತಿ'[೪೫] (ನಾ ಕಂಡ ದೇಗುಲಗಳು) ಶಾಸನ ಅಧ್ಯಯನಗಳು – ಸಂಪುಟ ೩ – ೨೦೦೪, ಇತಿಹಾಸ ದರ್ಶನ, ಸಂಪುಟಗಳು – ೪, ೧೯೯೯, ಲಿಂಗರಾಜು ಕಮ್ಮಾರ, ಗಿರಿಜಾದುರ್ಗನ ಮಠ, 'ಹೆಬ್ಬಾಗಿಲು' – ೨೦೦೭,[೪೬] ಯಾಸೀನ್ ಖುದ್ದೂಸಿ, ಸೀತಾರಾಮ ಜಹಗೀರ್‌ದಾರ್,[೪೭] 'ಕರ್ನಾಟಕ ಪರ್ಷಿಯನ್ ಮತ್ತು ಉರ್ದು ಶಾಸನಗಳು', ಚನ್ನಬಸವಣ್ಣ ತೆವರ ಮೆಳ್ಳಿಹಳ್ಳಿ, 'ಸವಣೂರು ತಾಲೂಕು ದರ್ಶನ' – ೧೯೮೭,[೪೮] ಅಪ್ರಕಟಿತ ಸಂಶೋಧನಾ ನಿಬಂಧಗಳು (ಪಿಎಚ್.ಡಿ. ಮತ್ತು ಎಂ.ಫಿಲ್) ಅಪ್ಪಣ್ಣ ಎನ್. ಹಂಜೆ 'ಶಿಗ್ಗಾವಿ ತಾಲೂಕು ಪುರಾತತ್ವ ಅಧ್ಯಯನ' – ೨೦೦೭, ಪಿಎಚ್.ಡಿ., ಎಸ್.ಎಸ್. ಬಂದವ್ವನವರ, 'ಹಾವೇರಿ ಜಿಲ್ಲೆಯ ಜನಪದ ಕಾವ್ಯ ಪ್ರಕಾರಗಳು',[೪೯] ಪಿಎಚ್.ಡಿ ೨೦೧೦, ಗೀತಾ ಎಸ್. ತಹಸೀಲ್ದಾರ್, 'ಹಾವೇರಿ ಜಿಲ್ಲೆಯ ಸ್ಥಳನಾಮಗಳ ಭಾಷಾನಾಮಗಳು, ಭಾಷಾ ವೈಜ್ಞಾನಿಕ ಅಧ್ಯಯನ' ಪಿಎಚ್.ಡಿ. ೨೦೧೦,[೫೦] ವೈ.ವೈ. ಮರಳೀಹಳ್ಳಿ, 'ಕರ್ನಾಟಕದಲ್ಲಿ ಅಭಿವೃದ್ಧಿ ರಾಜಕೀಯ ಹಾವೇರಿ ಜಿಲ್ಲೆಯ ಒಂದು ಅಧ್ಯಯನ ೨೦೦೭, ಪಿಎಚ್.ಡಿ.[೫೧] ಜಿ.ಕೆ. ಹಿರೇಮಠ, 'ಹಾನಗಲ್ಲು ಶ್ರೀಕುಮಾರಸ್ವಾಮಿಗಳು' ಪಿಎಚ್.ಡಿ., ಮಲ್ಲಿಕಾರ್ಜುನ ಹುಲಿಗಣ್ಣನವರ, 'ಹಾನಗಲ್ ತಾಲೂಕು ದರ್ಶನ' ೧೯೮೭,[೫೨] ಕರಿಬಸವಯ್ಯ ಆರ್., 'ಹಿರೇಕೆರೂರು ಪ್ರದೇಶದ ಮೂರ್ತಿಶಿಲ್ಪ' ೧೯೯೮,[೫೩] ಎಂ.ಫಿಲ್., ವೈ.ವೈ. ಮರಳಿಹಳ್ಳಿ, 'ನಗರ ಸರ್ಕಾರಗಳಲ್ಲಿ ಅಭಿವೃದ್ಧಿ ರಾಜಕೀಯ – ಸವಣೂರು ನಗರ ಪುರಸಭೆ ಒಂದು ಅಧ್ಯಯನ' ೨೦೦೭,[೫೪] ಎಂ.ಫಿಲ್., ಪಾಟೀಲ ಮಂಜುನಾಥ ಎಚ್., 'ರಾಣೆಬೆನ್ನೂರು ತಾಲೂಕು ಶಾಸನಗಳ ಸಾಂಸ್ಕೃತಿಕ ಅಧ್ಯಯನ' ೧೯೯೮,[೫೫] ರಮೇಶ ನಾಯಕ, 'ಹಾವೇರಿ ಜಿಲ್ಲೆಯ ಸಾಂಸ್ಕೃತಿಕ ಅಧ್ಯಯನ' ೧೯೯೭,[೫೬] ವಿನೋದಾ ಪಾಟೀಲ, 'ಪಾನಂಗಲ್ಲಯ್ಯೂರು – ಒಂದು ಸಾಂಸ್ಕೃತಿಕ ಅಧ್ಯಯನ' ೧೯೯೬,[೫೭] ಸಾಲಿಮಠ ಸುರೇಶ, 'ರಾಣೆಬೆನ್ನೂರು ಪ್ರದೇಶದ ದೇವಾಲಯಗಳು ಒಂದು ಅಧ್ಯಯನ' – ೧೯೯೮,[೫೮] ನವಲಗುಂದ ಗುರುರಾಜ್, 'ಶಿಗ್ಗಾವಿ ತಾಲೂಕಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ'(೨೦೦೮).[೫೯] ಅರಿಷಣಗುಪ್ಪೆ ಬಸವರಾಜ್, 'ತಿಳುವಳ್ಳಿ ಪ್ರದೇಶದ ದೇವಾಲಯಗಳು ಒಂದು ಅಧ್ಯಯನ – ೧೯೯೮,[೬೦] ಸೊಟ್ಟಮ್ಮನವರ ವಿ.ಜಿ. 'ರಾಣೆಬೆನ್ನೂರು ಪ್ರದೇಶದ ದೇವಾಲಯಗಳು ಒಂದು ಅಧ್ಯಯನ – ೧೯೯೮,[೬೧] ಸತೀಶ್ ಕುಲಕರ್ಣಿ, 'ಕದಂಬ' ಸ್ಮರಣ ಸಂಚಿಕೆ, [೬೨] ೨೦೦೯, ಗೋವಿಂದಮೂರ್ತಿ 'ಸವಣೂರು ನವಾಬರು' ೧೯೯೯.[೬೩] ಚಾಮರಾಜ ಎಸ್. ಕಮ್ಮಾರ, ಕರೇಗೌಡ, ರು. ಕೋಣತಿ, 'ರಟ್ಟಿಪಳ್ಳಿ ಸ್ಮರಣ ಸಂಚಿಕೆ– ೨೦೧೧.[೬೪]

ಈ ಎಲ್ಲಾ ಪರಾಮರ್ಶನ ಗ್ರಂಥಗಳ ಅಧ್ಯಯನವನ್ನು ಗಮನಿಸಿದಾಗ ನನ್ನ ಶೀರ್ಷಿಕೆಗೆ ಸಂಬಂಧಪಟ್ಟ ಅಲ್ಪಸ್ವಲ್ಪ ವಿಷಯಗಳು ಉಲ್ಲೇಖಗೊಂಡಿವೆ. ಆದರೆ ಅದರ ಬಗ್ಗೆ ಪೂರ್ಣ ಅಧ್ಯಯನ ನಡೆದಿಲ್ಲ. ಆದ್ದರಿಂದ ನಾನು ಹಾವೇರಿ ಜಿಲ್ಲೆಯಲ್ಲಿರುವ ಶಾಸನಗಳು, ವೀರಗಲ್ಲು, ಮಾಸ್ತಿಗಲ್ಲು ನಿರ್ಮಿಸಿದರ ಉದ್ದೇಶ ಅದರ ಶಿಲ್ಪ, ಕಾಲ, ಯಾರ ಆಳ್ವಿಕೆ ಕಾಲದಲ್ಲಿ ನಿರ್ಮಿಸಲಾಗಿದೆ ಮತ್ತು ಯಾವ ಸ್ಥಳದಲ್ಲಿ ನಿರ್ಮಿಸಲಾಗಿದೆ ಎಂಬುದನ್ನು ಕ್ಷೇತ್ರಕಾರ್ಯ ಕೈಗೊಂಡು ಸಂಶೋಧನೆ ಮಾಡಿ ಈ ಎಲ್ಲಾ ಮಾಹಿತಿಗಳನ್ನು ಸಂಗ್ರಹಿಸಿ, ಪರಿಶೀಲಿಸಿ, ವಿಶ್ಲೇಷಿಸಿ ಅಧ್ಯಯನ ಮಾಡಿ ಸಂಕ್ಷಿಪ್ತ ಮಾಹಿತಿ ನೀಡಿದ್ದೇನೆ.

## ವ್ಯಾಪ್ತಿ:

ಯಾವುದೇ ಒಂದು ನಿರ್ದಿಷ್ಠ ಹಾಗೂ ಉದ್ದೇಶಪೂರಿತವಾದ ಸಂಶೋಧನೆ ಯಶಸ್ಸು ಕಾಣಬೇಕಾದರೆ ಆ ಸಂಶೋಧನೆಗೆ ವ್ಯಾಪ್ತಿ ಅಥವಾ ಮಿತಿ ಇರುವುದು ಬಹುಮುಖ್ಯ ಇಲ್ಲದಿದ್ದರೆ ಅಧ್ಯಯನವು ಗೊಂದಲಮಯವಾಗಿ ಸಂಶೋಧಕನನ್ನು ದಾರಿ ತಪ್ಪಿಸುತ್ತದೆ.

ನಿರ್ದಿಷ್ಠ ವ್ಯಾಪ್ತಿಯಲ್ಲಿ ರೂಪುಗೊಂಡ ಸಂಶೋಧನೆ ಮಾತ್ರ ಕ್ರಮಬದ್ಧವಾದ ಹಾಗೂ ಸ್ಪಷ್ಠವಾದ ಅಧ್ಯಯನವನ್ನು ಕಟ್ಟಿಕೊಡಲು ಸಾಧ್ಯ. ಪ್ರಸ್ತುತ ಅಧ್ಯಯನದ ಶೀರ್ಷಿಕೆಯಲ್ಲಿ ಸೂಚಿಸಿರುವಂತೆ ಸಂಶೋಧನೆಯು ಹಾವೇರಿ ಜಿಲ್ಲೆಯ ಭೂಪ್ರದೇಶಕ್ಕೆ ಮಾತ್ರ ಸೀಮಿತವಾಗಿದೆ. ಪ್ರಸ್ತುತ ಜಿಲ್ಲೆಯ ಏಳು ತಾಲ್ಲೂಕುಗಳಲ್ಲಿ ಕಂಡುಬರುವ ಶಾಸನಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹಾವೇರಿ ಜಿಲ್ಲೆಯ ಶಾಸನಗಳು ಆಧುನಿಕ ಗಡಿರೇಖೆಯಾದ ಹಾವೇರಿ ಜಿಲ್ಲೆಯ ವ್ಯಾಪ್ತಿಯನ್ನು ಮೀರಿ ನಿಂತಿವೆ. ನೆರೆಯ ಜಿಲ್ಲೆಗಳ ಕಂಡುಬರುವ ಶಾಸನಗಳನ್ನು ಸಾಂದರ್ಭಿಕವಾಗಿ ಬಳಸಿಕೊಳ್ಳಲಾಗಿದೆ. ಹೀಗಾಗಿ ಸಂಶೋಧನ ಪ್ರಬಂಧದ ಶೀರ್ಷಿಕೆ ಅನುಗುಣವಾಗಿ ಹಾವೇರಿ ಜಿಲ್ಲೆಯ ಶಾಸನಗಳನ್ನು ಆಧಾರವಾಗಿ ಇಟ್ಟುಕೊಂಡು ಆರಂಭ ಕಾಲದಿಂದ ಹಿಡಿದು ವಿಜಯನಗರ ಕಾಲದವರೆಗೂ ಅಧ್ಯಯನವನ್ನು ಮಿತಿಗೊಳಿಸಿ ಪ್ರಬಂಧವನ್ನು ಸಿದ್ಧಗೊಳಿಸಲಾಗಿದೆ.

## ಭೌಗೋಳಿಕ ಲಕ್ಷಣಗಳು:

ಹಾವೇರಿ ಜಿಲ್ಲೆಯು ಕರ್ನಾಟಕ ಇತಿಹಾಸದಲ್ಲಿ ಮಹತ್ತರವಾದ ಪಾತ್ರವಹಿಸಿದೆ. ಯಾವುದೇ ಒಂದು ಪ್ರದೇಶದ ಅಧ್ಯಯನಕ್ಕೆ ಅವಶ್ಯಕವಾಗಿ ಅಲ್ಲಿ ವಾಸ ಮಾಡುವ ಜನತೆಯ ಇತಿಹಾಸ ಹಾಗೂ ಭೌಗೋಳಿಕ ಲಕ್ಷಣ ಬಹುಮುಖ್ಯವಾಗಿ ಕಂಡುಬರುತ್ತವೆ. ಪ್ರಮುಖವಾಗಿ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಶೈಕ್ಷಣಿಕ ಚಟುವಟಿಕೆಗಳ ತವರೂರು ಎಂಬಂತೆ ಹಾವೇರಿ ಜಿಲ್ಲೆಯು ಕರ್ನಾಟಕ ರಾಜ್ಯದ ೨೬ನೇ ಜಿಲ್ಲೆಯಾಗಿ ಕರ್ನಾಟಕ ರಾಜ್ಯದಲ್ಲಿಯೇ

ನಾಲ್ಕನೇ ಸ್ಥಾನ ಪಡೆದ ಧಾರವಾಡ ಜಿಲ್ಲೆಯಿಂದ ದಿನಾಂಕ ೨೪.೦೮.೧೯೯೭ರಂದು ಪ್ರತ್ಯೇಕವಾಗಿ ಹೊಸ ಜಿಲ್ಲೆಯಾಗಿ ಮಾರ್ಪಟ್ಟು ಹಾವೇರಿಯು ಭೌಗೋಳಿಕವಾಗಿ ಎಂಟನೇ ಸ್ಥಾನವನ್ನು ಪಡೆದುಕೊಂಡಿದೆ. ಅಂದಿನಿಂದ 'ಉತ್ತರ ಕರ್ನಾಟಕದ ಹೆಬ್ಬಾಗಿಲು' ಎಂಬ ಕೀರ್ತಿಗೆ ಹೆಸರುವಾಸಿಯಾಗಿದೆ.[೬೫]

ಈ ಜಿಲ್ಲೆಯು ಉತ್ತರದಲ್ಲಿ ಧಾರವಾಡ, ಗದಗ ಜಿಲ್ಲೆಗಳು, ಪೂರ್ವದಲ್ಲಿ ಬಳ್ಳಾರಿ, ದಾವಣಗೆರೆ ಜಿಲ್ಲೆಗಳು, ಪಶ್ಚಿಮದಲ್ಲಿ ಉತ್ತರ ಕನ್ನಡ ಜಿಲ್ಲೆ, ದಕ್ಷಿಣದಲ್ಲಿ ಶಿವಮೊಗ್ಗ, ದಾವಣಗೆರೆ ಜಿಲ್ಲೆಗಳನ್ನು ಸುತ್ತುವರೆದಿದೆ. ಇದು ಬೆಳಗಾವಿ ವಿಭಾಗಕ್ಕೆ ಸೇರಿದ್ದು ಈ ಜಿಲ್ಲೆಯು ಶಿಗ್ಗಾವಿ, ಹಾವೇರಿ, ಸವಣೂರು, ಹಾನಗಲ್ಲು, ಬ್ಯಾಡಗಿ, ಹಿರೇಕೆರೂರು, ರಾಣೆಬೆನ್ನೂರು ಎಂಬ ಏಳು ತಾಲೂಕುಗಳನ್ನು ಒಳಗೊಂಡಿದ್ದು ೧೯ ಹೋಬಳಿಗಳು ೭೩೫ ಗ್ರಾಮಗಳನ್ನು ಒಳಗೊಂಡಿದ್ದು ವಿಸ್ತೀರ್ಣದಲ್ಲಿ ೪.೮೫೧ ಚ.ಕೀ. ಹೊಂದಿದ್ದು ಜನಸಂಖ್ಯೆಯಲ್ಲಿ ೧೪,೩೯,೧೧೬ ಹೊಂದಿದೆ.[೬೬]

## ನೈಸರ್ಗಿಕ ಸಂಪನ್ಮೂಲಗಳು:

೧. **ನದಿದಿವ್ಯವಸ್ಥೆ:** ಈ ಜಿಲ್ಲೆಯಲ್ಲಿ ನದಿಗಳ ಪಾತ್ರ ವಿಶಿಷ್ಟವಾಗಿದ್ದು ತುಂಗಭದ್ರಾನದಿಯು ೧೦೯ ಕಿ.ಮೀ. ವರದನದಿ ೯೪ ಕಿ.ಮೀ. ಕುಮುದಾವತಿ ೩೮ ಕಿ.ಮೀ. ಮತ್ತು ಧರ್ಮಾನದಿ ೩೫ ಕಿ.ಮೀ. ವಿಶಾಲ ವ್ಯಾಪ್ತಿಯಲ್ಲಿ ಸುತ್ತುವರಿದಿದೆ. ಹೀಗೆ ನಾಲ್ಕು ನದಿಗಳು ಹಾವೇರಿ ಜಿಲ್ಲೆಯಲ್ಲಿ ೨೭೬ ಕಿ.ಮೀ. ವಿಸ್ತಾರಗೊಂಡು ಈ ಜಿಲ್ಲೆಯ ಜನರ ನಾಡಿ ಮಿಡಿತಗಳಾಗಿವೆ. ಇವುಗಳಲ್ಲದೆ ಸಣ್ಣ ಪುಟ್ಟ ತೊರೆಗಳು ನೀರಾವರಿಗೆ ತುಂಬ ಉಪಯುಕ್ತವಾಗಿದೆ. ಶಿವಮೊಗ್ಗ ಮತ್ತು ಹಾವೇರಿ ಗಡಿಪ್ರದೇಶಗಳನ್ನು ಹೊಂದಿಕೊಂಡಂತೆ ಕಂಡುಬರುವುದ ಮದಗ – ಮಾಸೂರು ಕೆರೆ, ಐತಿಹಾಸಿಕವಾಗಿ ನಾಡಿನಾದ್ಯಂತ ಹೆಸರು ಪಡೆದಿವೆ. ಜೊತೆಗೆ ರಾಣೆಬೆನ್ನೂರು ತಾಲೂಕಿನ ಗುಡುಗರುಕೆರೆ, ಅಸುಂಡಿಕೆರೆ, ಹಾನಗಲ್ಲು ತಾಲೂಕಿನ ತಿಳುವಳ್ಳಿ ಕೆರೆ, ಹಾನಗಲ್ಲು ಆನೆಕೆರೆ, ನೆಗಳೂರಿನ ಎರಡು ಕೆರೆಗಳು ಜಿಲ್ಲೆಯ ಸಂಜೀವಿನಿಗಳಂತೆ ಇವೆ[೬೭]

೨. **ಅರಣ್ಯ ಪ್ರದೇಶ:** ನಿಸರ್ಗದ ಕೊಡುಗೆಯಾಗಿರುವ ಅರಣ್ಯಗಳು ರಾಷ್ಟ್ರದ ಪ್ರಮುಖ ಆರ್ಥಿಕತೆಯ ಸಂಪನ್ಮೂಲವಾಗಿದೆ. ರಾಣೆಬೆನ್ನೂರು ಮತ್ತು ಹಾನಗಲ್ಲು ಪ್ರಮುಖವಾಗಿ ಅರಣ್ಯ ಪ್ರದೇಶವಾಗಿದ್ದು ಕರ್ನಾಟಕ ರಾಜ್ಯದಲ್ಲಿಯೇ ಹೆಚ್ಚು ಪ್ರಸಿದ್ಧವಾದ ಕೃಷ್ಣಮೃಗ ಅಭಯಾರಣ್ಯ ಈ ಜಿಲ್ಲೆಯಲ್ಲಿದೆ. ಇದರ ಒಟ್ಟು ಅರಣ್ಯ ಪ್ರದೇಶವು ೪೭,೪೫೪ ಹೆಕ್ಟೇರ್ ಪ್ರದೇಶವನ್ನು ಹೊಂದಿ ಇಲ್ಲಿ ಕರಡಿಗಳು, ತೋಳ, ನರಿ, ಆನೆ, ಹುಲಿ, ಕಾಡುಹಂದಿ, ಚಿರತೆ, ಜಿಂಕೆಗಳು ಹಾಗೂ ನವಿಲುಗಳು ಮುಂತಾದ ಪ್ರಾಣಿ ಪಕ್ಷಿಗಳು ಕಂಡುಬರುತ್ತವೆ. ಸಾಮಾಜಿಕ ಅರಣ್ಯದಲ್ಲಿ ಬೇವಿನಮರ, ಗಂಧದ ಮರ, ಸಾಗುವಾನಿಮರ, ಬೀಟೆ, ಆಲದಮರ, ಮತ್ತಿಮರ, ಗಾಳಿಮರ,

ಹುಣಸೆಮರ, ಈಚಲಗಿಡ, ನೇರಲ ಮುಂತಾದ ಮರಗಳು ಹೆಚ್ಚಾಗಿ ಈ ಜಿಲ್ಲೆಯಲ್ಲಿ ಕಂಡುಬರುತ್ತವೆ.[೬೮]

## ವ್ಯವಸಾಯ:

ಈ ಜಿಲ್ಲೆಯ ಪ್ರಮುಖ ಕಸುಬು ವ್ಯವಸಾಯವಾಗಿದ್ದು, ಮಧ್ಯದಲ್ಲಿ ಹಾವೇರಿ ತಾಲೂಕಿನ ದಕ್ಷಿಣದಲ್ಲಿರುವ ಬ್ಯಾಡಗಿ ತಾಲೂಕಿನ ಈ ಭೂಪ್ರದೇಶ ಕೆಲವು ಸಣ್ಣ ಗುಡ್ಡ ಬಿಟ್ಟರೆ ಇನ್ನೂ ಉಳಿದ ಭಾಗ ಸಮತಟ್ಟಾಗಿದೆ. ಈ ಭಾಗದಲ್ಲಿ ಎರೆಮಣ್ಣಿನ ಪ್ರದೇಶವು ಫಲವತ್ತಾದುದು. ಇಲ್ಲಿ ಬೇಸಾಯ ಮಳೆಯನ್ನೇ ಅವಲಂಬಿಸಿದೆ. ಇಲ್ಲಿನ ಬೆಳೆಗಳಲ್ಲಿ ಬ್ಯಾಡಗಿ ಮೆಣಸಿನಕಾಯಿ ಪ್ರಸಿದ್ಧಿ ಪಡೆದಿದೆ. ಜೊತೆಗೆ ಬಿಳಿಜೋಳ, ಹತ್ತಿ, ಶೇಂಗಾ ಮತ್ತು ಸಾಮೆಯನ್ನು ಹೆಚ್ಚಾಗಿ ಬೆಳೆಯುತ್ತಾರೆ. ಜೊತೆಗೆ ಭತ್ತ, ರಾಗಿ, ಜೋಳ ಇಲ್ಲಿನ ಪ್ರಮುಖ ಬೆಳೆಗಳು ಆಗಿದ್ದು ವಿವಿಧ ಧಾನ್ಯಗಳನ್ನು ತೋಟಗಳಲ್ಲಿ ವಿವಿಧ ಬಗೆಯ ಹಣ್ಣುಗಳನ್ನು ಬೆಳೆಯುತ್ತಾರೆ.[೬೯]

## ಹಾವೇರಿ ಐತಿಹ್ಯ:

ಹಾವೇರಿ, ಪಾವರಿ, ಹಾಹರಿ, ಹಾವೇರಿ ಎಂಬ ಬೇರೆ ಬೇರೆ ಹೆಸರುಗಳಲ್ಲಿ ಹಾವೇರಿ ಎಂಬ ಹೆಸರು ಹುಟ್ಟಿಕೊಂಡಿರಬಹುದೆಂದು ಇಲ್ಲಿನ ಸುತ್ತುಮುತ್ತ ದೊರೆಯುವ ಶಿಲಾಶಾಸನಗಳಿಂದ ತಿಳಿಯುತ್ತದೆ. ಶಾಸನದಲ್ಲಿ 'ನಳಪುರಿ'ಯೆಂದು ಉಲ್ಲೇಖವಿರುವುದರಿಂದ ನಳ ಚಕ್ರವರ್ತಿಗೂ ಸಂಬಂಧವಿತ್ತು ಎಂದು ಊಹಿಸಬಹುದು. ಮತ್ತೊಂದು ಅರ್ಥದಲ್ಲಿ ಹಾವು ಮತ್ತು ಏರಿ ಈ ಎರಡು ಶಬ್ದಗಳ ಸಂಯೋಗದಿಂದಾಗಿ ಹಾವೇರಿಯಾಗಿರಬಹುದೆಂದು ಹೇಳುತ್ತಾರೆ. ಕೃತಯುಗದಲ್ಲಿ ಈ ನಗರವನ್ನು 'ನಳಚಕ್ರವರ್ತಿ' ಕಟ್ಟಿದನೆಂದು ಕೆಲವು ಮಾಹಿತಿಗಳು ತಿಳಿಸುತ್ತವೆ.

ಕ್ರಿ.ಶ. ೯೮೦ರ (೧೦೬೭) ರಾಷ್ಟ್ರಕೂಟ ಅರಸನಾದ ಮೂರನೇ ಕೃಷ್ಣನ ಶಾಸನದಲ್ಲಿ ಚಾಲುಕ್ಯ ವಂಶದ ಅಹವಮಲ್ಲ ಒಂದನೇ ಸೋಮೇಶ್ವರನ ಕಾಲದಲಿ ಇದು ಅಗ್ರಹಾರವೆಂದು ಪೂರ್ವದಲ್ಲಿ ಮಾರ್ಪಾಡು ಆಯಿತು ಎಂದು ತಿಳಿಯುತ್ತದೆ. ಹೀಗಾಗಿ ಹನ್ನೊಂದನೇ ಶತಮಾನದಿಂದ ೧೪ನೇ ಶತಮಾನದವರೆಗೆ ಆಳಿದ ಚಾಲುಕ್ಯ ಕಲಚೂರಿ ಹೊಯ್ಸಳ ಮತ್ತು ಯಾದವರ ಕಾಲಕ್ಕೆ ಅಸ್ಥಿತ್ವದಲ್ಲಿದ್ದ ನಗರವೆಂದು ಹೇಳಬಹುದು.

ಹಾವೇರಿ ಪದದ ನಿಷ್ಪತ್ತಿ ಶಾಸನಗಳಲ್ಲಿ ವಿಶಿಷ್ಟವಾಗಿ ಕಂಡುಬಂದಿದ್ದು, ಕ್ರಿ.ಶ. ೯೬೦ರ ಒಂದು ವೀರಗಲ್ಲು ಶಾಸನದಲ್ಲಿ ಹಾವರಿಯೂರು ಎಂಬ ಉಲ್ಲೇಖವಿದೆ. ನಂತರ ಕ್ರಿ.ಶ.

೧೦೩೦ರ ಶಾಸನ ಪಾವರಿರೂಪವನ್ನು ತಿಳಿಸುತ್ತದೆ. ಕ್ರಿ.ಶ. ೧೧೫೭ರ ಹಾವೇರಿಯ ಶಾಸನವು ಹಾವರಿ, ಹಾವೇರಿ ಎಂಬ ಎರಡೂ ರೂಪಗಳನ್ನು ತಿಳಿಸುತ್ತದೆ.[೨೦]

**ಪೌರಾಣಿಕ ಹಿನ್ನೆಲೆ:**

ಮಹಾಭಾರತದ ಕಾಲದಲ್ಲಿ ಹಾನಗಲ್ಲು ವೀರಾಟ ರಾಜನ ರಾಜಧಾನಿಯಾಗಿತ್ತು ಎಂಬ ನಂಬಿಕೆಯಿತ್ತು. ಇದಕ್ಕೆ ಆಧಾರವೆಂಬಂತೆ ಕೀಚನ ಗರಡಿ ಮನೆಯೊಂದು ಇಲ್ಲಿತ್ತೆಂದು ತಿಳಿದು ಬರುತ್ತದೆ. ಹೀಗಾಗಿ ಇದು ವಿರಾಟರಾಜನ ರಾಜಧಾನಿಯಾಗಿತ್ತು. ೧೨ನೇ ಶತಮಾನದ ಒಂದು ಶಾಸನದಲ್ಲಿ ವ್ಯಕ್ತವಾಗಿದೆ. ಹಾವೇರಿ ಪಟ್ಟಣವನ್ನು ನಳಮಹಾರಾಜರು ಸ್ಥಾಪಿಸಿದರೆಂದು ತಿಳಿಯುತ್ತದೆ.

ಬಕಾಸುರ ಎಂಬ ರಾಕ್ಷಸ ವಾಸವಾಗಿದ್ದ ಎಕ ಚಕ್ರನಗರವೆಂಬುದು ಇಂದಿನ ಬಂಕಾಪುರ ಎಂಬ ಹೇಳಿಕೆ ಈಗಲೂ ಇದೆ. ಈ ಸ್ಥಳದಲ್ಲಿ ಇರುವ ಬಕಾಸುರನ ಕೆರೆ ಅಥವಾ ರಕ್ಕಸನ ಕೆರೆ ಎಂದು ಇದಕ್ಕೆ ಒಂದು ಆಧಾರವಾಗಿದೆ. ಬಕಾಸುರನನ್ನು ಬಂಕಾಪುರದ ಸಮೀಪ ಕುಂದೂರಿನಲ್ಲಿ ಭೀಮಸೇನನು ಒದಿಸಿದನೆಂದು ಐತಿಹ್ಯ ಹೇಳುತ್ತದೆ.

ಹೀಗೆ ಎಲ್ಲಾ ಅಂಶಗಳಿಂದ ಸಾಂಸ್ಕೃತಿಕ ಮಹತ್ವವನ್ನು ಹೊಂದಿರುವ ಹಾವೇರಿ ಜಿಲ್ಲೆಯು ಭೌಗೋಳಿಕವಾಗಿ, ಚಾರಿತ್ರಿಕವಾಗಿ, ಸಾಮಾಜಿಕ, ಧಾರ್ಮಿಕ ವ್ಯವಸ್ಥೆಗೆ ಪೂರಕವಾಗಿ ತನ್ನದೇ ಮಹತ್ವವನ್ನು ಪಡೆದುಕೊಂಡಿದೆ.

**ಶಾಸನಗಳು:**

ಯಾವುದೇ ಒಂದು ಪ್ರದೇಶದ ಇತಿಹಾಸವನ್ನು ಪುನರ್‍ರಚಿಸಬೇಕಾದರೆ ಆಧಾರಗಳು ಪ್ರಮುಖವಾಗಿದ್ದು ಪುರಾತತ್ವ ಆಧಾರಗಳಲ್ಲಿ ಶಾಸನಾಧಾರಗಳು ಪ್ರಮುಖಸ್ಥಾನ ಪಡೆದುಕೊಂಡಿವೆ. ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಇತಿಹಾಸದ ರಚನೆಗಳು ಬಹಳ ಉಪಯುಕ್ತವಾಗಿದೆ.

**ಶಾಸನಗಳ ಅರ್ಥ:**

ಒಂದು ನಾಡಿನ ಚರಿತ್ರಯನ್ನು ದಾಖಲಿಸುವಲ್ಲಿ ಶಾಸನಗಳು ಅತ್ಯಂತ ಮಹತ್ವವಾದ ಪಾತ್ರವಹಿಸುತ್ತವೆ. ಶಾಸನ ಎಂಬ ಸಂಸ್ಕೃತ ಪದಕ್ಕೆ ಆಜ್ಞೆ (ರಾಜಾಜ್ಞೆ) ಎಂಬುದು ಮೂಲ ಅರ್ಥ ಶಾಸನ ಎಂಬ ಪದವು 'ಶಾಸ್' ಎಂಬ ಧಾತುವಿನಿಂದ ಬಂದಿದೆ. ಶಾಸ್ ಎಂದರೆ ಆಜ್ಞೆ ಮಾಡು ಶಿಕ್ಷಿಸು ಎಂದರ್ಥ. ಪ್ರಾಚೀನ ಕಾಲದಲ್ಲಿ ಶಾಸನಗಳು ಮೊದಲು ರಾಜಾಜ್ಞೆ ಆಗಿದ್ದವು.

ರಾಜರು ತಮ್ಮ ಆಜ್ಞೆಗಳನ್ನು ಶಾಸನ ರೂಪದಲ್ಲಿ ಬರೆಸುತ್ತಿದ್ದರು. ಕಾನೂನುಗಳನ್ನು ಜನರಿಗೆ ತಿಳಿಯಪಡಿಸುವ ಬರಹಗಳೇ ಶಾಸನಗಳು. ಯಾವುದೇ ಸಾಮ್ರಾಜ್ಯದ ರಾಜನೇ ಆಗಲಿ ಬೇರೆ ಯಾರೇ ಆಗಲಿ ಅವರು ದಾನವನ್ನು ಕೊಟ್ಟಾಗ ಎಲ್ಲರು ಆ ದಾನವನ್ನು ಕಾಪಾಡಿಕೊಂಡು ಬರಬೇಕೆಂದು ಹೇಳುತ್ತಿದ್ದರು. ಎಲ್ಲರು ದಾನವಾಗಿ ಕೊಟ್ಟ ಭೂಮಿಗೆ ತೆರಿಗೆಗಳನ್ನು ತೆಗೆದು ಹಾಕಿದ ಆಜ್ಞೆಯನ್ನು ರಾಜರು ಅಥವಾ ಅಧಿಕಾರಿಗಳು ಹೊರಡಿಸುತ್ತಿದ್ದರು. ಹೀಗೆ ಪರ್ಯಾಯವಾಗಿ ಇಂತಹ ಬರಹಗಳಿಗೂ ಶಾಸನಗಳು ಎಂಬ ಹೆಸರು ರೂಢಿಗೆ ಬಂದಿತು.

ಶಾಸನ ಎಂಬ ಪದಕ್ಕೆ ಸಮನಾರ್ಥಕವಾಗಿ ಬಳಕೆಯಾಗುತ್ತಿರುವ ಇಂಗ್ಲಿಷ್ ಪದ Inscrioptions (Epigraph ಎಂಬ ಪದದ ಅರ್ಥವು ಉಂಟು. ಇದರಿಂದಲೇ Epigraphy ಬಂದಿರಬಹುದು). ಈ ಶಬ್ದಕ್ಕೆ ಮೂಲತಃ ರಾಜಾಜ್ಞೆ ಎಂಬ ಅರ್ಥವಿರದೆ ವಿಶಾಲವಾದ ಅರ್ಥವಿರುವುದನ್ನು ಕಾಣಬಹುದು. Inscribe ಎಂದರೆ ಕೆತ್ತು ಎಂದರ್ಥ. Inscribe ಎಂದರೆ ಕೆತ್ತಿದ್ದು ಎಂಬ ಅರ್ಥವನ್ನು ನೀಡಬಹುದು. ಇದರ ವ್ಯಾಪಕ ಆರ್ಥವನ್ನು ವಿದ್ವಾಂಸರಾದ ಡಿ.ಸಿ. ಸರ್ಕಾರ ಅವರು ಶಾಸನದ ಲಕ್ಷಣವನ್ನು ಕುರಿತು ಹೇಳುತ್ತಾರೆ "ಶಾಸನ ಎಂದರೆ ಯಾವುದಾದರೂ ಒಂದು ಪದಾರ್ಥದ ಮೇಲೆ ಕೊರೆದ ಯಾವುದೇ ಬರಹವನ್ನು ಅಕ್ಷರ ಸಹ ಅರ್ಥವಾಗುತ್ತದೆ"[೭೧]

**ಶಾಸನಗಳ ಪ್ರಕಾರಗಳು:**

ಕರ್ನಾಟಕವು ಶಾಸನಗಳ ಬೀಡು ಎಂದರೆ ತಪ್ಪಾಗಲಾರದು. ಏಕೆಂದರೆ ಕರ್ನಾಟಕದಲ್ಲಿ ಸುಮಾರು ೩೦ ಸಾವಿರಕ್ಕೂ ಹೆಚ್ಚು ಪ್ರಕಟವಾಗಿರುವ ಶಾಸನಗಳು ಸಾವಿರಾರು ಅಪ್ರಕಟಿತ ಶಾಸನಗಳು ಹಾಗೂ ಪತ್ತೆಯಾಗಿರುವ ಶಾಸನಗಳೇ ಇದಕ್ಕೆ ಸಾಕ್ಷಿ. ಇದೊಂದು ಶಾಸನ ಕ್ರಾಂತಿ ಎಂದು ಹೇಳಬಹುದು.

ಹಾವೇರಿ ಜಿಲ್ಲೆಯಲ್ಲಿ ಅಪಾರ ಪ್ರಮಾಣದ ವೈವಿಧ್ಯಪೂರ್ಣವಾದ ಶಾಸನಗಳು ದೊರಕಿವೆ.

ಶಾಸನಕ್ರಾಂತಿ ಧರ್ಮಪ್ರಭು ಮೌರ್ಯ ಅಶೋಕನಿಂದ ಕ್ರಿ.ಪೂ. ೩ನೇ ಶತಮಾನದಲ್ಲಿ ಪ್ರಾರಂಭವಾಯಿತು. ಪ್ರಜೆಗಳಿಗೆ ಧರ್ಮ ಪಾಲಿಸುವ ಮಾರ್ಗದರ್ಶಿಯಾಗಿದ್ದ ಇವು ನಂತರ ಕಾನೂನು ರಾಜಾಜ್ಞೆಯಾದವು.

ಶಾಸನಗಳ ಸ್ವರೂಪವು ಕಾಲ, ರಾಜ, ಧರ್ಮ ಮುಂತಾದ ದೃಷ್ಟಿಯಿಂದ ವಿಭಿನ್ನವಾಗಿ ಕಂಡು ಬಂದರೂ ಸೂಕ್ಷ್ಮವಾಗಿ ಪರಿಶೀಲಿಸಿ ಹಾಗೆ ಎಲ್ಲಾ ಶಾಸನಗಳಲ್ಲೂ ಹೆಚ್ಚು ಕಡಿಮೆ ಕೆಲವೊಂದು ಹೋಲಿಕೆಗಳನ್ನು ಗುರುತಿಸಬಹುದು. ಹಾವೇರಿ ಜಿಲ್ಲೆಯಲ್ಲಿ ದೊರೆತಿರುವ

ಶಾಸನಗಳು ಸಹ ಇದರಿಂದ ಹೊರತಾಗಿಲ್ಲ. ಶಾಸನದ ಭಾಷೆ, ಶಾಸನದ ಆರಂಭದ ಭಾಗ, ಮಧ್ಯಭಾಗ ಮತ್ತು ಅಂತ್ಯ ಭಾಗಗಳಿಗೆ ಇಂತಹ ಅಂಶಗಳು ಸಂಬಂಧಿಸಿವೆ.

ಶಾಸನಗಳಲ್ಲಿ ಉಲ್ಲೇಖವಾಗಿರುವ ಜನಜೀವನದ ಸಂಸ್ಕೃತಿಯನ್ನು ಅರಿಯಬೇಕಾದರೆ ಅವು ಪ್ರತಿಪಾದಿಸುವ ವಸ್ತುವಿನ ವೈವಿಧ್ಯವನ್ನು ಮುಖ್ಯವಾಗಿ ಗಮನಿಸಬೇಕಾಗುತ್ತದೆ. ಶಾಸನಗಳಲ್ಲಿ ಉಲ್ಲೇಖಿಸಿರುವ ವಿಷಯಗಳಿಗೆ ಅನುಸಾರವಾಗಿ ಈ ಕೆಳಕಂಡ ಪ್ರಕಾರಗಳಾಗಿ ವಿಭಾಗಿಸಿಕೊಂಡು ಅಧ್ಯಯನ ಮಾಡಲಾಗಿದೆ.

೧. ಪ್ರಶಸ್ತಿ ಶಾಸನಗಳು

೨. ದಾನ ಶಾಸನಗಳು

೩. ಕೊಡುಗೆ ಶಾಸನಗಳು

೪. ವೀರಗಲ್ಲು ಶಾಸನಗಳು

೫. ಸತಿಗಲ್ಲು

೬. ನಿಷಧಿಗಲ್ಲು

ಈ ಮೇಲ್ಕಂಡ ಅಂಶಗಳನ್ನು ಗಮನಿಸಿದಾಗ ಹಾವೇರಿ ಜಿಲ್ಲೆಯ ಶಾಸನಗಳನ್ನು ಒಳಗೊಂಡಂತೆ ಆಕಾರಾದಿಯಲ್ಲಿ ವಿಷಯಗಳನ್ನು ಆಯಾ ಸಂದರ್ಭಕ್ಕೆ ಅನುಗುಣವಾಗಿ ಆಯಾ ಅಧ್ಯಾಯಗಳಲ್ಲಿ ನಿರೂಪಿಸಲಾಗಿದೆ.

**ಟಿಪ್ಪಣಿಗಳು :**

೧ ಶ್ರೀಕಂಠಶಾಸ್ತ್ರಿ ಎಸ್. ೨೦೦೬, ಭಾರತೀಯ ಸಂಸ್ಕೃತಿ, ಪು-೧.

೨ ಚಿದಾನಂದಮೂರ್ತಿ ಎಂ. ೨೦೦೨ ಕನ್ನಡಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು-೫.

೩ ಚಿದಾನಂದಮೂರ್ತಿ ಎಂ. ೨೦೦೬, ಕನ್ನಡ ಸಂಸ್ಕೃತಿ ನಮ್ಮ ಹೆಮ್ಮೆ, ಪು-೨.

೪ ಶ್ರೀಕಂಠಶಾಸ್ತ್ರಿ ಎಸ್. ೨೦೦೬, ಪೂರ್ವೋಕ್ತ ಪು-೨.

೫ ವಿರೂಪಾಕ್ಷ ಪೂಜಾರಹಳ್ಳಿ, ೨೦೦೮, ವಿಜಯನಗರ ಕಾಲದ ಸಂಸ್ಕೃತಿ, ಪು-೩೧.

೬ ವಿಜಯ ವಿಶ್ವಕೋಶ, ೨೦೦೫, ಪ್ರಸಾರಂಗ ಮಾನಸಗಂಗೋತ್ರಿ ಮೈಸೂರು, ಪು-೧೩೩೫.

೭ ಸೂರ್ಯನಾಥ ಕಾಮತ್ (ಸಂ) ೧೯೯೫, ಧಾರವಾಡ ಜಿಲ್ಲೆಯ ಗ್ಯಾಜೆಟಿಯರ್ ಪ್ರ.ಕರ್ನಾಟಕ ಸರ್ಕಾರ, ಪು-೫೧.

೮ ಚಿದಾನಂದಮೂರ್ತಿ, ೨೦೦೮, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಬೆಂಗಳೂರು, ಪು-೧.

೯ Anil Verghes, 1995, 'Religious tradition at Vijayanagar'.

೧೦ ಅಣ್ಣ ಎಲ್. ಡೆಲ್ಲಾಪಿಕೋಲಾ ಮತ್ತು ಇತರು ೧೯೯೮, 'Sculpture at Vijayanagara' Iconography and Style – American Institute of Indian studies, Manohar Publish, New Delhi.

೧೧ ಭಾರ್ಗವಿ ಶಿವಯ್ಯ, Krishnadevaraya his life and achievements.

೧೨ Suresh K.M. 1998, Sulptural Art of Hampi, Directorate of Archeology and Museums, Mysore.

೧೩ ಸಲೆಟೂರೆ ಆರ್.ಎನ್., ೧೯೮೨ 'Vijayanagara Art' ಸಂದೀಪ ಪ್ರಕಾಶನ, ನ್ಯೂ ದೆಹಲಿ.

೧೪ ರಾಜಶೇಖರ ಎಸ್. ೧೯೮೩ Karanataka Architecture, Sujata Publication, Dharwada.

೧೫ ಪಾಟೀಲ್ ಸಿ.ಎಸ್. ೧೯೯೪, ಟೆಂಪಲ್ ಆಫ್ ರಾಯಚೂರು ಅಂಡ್ ಬಳ್ಳಾರಿ ಆಫ್ ಆರ್ಕಿಯಾಲಜಿ ಅಂಡ್ ಮ್ಯೂಝಿಯಮ್, ಮೈಸೂರು.

೧೬ ಶೇಷಶಾಸ್ತ್ರ ಆರ್. ೧೯೮೨, ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೧೭ ಶೀಕೆ ಬಿ.ಎಸ್. ೧೯೯೧, 'ಕರ್ನಾಟಕದಲ್ಲಿ ಸತಿ ಪದ್ಧತಿ' ವೀರಶೈವ ಅಧ್ಯಯನ ಅಕಾಡೆಮಿ, ನಾಗನೂರು ರುದ್ರಾಕ್ಷಿಮಠ, ಬೆಳಗಾವಿ.

೧೮ ಚಿದಾನಂದಮೂರ್ತಿ ಎಂ. ೨೦೦೮ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಕರ್ನಾಟಕ ಬುಕ್ಸ್ ಏಜೆನ್ಸಿ, ಬೆಂಗಳೂರು.

೧೯ ಶೆಟ್ಟರ್ ಎಸ್. ೧೯೯೧, ಮೆಮೋರಿಯಲ್ ಸ್ಟೋನ್.

೨೦ ಪರಮಶಿವಮೂರ್ತಿ ಡಿ.ವಿ. ೧೯೯೯, ಕನ್ನಡ ಶಾಸನ ಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೧ ರಮೇಶ ಕೆ.ವಿ. ೧೯೭೧, ಕರ್ನಾಟಕ ಶಾಸನ ಸಮೀಕ್ಷೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೨೨ ಹಿರೇಮಠ ಬಿ.ಆರ್. ೧೯೭೬, ವೀರಗಲ್ಲುಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨೩ ಕಲಬುರ್ಗಿ ಎಂ.ಎಂ.೧೯೮೦, ಸಮಾಜ ಬಲಿದಾನ ವೀರಮರಳು ಸ್ಮಾರಕಗಳು, ಐ.ಬಿ.ಹೆಚ್ ಪ್ರಕಾಶ, ಬೆಂಗಳೂರು.

೨೪ ಹಿರೇಮಠ ಬಿ.ಆರ್. ೨೦೧೨, 'ಶಾಸನ ಅಧ್ಯಯನ' ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೫ ಗುಡ್ಡದೇಶ್ವರಪ್ಪ ಹೆಚ್. ೨೦೧೧, ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಚಿತ್ರದುರ್ಗ.

೨೬ ಸಿದ್ದಲಿಂಗಪ್ಪ ಕೊಟ್ನಕಲ್‌ರವರ ೨೦೧೧, 'ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ, ಕೊಪ್ಪಳ.

೨೭ ತಿಪ್ಪೇರುದ್ರಸ್ವಾಮಿಯವರ ೨೦೧೦, 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ', ಮೈಸೂರು.

೨೮ ನಾಗರಾಜು ಡಿ.ಎಂ.೨೦೧೨, ಕಲ್ಯಾಣ ಚಾಲುಕ್ಯರ ಶಾಸನಗಳ ಸಾಂಸ್ಕೃತಿಕ ಅಧ್ಯಯನ', ಮೈಸೂರು.

೨೯ ಫರ್ಗ್ಯೂಸನ್ ಜೆ. ೧೮೬೬, ಆರ್ಕಿಟೆಕ್ಚರ್ ಆಫ್ ಧಾರವಾಡ್ ಅಂಡ್ ಮೈಸೂರು, ಲಂಡನ್.

೩೦ ಢಾಕೆ ಎಂ.ವಿ.೧೯೭೭ 'ದಿ ಇಂಡಿಯನ್ ಫಾರಮ್ಸ್', ಅಭಿನವ ಪ್ರಕಾಶನ ನವದೆಹಲಿ.

೩೧ ಆ್ಯಡಮ್‌ಹ್ಯಾನ್ಸ್‌ಇ ೧೯೯೫ ಇಂಡಿಯನ್ ಟೆಂಪಲ್ ಆರ್ಕಿಟೆಕ್ಚರ್‌ನ ಕರ್ನಾಟಕ ದ್ರಾವಿಡ ಟ್ರೆಡಿಶನ್'.

೩೨ ಜ್ಞಾನಾನಂದ ಜೆ. ೨೦೦೨, (ಸಂ)-೨ ಶಿಲ್ಪದರ್ಶ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲ, ಹಂಪಿ.

೩೩ ಗೋಪಾಲ ಬಾ.ರಾ. ೧೯೯೩, ಸಂಪುಟ-೪, 'ಕರ್ನಾಟಕದ ನೆಲೆಗಳು' ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೩೪ ಅಪರ್ಣ ಕೂಸ. ೧೯೯೯, 'ದೇವಾಲಯದ ವಾಸ್ತುಶಿಲ್ಪ ಪರಿಚಯ' ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೫ ಪ್ರಭಾಕರ ೨೦೦೦, 'ದೇವಾಲಯದ ವಾಸ್ತು ಚಂದ್ರಿಕೆ' ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೬ ಮಹಾದೇವ .ಸಿ ಮತ್ತು ಇತರರು ೧೯೯೯, 'ಕರ್ನಾಟಕ ದೇವಾಲಯಗಳ ಕೋಶ' ಹಾವೇರಿ ಜಿಲ್ಲೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೭ ಕುಲಕರ್ಣಿ ೨೦೦೭-೦೮, 'ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ.

೩೮ ಹನುಮಾಕ್ಷಿಗೋಗಿ ೨೦೦೨, 'ಅನುಶಾಸನ' ಮಹಿಳಾ ಸಾಹಿತ್ಯಕ, ನವನಗರ, ಹುಬ್ಬಳ್ಳಿ.

೩೯ ಭೋಜರಾಜ ಪಾಟೀಲ ೧೯೯೫, 'ನಾಗರಖಂಡ-೭೦ ಒಂದು ಅಧ್ಯಯನ' ಮಲೆನಾಡ ವೀರಶೈವ ಅಧ್ಯಯನ ಅಕಾಡೆಮಿ, ಆನಂದಪುರ.

೪೦ ನಾಗಯ್ಯ ಜೆ.ಎಂ., ೧೯೯೫ ಕಲಕೇರಿ 'ಬಸವೇಶ್ವರ ಜೀರ್ಣೋದ್ದಾರ ಟ್ರಸ್ಟ್, ಕಲಕೇರಿ, ಹಾನಗಲ್ಲು ತಾಲ್ಲೂಕು, ಹಾವೇರಿ ಜಿಲ್ಲೆ.

೪೧ ಕಲಬುರ್ಗಿ (ಸಂ) ಎಂ.ಎಂ. ೧೯೭೫, ಧಾರವಾಡ ಜಿಲ್ಲೆ ಶಾಸನ ಸಮಿತಿ, ಧಾರವಾಡ.

೪೨ ಕುಲಕರ್ಣಿ ಸತೀಶ ೧೯೮೭, 'ಹಾವೇರಿ ತಾಲೂಕು ದರ್ಶನ' ಐ.ಬಿ.ಎಚ್, ಪ್ರಕಾಶನ, ಬೆಂಗಳೂರು.

೪೩ ಚೆನ್ನಕ್ಕ ಎಲಿಗಾರ ೧೯೯೦, 'ಬಂಕಾಪುರ ಶೋಧ' ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೪೪ ಚೆನ್ನಕ್ಕ ಪಾವಟೆ ೧೯೯೯, 'ರಾಷ್ಟ್ರಕೂಟ ಸಾಮಾಂತ ಚಲ್ಲಕೇತನರು' ಚನ್ನಗಂಗಾ ಪ್ರಕಾಶನ, ಧಾರವಾಡ.

೪೫ ಜಯದೇವಪ್ಪ ಜೈನಕೇರಿ-ಕರ್ನಾಟಕ ಶಿಲ್ಪ ಸಂಸ್ಕೃತಿ (ನಾ ಕಂಡ ದೇಗುಲಗಳು) ಶಾಂತಲಾ ಪ್ರಕಾಶನ, ಕುವೆಂಪುರಸ್ತೆ, ಶಿವಮೊಗ್ಗ.

೪೬ ಲಿಂಗರಾಜು ಕುಮಾರ, ಗಿರಿಜಾದುರ್ಗನ ಮಠ, ೨೦೦೭, ಹೆಬ್ಬಾಗಿಲು' ಹಾವೇರಿ ಜಿಲ್ಲಾ ಉತ್ಸವ, ಹಾವೇರಿ.

೪೭ ಯಾಸೀನ್ ಖುದ್ದುಂಸಿ, ಸೀತಾರಾಮ ಜಹಗೀರ್‌ದಾರ್ ಕರ್ನಾಟಕ ಪರ್ಷಿಯನ್ ಮತ್ತು ಉರ್ದು ಶಾಸನಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೮ ಚನ್ನಬಸವಣ್ಣ ತೆವರ ಮಳ್ಳಿಹಳ್ಳಿ ೧೯೮೭, 'ಸವಣೂರು ತಾಲ್ಲೂಕು ದರ್ಶನ' ಐ.ಬಿ.ಹೆಚ್ ಪ್ರಕಾಶನ ಬೆಂಗಳೂರು.

೪೯ ಬಂದವ್ವನವರ ಎಸ್.ಎಸ್., ೨೦೧೦, ಹಾವೇರಿ ಜಿಲ್ಲೆಯ ಜನಪದ ಕಾವ್ಯ ಪ್ರಕಾರಗಳು, ಅಪ್ರಕಟಿತ ಪಿಎಚ್.ಡಿ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೦ ಗೀತಾ ಎಸ್. ತಹಶೀಲ್ದಾರ್, ೨೦೧೦, ಹಾವೇರಿ ಜಿಲ್ಲೆಯ 'ಸ್ಥಳನಾಮಗಳ ಭಾಷಾನಾಮಗಳು', ಭಾಷಾ ವೈಜ್ಞಾನಿಕ ಅಧ್ಯಯನ' ಅಪ್ರಕಟಿತ ಪಿಎಚ್.ಡಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೧ ಮರಳೀಹಳ್ಳಿ ವೈ.ವೈ, ೨೦೦೭, 'ಕರ್ನಾಟಕದಲ್ಲಿ ಅಭಿವೃದ್ಧಿ ರಾಜಕೀಯ ಹಾವೇರಿ ಜಿಲ್ಲೆಯ ಒಂದು ಅಧ್ಯಯನ, ಅಪ್ರಕಟಿತ ಪಿಎಚ್.ಡಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೨ ಮಲ್ಲಿಕಾರ್ಜುನ ಹುಲಿಗಣ್ಣನವರ ೧೯೮೭, 'ಹಾನಗಲ್ಲು ತಾಲ್ಲೂಕು ದರ್ಶನ' ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು.

೫೩ ಕರಿಬಸವಯ್ಯ ಆರ್. ೧೯೯೮, 'ಹಿರೇಕೆರೂರು ಪ್ರದೇಶದ ಮೂರ್ತಿ ಶಿಲ್ಪ' ಅಪ್ರಕಟಿತ ಎಂ.ಫಿಲ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೪ ಮರಳಿಹಳ್ಳಿ ವೈ.ವೈ ೨೦೦೭, 'ನಗರ ಸರ್ಕಾರಗಳಲ್ಲಿ ಅಭಿವೃದ್ಧಿ ರಾಜಕೀಯ ಸವಣೂರು ನಗರ ಪುರಸಭೆ ಒಂದು ಅಧ್ಯಯನ' ಅಪ್ರಕಟಿತ, ಪಿಎಚ್.ಡಿ., ಕರ್ನಾಟಕ ವಿಶ್ವ ವಿದ್ಯಾಲಯ, ಧಾರವಾಡ.

೫೫ ಪಾಟೀಲ ಮಂಜುನಾಥ ಎಚ್., ೧೯೯೮, 'ರಾಣಿಬೆನ್ನೂರು ತಾಲ್ಲೂಕು ಶಾಸನಗಳ ಸಾಂಸ್ಕೃತಿಕ ಅಧ್ಯಯನ ಅಪ್ರಕಟಿತ ಎಂ.ಫಿಲ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೬ ರಮೇಶನಾಯಕ ೧೯೯೭, 'ಹಾವೇರಿ ಜಿಲ್ಲೆಯ ಸಾಂಸ್ಕೃತಿಕ ಅಧ್ಯಯನ' ಅಪ್ರಕಟಿತ ಎಂ.ಫಿಲ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೭ ವಿನೋದಾ ಪಾಟೀಲ ೧೯೯೬, ಪಾನಂಗಲ್ಲಯ್ಯೂರು-ಒಂದು ಸಾಂಸ್ಕೃತಿಕ ಅಧ್ಯಯನ ಅಪ್ರಕಟಿತ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೮ ಸಾಲಿಮಠ ಸುರೇಶ ೧೯೯೮, ರಾಣಿಬೆನ್ನೂರು ಪ್ರದೇಶದ ದೇವಾಲಯಗಳು ಒಂದು ಅಧ್ಯಯನ 'ಅಪ್ರಕಟಿತ ಎಂ.ಫಿಲ್., ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೯ ಗುರುರಾಜ್ ನವಲಗುಂದ ೨೦೦೮, 'ಶಿಗ್ಗಾವಿ ತಾಲೂಕಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಎಂ.ಫಿಲ್ ಅಪ್ರಕಟಿತ ಕಿರು ಪ್ರಬಂಧ, ಕ.ವಿ.ವಿ. ಹಂಪಿ.

೬೦ ಅರಿವಣಗುಪ್ಪೆ ಬಸವರಾಜ ೧೯೯೮, 'ತಿಳುವಳ್ಳಿ ಪ್ರದೇಶದ ದೇವಾಲಯಗಳು ಒಂದು ಅಧ್ಯಯನ' ಅಪ್ರಕಟಿತ ಎಂ.ಫಿಲ್ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೬೧ ಸೊಟ್ಟಮ್ಮನವರ ವಿ.ಜಿ ೧೯೯೮, ರಾಣಿಬೆನ್ನೂರು ಪ್ರದೇಶದ ದೇವಾಲಯಗಳು ಒಂದು ಅಧ್ಯಯನ ಅಪ್ರಕಟಿತ ಎಂ.ಫಿಲ್ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೬೨ ಸತೀಶ್ ಕಲಕರ್ಣಿ ೨೦೦೯, 'ಕದಂಬ ಸ್ಮರಣ ಸಂಚಿಕೆ' ಪ್ರಕಾಶಕರು ಸ್ವಾಗತ ಸಮಿತಿ ಹಾವೇರಿ ಜಿಲ್ಲಾ ಸಾಹಿತ್ಯ ಸಮ್ಮೇಳನ, ಹಾವೇರಿ.

೬೩ ಗೋವಿಂದ ಮೂರ್ತಿ ದೇಸಾಯಿ, ೧೯೯೯, ಸವಣೂರು ನವಾಬರು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೪ ಚಮರಾಜ ಎಸ್. ಕಮ್ಮಾರ, ಕರೇಗೌಡರು ಕೋಣತಿ ೨೦೧೧ 'ರಟ್ಟಪ್ಪಳ್ಳಿ ಸ್ಮರಣ ಸಂಚಿಕೆ' ಕನ್ನಡ ಸಾಹಿತ್ಯ ಪರಿಷತ್ ತಾಲ್ಲೂಕು ಘಟಕ, ಹಿರೇಕೆರೂರು ಹೋಬಳಿ ಕನ್ನಡ ಸಾಹಿತ್ಯ ಪರಿಷತ್, ರಟ್ಟಪಳ್ಳಿ.

೬೫ ಲಿಂಗರಾಜ ಎಸ್. ಕಮ್ಮಾರ, ಗಿರಿಜಾದುರ್ಗದ ಮಠ, ೨೦೦೭, 'ಹೆಬ್ಬಾಗಿಲು' ಹಾವೇರಿ ಜಿಲ್ಲಾ ಉತ್ಸವ, ಹಾವೇರಿ ಪು-೬.

೬೬ ಕನ್ನಡ ವಿಷಯ ವಿಶ್ವಕೋಶ ೨೦೦೫, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು, ಪು-೧೩೩೩.

೬೭ ಅದೇ ಪುಟ-೧೩೩೩.

೬೮ ಅದೇ ಪುಟ-೧೩೩೩.

೬೯ ಅದೇ ಪುಟ-೧೩೩೬.

೭೦ ಸತೀಶ ಕುಲಕರ್ಣಿ, ೧೯೮೭, ಹಾವೇರಿ ತಾಲ್ಲೂಕು ದರ್ಶನ, ಐ.ಬಿ.ಎಚ್, ಪ್ರಕಾಶನ, ಬೆಂಗಳೂರು, ಪು-೮.

೭೧ ಜೆ.ಎಂ.ಫ್ಲೀಟ್ ಅನು ಸಿ.ಪಿ.ಕೆ. ೨೦೦೧, ಭಾರತೀಯ ಶಾಸನ ಪರಿಚಯ, ಲಕ್ಷ್ಮಿ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಮೈಸೂರು, ಪು-೨.

# ಅಧ್ಯಾಯ – ೨

## ರಾಜಕೀಯ ಇತಿಹಾಸ

- ಇತಿಹಾಸ ಪೂರ್ವಕಾಲ
- ಬನವಾಸಿ ಕದಂಬರು
- ಬಾದಾಮಿ ಚಾಲುಕ್ಯರು
- ರಾಷ್ಟ್ರಕೂಟರು
- ಕಲ್ಯಾಣ ಚಾಳುಕ್ಯರು
- ಕಲಚೂರಿಗಳು
- ಹಾನಗಲ್ ಕದಂಬರು
- ಗುತ್ತಲದ ಗುತ್ತರು
- ನೂರುಂಬಾಡ ಕದಂಬರು
- ದೇವಗಿರಿಯ ಯಾದವರು (ಸೇವುಣರು)
- ಹೊಯ್ಸಳರು
- ವಿಜಯನಗರ ಸಾಮ್ರಾಜ್ಯ

## ರಾಜಕೀಯ ಇತಿಹಾಸ

ಹಾವೇರಿ ಜಿಲ್ಲೆಯು ಕರ್ನಾಟಕ ಇತಿಹಾಸದಲ್ಲಿ ಮಹತ್ವದ ಪಾತ್ರವಹಿಸಿ "ಉತ್ತರ ಕರ್ನಾಟಕದ ಹೆಬ್ಬಾಗಿಲು" ಎಂಬ ಖ್ಯಾತಿಗೆ ಹೆಸರುವಾಸಿಯಾಗಿದೆ. ಇದು ಕ್ರಿ.ಶ. ೧೯೯೭ರಲ್ಲಿ ಧಾರವಾಡ ಜಿಲ್ಲೆಯಿಂದ ಬೇರ್ಪಟ್ಟು ಹಾವೇರಿ ಜಿಲ್ಲೆಯಾಗಿ ಮಾರ್ಪಟ್ಟಿತು[೧]. ಇತಿಹಾಸ ಪೂರ್ವಕಾಲದಿಂದಲೂ ಮಾನವನ ನಾಗರೀಕತೆಯ ಹೆಜ್ಜೆಯ ಗುರುತುಗಳನ್ನು ಈ ಜಿಲ್ಲೆಯು ಹೊಂದಿದ್ದು, ತುಂಗಭದ್ರಾ ಮತ್ತು ಅದರ ಉಪನದಿಯಾದ ವರದಾ ನದಿ ಇವುಗಳ ತೀರ ಪ್ರದೇಶದಲ್ಲಿ ಜನವಸತಿ ಇದ್ದ ಕುರುಹುಗಳನ್ನು ಕಾಣಬರುತ್ತವೆ[೨]. ಇದರ ಹಿನ್ನೆಲೆಯಲ್ಲಿ ಹಾವೇರಿ ಜಿಲ್ಲೆಯಲ್ಲಿ ರಾಜಕೀಯ ಇತಿಹಾಸಕ್ಕೆ ಸಂಬಂಧಿಸಿದಂತೆ. ಶಾಸನಗಳನ್ನು ಅವಲೋಕಿಸಿ ನೋಡಿದಾಗ ವಿವಿಧ ಅರಸು ಮನೆತನಗಳು ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ. ಅವುಗಳೆಂದರೆ ಬನವಾಸಿ ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಿ ಚಾಳುಕ್ಯರು, ಹಾನಗಲ್ಲು ಕದಂಬರು, ಗುತ್ತಲದ ಗುತ್ತರು, ರಟ್ಟಹಳ್ಳಿ ಸಿಂಧರು, ಹೊಯ್ಸಳರು, ವಿಜಯನಗರದ ಅರಸರು, ವಿಜಾಪುರದ ಆದಿಲ್‌ಷಾಹಿಗಳು ಹಾಗು ಮೈಸೂರು ಒಡೆಯರು ಈ ಜಿಲ್ಲೆಯಲ್ಲಿ ರಾಜಕೀಯವಾಗಿ ತಮ್ಮದೆ ಆದ ಪ್ರಭುತ್ವವನ್ನು ಸ್ಥಾಪಿಸಿದ್ದಾರೆ. ಈ ದೃಷ್ಟಿಯಿಂದ ಇಲ್ಲಿ ದೊರೆಯುವ ಶಾಸನಗಳನ್ನಾಧರಿಸಿ ರಾಜಕೀಯ ಇತಿಹಾಸವನ್ನು ವಿವಿಧ ಆಯಾಮಗಳ ಮೂಲಕ ಅಭ್ಯಸಿಸಲು ಪ್ರಯತ್ನಿಸಲಾಗಿದೆ[೩]. ಹೀಗಾಗಿ ಶಾಸನಗಳು ಇತಿಹಾಸ ರಚನೆಯಲ್ಲಿ ಅಧಿಕೃತ ದಾಖಲೆಗಳಾಗಿದ್ದು, ರಾಜಪ್ರಭುತ್ವದ ಕಲ್ಪನೆ, ಉತ್ತಮ ಆಡಳಿತ ವ್ಯವಸ್ಥೆ ಆದರ್ಶಮಯವಾದ ಧಾರ್ಮಿಕ ವೈಶಾಲ್ಯ, ಅರಸ ಮತ್ತು ಪ್ರಜೆಗಳ ಬಾಂಧವ್ಯ, ಅರಸರಿಗಾಗಿ ಸಾಮಾನ್ಯ ಪ್ರಜೆಗಳು ನೆತ್ತರನ್ನು ಸುರಿಸಿದ್ದು, ಮುಂತಾದ ವಿಷಯಗಳು ಹಾಗೂ ಅಂದಿನ ಜನರ ಜೀವನದ ಮೌಲ್ಯಗಳು ಶಾಸನಗಳಲ್ಲಿ ವ್ಯಕ್ತವಾಗಿರುವುದನ್ನು ಕಾಣಬಹುದು.

### ಇತಿಹಾಸ ಪೂರ್ವಕಾಲ :

ಪ್ರಾಚೀನ ಕಾಲದಲ್ಲಿ ಕುಂತಳ ದೇಶದ ಭಾಗವಾಗಿದ್ದ ಈ ಜಿಲ್ಲೆಯು ಹಿರೇಕೇರೂರು ತಾಲೂಕಿನ ಹಳ್ಳೂರು ಮತ್ತು ಕಡುಪಲಿ ಗ್ರಾಮಗಳು ಇತಿಹಾಸ ಪೂರ್ವ ಕಾಲಕ್ಕೆ ಸೇರಿದವುಗಳಾಗಿವೆ. ಸುಮಾರು ಕ್ರಿ.ಪೂ. ೧೨೦೦ ರ ಸುಮಾರಿಗೆ ಕಬ್ಬಿಣದ ಆಯುಧೋಪಕರಣಗಳನ್ನು ದಕ್ಷಿಣ ಭಾರತದಲ್ಲಿ ಬಳಸಿರುವುದನ್ನು ಕಾಣಬಹುದು. ಪ್ರಾಗೈತಿಹಾಸಿಕ ಕಾಲಕ್ಕೆ ಸಂಬಂಧಿಸಿದಂತೆ ೧೯೬೦ ರ ದಶಕದಲ್ಲಿ ಹಳ್ಳೂರಿನಲ್ಲಿ ನಡೆದ ಉತ್ಖನನದಲ್ಲಿ ಮಾನವನು ಮೊದಲ ಬಾರಿಗೆ ರಾಗಿಯನ್ನು ಬಳಸಿರುವುದಕ್ಕೆ ಸಾಕ್ಷ್ಯಾಧಾರಗಳು ದೊರೆತಿವೆ. ಈ ನೆಲೆಯ ಕಾಲವನ್ನು ಕ್ರಿ.ಪೂ. ೧೦೦೦ ವರ್ಷಗಳೆಂದು

ನಿರ್ಧರಿಸಲಾಗಿದೆ. ಇದೇ ರೀತಿ ಕುಡುಪಲಿ ಗ್ರಾಮದಲ್ಲಿ ಶಾತವಾಹನರ ಕಾಲದ ಅವಶೇಷಗಳು ದೊರೆತಿದ್ದು ಅವುಗಳಲ್ಲಿ ಮಡಿಕೆ ಚೂರುಗಳು ಪ್ರಮುಖವಾಗಿದ್ದು, ಹಿರೇಕೆರೂರು ತಾಲ್ಲೂಕಿನ ತಡಕನಹಳ್ಳಿ, ಮೇದೂರು, ಕಮಲಾಪುರ ಹಾಗೂ ಹಾನಗಲ್ಲು ತಾಲ್ಲೂಕಿನ ಗುಡಗುಡಿ ಗ್ರಾಮಗಳಲ್ಲಿ ಬೃಹತ್‌ಶಿಲಾಯುಗದ ಕಾಲಕ್ಕೆ ಸೇರಿದ ಅವಶೇಷಗಳು ಕಂಡುಬರುತ್ತವೆ.

ಈ ಜಿಲ್ಲೆಯ ಅನೇಕ ಪ್ರದೇಶಗಳಲ್ಲಿ ಆದಿಶಿಲಾಯುಗದಿಂದಲೆ ಮಾನವನ ನೆಲೆಗಳು ಕಂಡು ಬಂದಿದ್ದು, ಮಲಪ್ರಭಾ ಮತ್ತು ತುಂಗಭದ್ರಾ ಉಪನದಿಗಳ ನಡುವಿನ ಕಣಿವೆ ಪ್ರದೇಶದಲ್ಲಿ ಅನೇಕ ಇತಿಹಾಸ ಪೂರ್ವಕಾಲದ ನಿವೇಶನಗಳಿವೆ. ಖ್ಯಾತ ಭೂ ವಿಜ್ಞಾನಿ ಹಾಗೂ ಭಾರತೀಯ ಪುರಾತತ್ವ ಶಾಸ್ತ್ರಜ್ಞರಾದ ರಾಬರ್ಟ್ ಬ್ರೂಸ್‌ಫೂಟ್‌ರವರು ಮೊಟ್ಟ ಮೊದಲ ಬಾರಿಗೆ ಧಾರವಾಡ ಮತ್ತು ಮಲಪ್ರಭಾ ಹಾಗೂ ಬೆಣ್ಣೆಹಳ್ಳಗಳ ಸಂಗಮ ಸ್ಥಳದಲ್ಲಿ ಆದಿಶಿಲಾಯುಗದ ಆಯುಧಗಳುಳ್ಳ ನೆಲೆಗಳನ್ನು ಗುರುತಿಸಿದರು. ನಂತರ ಬ್ಯಾಡಗಿ ತಾಲ್ಲೂಕು ಮೋಟೆಬೆನ್ನೂರು ಬಳಿಯ ಬಾಡಿಗುಡ್ಡದಲ್ಲಿ ಶಿಲಾಯುಗದ ಹಾಗೂ ಆದಿ ಹಳೆಶಿಲಾಯುಗದ ಒಂದು ನಿವೇಶನ ಕಂಡು ಬಂದಿದೆ. ಇದು ತುಂಗಭದ್ರಾ ಉಪನದಿಯಾದ ದೊಡ್ಡಹಳ್ಳದ ದಡದಲ್ಲಿದ್ದು, ಇಲ್ಲಿ ದೊರೆತ ಉಪಕರಣಗಳಲ್ಲಿ ಕ್ವಾರ್ಟ್‌ಜೈಟ್ (ಚಿತ್ರಪಟ) ಕೊಡಲಿ, ಮಚ್ಚು (ಕ್ಲಿವರ್) ಮುಂತಾದ ಆಯುಧಗಳಿವೆ. ಹಾವೇರಿ ಜಿಲ್ಲೆಯ ಜಲ್ಲಾಪುರದಲ್ಲಿ ಆದಿಶಿಲಾಯುಗದ ನೆಲೆಗಳನ್ನು ಗುರುತಿಸಲಾಗಿದೆ ಹಾಗೂ ರಾಣೆಬೆನ್ನೂರು ತಾಲ್ಲೂಕಿನ ನದಿಹರಳಿಹಳ್ಳಿ ಮತ್ತು ಹಿರೇಕೆರೂರು ತಾಲ್ಲೂಕಿನ ನಿಡನೇಗಿಲು ಹಾಗೂ ಹೊಳೆಆನವೇರಿಗಳಲ್ಲಿ ಸೂಕ್ಷ್ಮ ಶಿಲಾಯುಗದ ಆಯುಧಗಳು ದೊರೆತಿವೆ[೪].

ಒರಟು ಶಿಲೆಯನ್ನು ಬಳಸುತ್ತಿದ್ದ ಆದಿ ಹಳೇಶಿಲಾಯುಗದ ಮಾನವನು ಕಾಲಾನಂತರ ಉಜ್ಜಿ ನಯಗೊಳಿಸಿದ ಆಯುಧಗಳನ್ನು ಉಪಯೋಗಿಸುವುದನ್ನು ಆರಂಭಿಸಿದರು. ನವಶಿಲಾಯುಗದಲ್ಲಿ ಆತ ಅಲೆಮಾರಿ ಜೀವನ ತ್ಯಜಿಸಿ ಅರೆ ನೆಲೆಗಳಲ್ಲಿ ವಾಸಮಾಡಲು ಕಂಡುಕೊಂಡ ಅವಧಿಯಲ್ಲಿ ವಾಸದ ನಿವೇಶನಗಳನ್ನು ನಿರ್ಮಾಣ ಮಾಡಿಕೊಂಡು, ಕೃಷಿ ಪಶುಪಾಲನೆಯನ್ನು ಆರಂಭಿಸಿ ಕಪ್ಪು ಮತ್ತು ಕೆಂಪು ಬಣ್ಣದ ಇಲ್ಲವೆ ಬೂದು ಬಣ್ಣದ ಮಡಿಕೆ ಕುಡಿಕೆಗಳನ್ನು ಒಳಗೊಂಡ ಈ ಕಾಲದ ನಿವೇಶನಗಳು ಹಿರೇಕೆರೂರು ತಾಲ್ಲೂಕಿನ ಹಳ್ಳೂರು, ಮುದೇನೂರು, ನದೀಹರಳಹಳ್ಳಿ, ಬೇಲೂರು ಹಾಗೂ ಹಾದರಗೇರಿ, ಕೂನಬೇವು, ನೀರಲಗಿ ಮುಂತಾದ ಕಡೆಗಳಲ್ಲಿ ದೊರೆತಿವೆ[೫].

ನವಶಿಲಾಯುಗ, ತಾಮ್ರಶಿಲಾಯುಗ, ಕಬ್ಬಿಣಯುಗ, ಬೃಹತ್‌ಶಿಲಾಯುಗ ಮತ್ತು ಆದಿ ಇತಿಹಾಸ ಕಾಲದ ಮೃತ್ಪಾತ್ರೆಗಳು, ಕ್ವಾರ್ಟ್‌ಜೈಟ್‌ಕಲ್ಲಿನ ಚಕ್ಕೆಗಳು ಮತ್ತು ಗುಡಿಸಲು ಮನೆಗಳನ್ನು ಮುಂತಾದವುಗಳ ಅವಶೇಷಗಳನ್ನು ಡಾ.ಎಂ.ಎಸ್.ನಾಗರಾಜರಾವ್ ಅವರು ಹಳ್ಳೂರನ್ನು ಉತ್ಖನನಕ್ಕೆ ಒಳಪಡಿಸಿ ಕಂಡುಹಿಡಿದಿದ್ದಾರೆ[೬]. ಇದನ್ನು ಗಮನಿಸಿದರೆ, ತಾಮ್ರಶಿಲಾಯುಗದ

ಜನರು ಜೋರ್ವೆ ಸಂಸ್ಕೃತಿಯ ಜನರೊಂದಿಗೆ ಒಡನಾಟವನ್ನು ಇಟ್ಟುಕೊಂಡಿದ್ದರು. ಇದರ ಜೊತೆಗೆ ಇಲ್ಲಿನ ಜನರಿಗೆ ಕುದುರೆಯ ಪರಿಚಯವಿದ್ದು, ವ್ಯವಸಾಯದಲ್ಲಿ ತೊಡಗಿಸಿಕೊಂಡಿದ್ದು, ರಾಗಿಯನ್ನು ಬೆಳೆಯುತ್ತಿದ್ದರು. ಶವಸಂಸ್ಕಾರ ಪದ್ಧತಿ ರೂಡಿಯಲ್ಲಿದ್ದು ಮಣ್ಣಿನ ದೊಡ್ಡ ಮಡಿಕೆಗಳು ಹೆಣೆದ ಚಾಪೆಯ ಗುರುತು ತಾಮ್ರದ ಕೊಡಲಿ, ಗಾಳಗಳು ದೊರೆತಿವೆ[೭].

ಬೃಹತ್ ಶಿಲಾಯುಗದ ಜನರು ಭಾರೀಗಾತ್ರದ ಕಲ್ಲು ಚಪ್ಪಡಿಗಳನ್ನು ಬಳಸಿ ಮೇಜಿನಂತೆ ಕಾಣುವ ಕಲ್ಮನೆಗಳನ್ನು ಹಾಗೂ ಶಿಲಾವೃತ್ತಗಳು ಜಿಲ್ಲೆಯಲ್ಲಿ ಹಲವು ಗ್ರಾಮಗಳಲ್ಲಿ ಕಂಡುಬಂದಿವೆ. ಅವುಗಳಲ್ಲಿ ಹಿರೇಕೆರೂರು ತಾಲೂಕಿನ ನೇಶ್ವಿ ಗ್ರಾಮದಲ್ಲಿ[೮] ಬೃಹತ್ ಶಿಲಾಯುಗದ ಎರಡು ಸಮಾಧಿಗಳು ಕಂಡುಬರುತ್ತವೆ. ಇವು ೨೦೦೦ ವರ್ಷಗಳ ಹಿಂದಿನವು ಎಂದು ಗೊತ್ತಾಗುತ್ತದೆ ಹಾಗೂ ಅಸುಂಡಿ, ಕೋಟೆಹಾಳ, ಕುಸನೂರು, ಮಲಕನಹಳ್ಳಿ ರಾಣಿಬೆನ್ನೂರು ತಾಲ್ಲೂಕಿನ ಬೆನಕನಹಳ್ಳಿ ಬ್ಯಾಡಗಿ ತಾಲ್ಲೂಕಿನ ಮೋಟೆಬೆನ್ನೂರು ಕದರಮಂಡಲಗಿ ಹಾಗೂ ಹಿರೇಕೆರೂರು ಮುಂತಾದೆಡೆ ಇಂತಹ ಕಲ್ಮನೆಯಂಥ ಗೋರಿಗಳಿವೆ. ಶಿಲೆಯ ಹಲಗೆಗಳನ್ನು ಉಳಿಸಿ ಮಾಡಿದ ಈ ಬೃಹತ್‌ಕಲ್ಮನೆ ಸಮಾಧಿಗಳನ್ನು ಪಾಂಡವರ ಕಟ್ಟಿ, ಸಿದ್ದರಕಟ್ಟಿ ಮೇರಿಯಕ ಅಂಗಡಿ ಎಂದೆಲ್ಲಾ ಕರೆಯುತ್ತಾರೆ. ಇದಲ್ಲದೆ ದೊಡ್ಡ ದೊಡ್ಡ ಕಲ್ಲುಗಳಿಂದ ರಚಿಸಿದ ಶಿಲಾವೃತ್ತಗಳೂ ಇವೆ[೯].

## ಬನವಾಸಿ ಕದಂಬರು

ಶಾತವಾಹನರ ತರುವಾಯ ಕ್ರಿ.ಶ. ನಾಲ್ಕನೇ ಶತಮಾನದ ಮಧ್ಯಭಾಗದಲ್ಲಿ ಬನವಾಸಿಯನ್ನು ತಮ್ಮ ಮೊದಲ ರಾಜಧಾನಿಯನ್ನಾಗಿ ಮಾಡಿಕೊಂಡು ಹಾವೇರಿ ಜಿಲ್ಲೆಯನ್ನೊಳಗೊಂಡಂತೆ ಉತ್ತರ ಕರ್ನಾಟಕದ ವಾಯುವ್ಯ ಭಾಗದಲ್ಲಿ ಪ್ರಪ್ರಥಮವಾಗಿ ಪ್ರಬಲ ಸ್ವತಂತ್ರವಾಗಿ ಸ್ಥಳೀಯ ರಾಜ್ಯವನ್ನು ಸ್ಥಾಪಿಸಿದ ಕೀರ್ತಿ ಬನವಾಸಿ ಕದಂಬರಿಗೆ ಸಲ್ಲುತ್ತದೆ[೧೦]. ಇದರ ಸ್ಥಾಪಕ ಮಯೂರಶರ್ಮ(ವರ್ಮ). ಶಿವಮೊಗ್ಗ ಜಿಲ್ಲೆಯ ತಾಳಗುಂದ ಅಗ್ರಹಾರದ ಬ್ರಾಹ್ಮಣನಾದ ಈತನು ಪಲ್ಲವ ರಾಜಧಾನಿ ಕಾಂಜಿ ಘಟಿಕಾ ಸ್ಥಾನಕ್ಕೆ ಹೆಚ್ಚಿನ ಶಿಕ್ಷಣಕ್ಕಾಗಿ ತೆರಳಿರಲು ಅಲ್ಲಿ ಅವಮಾನಿತನಾಗಿ ಬಂಡೆದ್ದು ಪ್ರಥಮ ಕನ್ನಡ ಮೂಲದ ರಾಜವಂಶವನ್ನು ಸ್ಥಾಪಿಸಿದ್ದು ಹಾವೇರಿ ಜಿಲ್ಲೆಯ ಕೆಲವು ಭಾಗಗಳಲ್ಲಿ ಆಳ್ವಿಕೆ ಮಾಡಿರುವುದು ಶಾಸನಗಳಲ್ಲಿ ಉಲ್ಲೇಖವಾಗಿದೆ.

ಹಾವೇರಿ ಜಿಲ್ಲೆಯಲ್ಲಿ ಕದಂಬರ ರಾಜಕೀಯ ಇತಿಹಾಸದ ಬಗ್ಗೆ ತಿಳಿಯುವಾಗ ಮಯೂರಶರ್ಮನ ನಂತರ ಬಂದ ಕೊಂಗವರ್ಮ ಅವರ ಮಗ ಭಗೀರಥ ನಂತರ ರಘು ಇವರುಗಳು ಬನವಾಸಿಯಿಂದ ಆಳ್ವಿಕೆ ಮಾಡಿದರು ಈ ಕಾಲದಲ್ಲಿ ಇವರಿಗೆ ಪಲ್ಲವರಿಂದಲೂ ಅನ್ಯ ಶತೃಗಳಿಂದಲೂ ತೊಂದರೆಯಾಗಿದ್ದರೂ ಅದನ್ನು ಪ್ರತಿಭಟಿಸಿ ನಿಲ್ಲುವಲ್ಲಿ

ಸಮರ್ಥರಾದರು. ರಘು ತನ್ನ ಶತೃಗಳನ್ನು ಸೋಲಿಸಿ ಪೃಥುವಿನಂತೆ ತನ್ನ ರಾಜ್ಯವನ್ನು ಶತೃಗಳಿಂದ ಮುಕ್ತಗೊಳಿಸಿದನೆಂದು ಹೇಳಿದೆ. ಅಂದರೆ, ಈತನ ಕಾಲದಲ್ಲಿ ಯುವರಾಜನಾಗಿದ್ದ ಅವನ ತಮ್ಮ ಕಾಕುಸ್ಥನು ಸಮರ್ಥ ದೊರೆಗಳಲ್ಲಿ ಒಬ್ಬನಾಗಿದ್ದು ಈತನ ಆಳ್ವಿಕೆಯ ಕಾಲದ ತಾಳಗುಂದ ಶಾಸನವು ಕದಂಬರ ಇತಿಹಾಸವನ್ನು ವಿವರವಾಗಿ ತಿಳಿಸುತ್ತದೆ[೧೧]. ಹಾವೇರಿ ತಾಲ್ಲೂಕಿನ ದೇವಗಿರಿಯಲ್ಲಿ ದೊರೆತ ಮೂರು ಮತ್ತು ನಾಲ್ಕನೇ ವರ್ಷದ ತಾಮ್ರ ಪಟಗಳು ಅರ್ಹದೇವರಿಗೆ ದಾನ ನೀಡಿದ ವಿವರಗಳನ್ನು ಹೇಳುತ್ತವೆ. ಎರಡನೇ ಶಾಸನವು ಅರ್ಹಚ್ಛಲದಲ್ಲರುವ ಬಸದಿಗೂ, ಶ್ವೇತಾಂಬರ ಮತ್ತು ದಿಗಂಬರ ಸನ್ಯಾಸಿಗಳಿಗೂ ದಾನ ನೀಡಿದ ಸಂಗತಿಗಳನ್ನು ಹೇಳುತ್ತವೆ. ನಂತರ ಈತನ ಮಗನಾದ ಶಾಂತಿವರ್ಮನು ಬಹುಶಃ ತನ್ನ ತಂದೆಯ ಕಾಲದಲ್ಲಿ ಜಂಟಿ ಅರಸನೂ ಆಗಿದ್ದು (ತಾಳಗುಂದ ಶಾಸನವು ಅಲ್ಲಿನ ಶಿವಾಲಯಕ್ಕೆ ತನ್ನ ತಂದೆಯ ಕಾಲಕ್ಕೆ ಈತನು ಇತ್ತ ದಾನದ ದಾಖಲೆಯಾಗಿದೆ) ಇತ್ತೀಚೆಗೆ ದೊರೆತ ಬ್ಯಾಡಗಿ ತಾಲ್ಲೂಕಿನ ಮತ್ತೂರು ತಾಮ್ರಪಟದಲ್ಲಿ ಹಿಂದೆ ಈ ವಂಶದವನೆಂದು ಹೇಳಲಾದ ಶಿವಮಾಂದತ್ವ ವರ್ಮನ ಹದಿಮೂರನೇ ಆಡಳಿತದ ವರ್ಷದ್ದಾಗಿದ್ದು ಇದರ ಲಿಪಿ ತಾಳಗುಂದ ಶಾಸಕ್ಕೆ ನಿಕಟವಾಗಿದೆ. ಹೀಗಾಗಿ ಈ ಹೆಸರಿನ ರಾಜನು ಕಾಕುತ್ಸವರ್ಮನ ಮಗನಾಗಿದ್ದು ಬನವಾಸಿಯಿಂದ ಆಳುತ್ತಿದ್ದಿರಬಹುದೆಂದು ವಿದ್ವಾಂಸರಾದ ಡಾ.ದೇವರಕೊಂಡಾ ರೆಡ್ಡಿ ಅವರು ಅಭಿಪ್ರಾಯಪಡುತ್ತಾರೆ. ಇವನ ಅಣ್ಣ ಶಾಂತಿವರ್ಮನು ನಂತರ ಆಳಿರಬಹುದು. ಈತನ ಸಹೋದರನಾದ ಒಂದನೇ ಕೃಷ್ಣವರ್ಮನು ತ್ರಿಪರ್ವತದಲ್ಲಿ ಮಾಂಡಳಿಕನಾಗಿದ್ದು ಆತನು ಅಣ್ಣನ ವಿರುದ್ಧ ಬಂಡೆದ್ದ ಈ ತ್ರಿಪರ್ವತ ಯಾವುದೆಂದು ಬಹಳಷ್ಟು ಚರ್ಚೆ ನಡೆದಿದ್ದರೆ ಇದು ಹಾವೇರಿ ತಾಲ್ಲೂಕಿನ ದೇವಗಿರಿ ಇರಬೇಕೆಂದು ಹಲವಾರು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

## ಬಾದಾಮಿ ಚಲುಕ್ಯರು

ಕರ್ನಾಟಕ ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಯಲ್ಲಿ ಚಾಲುಕ್ಯರ ಪಾತ್ರ ಬಹಳ ಹಿರಿದಾದುದು. ಕದಂಬರಂತೆ ಇವರೂ ಕೂಡ ತಮ್ಮನ್ನು ಹಾರಿತೀಪುತ್ರರೆಂದು ಕರೆದುಕೊಂಡಿದ್ದಾರೆ. ಮಾನವ ಗೋತ್ರದವರೆಂದೂ ಹಾಗೂ ತಮ್ಮ ಆರಂಭದ ಶಾಸನಗಳಲ್ಲಿ ಉಲ್ಲೇಖವಾದಂತೆ "ಚಲುಕ್ಯರು" ಎಂದು ತಮ್ಮನ್ನು ಕರೆದುಕೊಂಡಿದ್ದಾರೆ. ಕ್ರಿ.ಶ. ೫೪೩ರಲ್ಲಿ ಒಂದನೇ ಪುಲಿಕೇಶಿಯು ಬಾದಾಮಿ ಕೋಟೆಯನ್ನು ಕಟ್ಟಿದನೆಂದು, ಅಶ್ವಮೇಧಯಾಗ ಮಾಡಿದನೆಂದು ಬಾದಾಮಿ ಬಂಡೆಗಲ್ಲು ಶಾಸನದಲ್ಲಿ ಉಲ್ಲೇಖವಾಗಿದೆ.[೧೩]. ಗಂಗರು ಮತ್ತು ಕದಂಬರನ್ನು ಸೋಲಿಸಿದ ಈತನು ಕ್ರಿ.ಶ.೫೪೦ರ ಸುಮಾರಿಗೆ ಸ್ವತಂತ್ರವಾಗಿದ್ದು, ಅದಕ್ಕೆ ಮೊದಲು ಕದಂಬರ ಮಾಂಡಳೀಕನಾಗಿದ್ದು ತಂದೆ ರಣರಾಗ ಹಾಗೂ ತಾತ ಜಯಸಿಂಹನನ್ನು ಶಾಸನಗಳು ಉಲ್ಲೇಖಿಸಿರುವುದು. ಜೊತೆಗೆ ಅಯೋಧ್ಯೆಯ ಮೂಲದವರೆಂದು ಹೇಳಿಕೊಂಡವರೇ ಶಾಸನಗಳಲ್ಲಿ ಚಾಲುಕ್ಯ, ಚಲ್ಕ, ಸಲ್ಕಿ ಎಂಬ ಹೆಸರುಗಳಿಂದ

ಕರೆದುಕೊಂಡಿದ್ದು ಸಲ್ಕ ಅಥವಾ ಸಲಕೆಗೆ ಸಂಬಂಧವುಳ್ಳ ಕೃಷಿಕ ಮೂಲದವರೆಂದು ಡಾ. ನಂದೀಮಠರು ಅಭಿಪ್ರಾಯ ಪಟ್ಟಿದ್ದಾರೆ[೧೪].

ಈ ಜಿಲ್ಲೆಯ ಶಾಸನಗಳಲ್ಲಿ ಉಲ್ಲೇಖವಾದಂತೆ ಕ್ರಿ.ಶ. ೭೦೭ರ ಶಿಗ್ಗಾಂವಿ ತಾಮ್ರಪಟ ಶಾಸನದಲ್ಲಿ[೧೫] ಗುಡಿಗೇರಿ ಊರನ್ನು ಲಕ್ಷ್ಮೇಶ್ವರದ ಬಸದಿಗೆ ದಾನವಿತ್ತ ಮಾಹಿತಿಯಿದ್ದು ಹಿಂದೆ ಇದ್ದಂತಹ ೧೪ ಜಲಾಶಯಗಳ ಉಲ್ಲೇಖವಿದೆ. ಅಂದರೆ, ಚಾಲುಕ್ಯರು ನೀರಾವರಿಗೆ ಎಷ್ಟೊಂದು ಪ್ರಾಶಸ್ತ್ಯ ನೀಡಿರುವುದು ತಿಳಿಯುತ್ತದೆ. ಈ ಮನೆತನದ ಇಮ್ಮಡಿ ಪುಲಕೇಶಿ ಕರ್ನಾಟಕವನ್ನು ಏಕಾಡಳಿತಕ್ಕೆ ಒಳಪಡಿಸಿದ ಪ್ರಪ್ರಥಮ ಅರಸ. ಕದಂಬರು ಮತ್ತು ಗಂಗರು ಇವರ ಅಧೀನರಾಗಿ ಕಾವೇರಿಯಿಂದ ನರ್ಮದಾವರೆಗಿನ ವಿಶಾಲ ಪ್ರದೇಶದಲ್ಲಿ ಪುಲಿಕೇಶಿಯು ತನ್ನ ಸಾಮ್ರಾಜ್ಯವನ್ನು ವಿಸ್ತರಿಸಿದನು. ಈ ವಿಶಾಲ ಸಾಮ್ರಾಜ್ಯ ಮುಂದೆ ರಾಷ್ಟ್ರಕೂಟರು ಮತ್ತು ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಮುಂದುವರೆದು ಪ್ರತಿಷ್ಠ ಅಖಿಲಭಾರತ ಮಟ್ಟದಲ್ಲಿ ಬೆಳೆದು ಚಾಲುಕ್ಯ ಸೇನೆಯು ಕರ್ಣಾಟ ಬಲ ಎಂದು ಪ್ರಸಿದ್ದಿಗೆ ಬಂತಷ್ಟೇ ಅಲ್ಲ 'ಕರ್ಣಾಟ ಬಲಾ ಅಜೇಯಂ' ಎಂಬ ಕೀರ್ತಿಗೆ ಭಾಜನವಾಯಿತು[೧೬]. ಇವರು ಮೂಲದಲ್ಲಿ ವೈಷ್ಣವರಾಗಿದ್ದು ವರಾಹ ಲಾಂಛನವನ್ನು ಹೊಂದಿದ್ದು ಒಂದನೇ ವಿಕ್ರಮಾಧಿತ್ಯನ ಕಾಲದಲ್ಲಿ ಶೈವರಾದರೂ ಧಾರ್ಮಿಕ ಸಮನ್ವಯತೆಯ ನಿಲುವನ್ನು ಮಾತ್ರ ಕೈಬಿಡಲಿಲ್ಲ. ನಂತರ ವಿಜಯಾಧಿತ್ಯನು ಕ್ರಿ.ಶ. ೬೯೬ರಲ್ಲಿ ಪಟ್ಟಕ್ಕೆ ಬಂದು ತನ್ನ ತಂದೆಯ ಆಳ್ವಿಕೆಯಲ್ಲಿ ಉತ್ತರದ ದಿಗ್ವಿಜಯ ನಡೆಸಿದ್ದನು. ವಾಸ್ತವವಾಗಿ ಈತನ ಜೊತೆ ದಂಡೆಯಾತ್ರೆಗೆ ಹೊಗಿದ್ದ ಸೇನೆ ವಿಜಯಶಾಲಿಯಾಗಿ ಹಿಂದಿರುಗಿದರೂ ಈತ ಬಂಧನಕ್ಕೊಳಗಾಗಿದ್ದನು. ಈತನ ಅಗಲಿಕೆಯಿಂದ ಇವನ ತಂದೆ ದುಃಖದಿಂದ ಸಾವನ್ನಪ್ಪಲು, ವಿಜಯಾಧಿತ್ಯನು ಬಂಧನದಿಂದ ತಪ್ಪಿಸಿಕೊಂಡು ಬಂದು ಪಟ್ಟವೇರಿದನು. ಕ್ರಿ.ಶ ೭೦೭ರ ಶಿಗ್ಗಾವಿ ತಾಲ್ಲೂಕಿನ ತಾಮ್ರಪಟದ ಶಾಸನದಲ್ಲಿ[೧೭] ಕುಂಕುಮದೇವಿಯು ಪುಲಿಗೆರೆಯಲ್ಲಿ ಕಟ್ಟಿದ ಅನಸೆಟ್ಟಿ ಬಸದಿಗೆ ಗುಡಿಗೇರಿ ಗ್ರಾಮವನ್ನು ವಿಜಯಾಧಿತ್ಯನು ದಾನ ನೀಡಿದನು. ಈತನ ನಂತರ ಎರಡನೇ ವಿಕ್ರಮಾದಿತ್ಯ, ಎರಡನೇ ಕೀರ್ತಿವರ್ಮ ಅಧಿಕಾರ ನಡೆಸಿದರು. ಆದರೆ, ಹಾವೇರಿ ಜಿಲ್ಲೆಯಲ್ಲಿ ಬಾದಾಮಿ ಚಾಲುಕ್ಯರು ಆಳ್ವಿಕೆ ನಡೆಸಿರುವುದಕ್ಕೆ ಸಾಕಾಗುವಷ್ಟು ಶಾಸನಗಳು ಕಂಡುಬರುವುದಿಲ್ಲ. ಇವರ ತರುವಾಯ ರಾಷ್ಟ್ರಕೂಟರು ಆಳ್ವಿಕೆ ನಡೆಸಿದ್ದಾರೆ.

## ಬಾದಾಮಿ ಚಾಲುಕ್ಯರ ವಂಶಾವಳಿ



# ರಾಷ್ಟ್ರಕೂಟರು

ಬಾದಾಮಿ ಚಾಲುಕ್ಯರು ಮತ್ತು ಕಲ್ಯಾಣ ಚಾಲುಕ್ಯರಿಗೂ ನಡುವೆ ಸುಮಾರು ೨೨೫ ವರ್ಷಗಳಷ್ಟು ದೀರ್ಘಕಾಲ ಅಂದರೆ, ಕ್ರಿ.ಶ. ಎಂಟನೇ ಶತಮಾನದಿಂದ ಹತ್ತನೇ ಶತಮಾನದವರೆಗೆ ಆಳ್ವಿಕೆ ನಡೆಸಿದ ರಾಷ್ಟ್ರಕೂಟರು ಹಾವೇರಿ ಜಿಲ್ಲೆಯನ್ನೊಳಗೊಂಡಂತೆ ಇಡೀ ಕರ್ನಾಟಕದಲ್ಲಿ ಮೆರೆದರು. ಇವರು ರಾಜಕೀಯ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ಸಾರ್ವಭೌಮರಾಗಿ ಅಪರಿಮಿತ ಸಾಧನೆ ಮಾಡಿದರು. ಒಂದು ದೃಷ್ಟಿಯಿಂದ ಇವರ ಕಾಲ ಕರ್ನಾಟಕದ ಇತಿಹಾಸದಲ್ಲಿ ಮಾತ್ರವಲ್ಲದೇ ಇಡೀ ಭಾರತದ ಇತಿಹಾಸದಲ್ಲಿ ಸ್ಮರಣೀಯ ಅಧ್ಯಾಯವಾಗಿದೆ.

ಇವರು ಮೌರ್ಯ ದೊರೆ ಅಶೋಕನ ಕಾಲದಿಂದಲೂ 'ರಠಿಕ' ವಂಶದವರೆಂದು ಹೆಸರುವಾಸಿಯಾಗಿದ್ದು, ಅನಂತರ ರಟ್ಟರು ಅಥವಾ ರಾಷ್ಟ್ರಕೂಟರು ಎಂದು ಪ್ರಸಿದ್ಧರಾಗಿದ್ದರು. ಈ ಮನೆತನದ ಲಾಂಛನ ಗರುಡ. ಶಾಸನಗಳಲ್ಲಿ ಇವರನ್ನು ಲಟ್ಟಲೂರ ಪುರವರಾಧೀಶ್ವರ ಎಂದು ಉಲ್ಲೇಖಿಸಲಾಗಿದೆ[೧೮]. ಆದ್ದರಿಂದ ಇವರು ಮಹಾರಾಷ್ಟ್ರ ರಾಜ್ಯದ ಉಸ್ಮನಾಬಾದ್ ಜಿಲ್ಲೆಯಲ್ಲಿರುವ ಇಂದಿನ ಲಾತೂರು ರಾಷ್ಟ್ರಕೂಟರ ಪೂರ್ವಿಕರ ಸ್ಥಳವಾಗಿದ್ದು, ಇವರು ಅಲ್ಲಿಯ ಪ್ರಭುಗಳಾಗಿದ್ದರು ಎಂದು ಮನವರಿಕೆಯಾಗುತ್ತದೆ[೧೯]. ಹಾವೇರಿ ಜಿಲ್ಲಾ ವ್ಯಾಪ್ತಿಯಲ್ಲಿ ಇವರ ಶಾಸನಗಳು ಕಂಡುಬಂದಿದ್ದು ದಂತಿದುರ್ಗ, ಒಂದನೇ ಕೃಷ್ಣ, ಧೃವ, ಮೂರನೇ ಗೋವಿಂದ, ಅಮೋಘವರ್ಷ ನೃಪತುಂಗ, ಎರಡನೇ ಕೃಷ್ಣ, ಇಂದ್ರ ಇವರುಗಳ ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ.

## ದಂತಿದುರ್ಗ (ಸುಮಾರು ಕ್ರಿ.ಶ. ೭೩೫–೭೫೬):

ಎರಡನೇ ಇಂದ್ರ ಮತ್ತು ಚಾಲುಕ್ಯ ರಾಜಕುಮಾರಿ 'ಭಾವನಾಗರ' ಮಗನಾಗಿದ್ದು, ತಾಯಿ ಕಡೆಯಿಂದ ಚಾಲುಕ್ಯ ವಂಶಕ್ಕೆ ಸೇರಿದ ದಂತಿದುರ್ಗ ಮಹತ್ವಾಕಾಂಕ್ಷಿ ಉಳ್ಳವನಾಗಿದ್ದು ತಾನೇ ಒಂದು ಸ್ವತಂತ್ರ್ಯ ಸಾಮ್ರಾಜ್ಯವನ್ನು ಸ್ಥಾಪಿಸಲು ನಿರ್ಧರಿಸಿ ಬಾದಾಮಿ ಚಾಲುಕ್ಯ ರಾಜ ಎರಡನೇ ಕೀರ್ತಿವರ್ಮನ ಕಾಲದಲ್ಲಿ ಉಂಟಾದ ರಾಜಕೀಯ ಅಭದ್ರತೆಯ ಪರಿಸ್ಥಿತಿಯ ಪೂರ್ಣ ಉಪಯೋಗವನ್ನು ಪಡೆದು ಕರ್ನಾಟಕದಲ್ಲಿ 'ರಾಷ್ಟ್ರಕೂಟ' ಸಾಮ್ರಾಜ್ಯದ ಸ್ಥಾಪನೆಯ ಮೂಲ ಪುರುಷನಾಗಿ ಉದಯಿಸಿದನು. ಈತ ಬಾದಾಮಿ ಚಾಲುಕ್ಯರ ಮಾಂಡಳಿಕನಾಗಿದ್ದು, ಮಹಾರಾಷ್ಟ್ರ ಗುಜರಾತ್‌ಗಳ ಗಡಿ ಪ್ರದೇಶದಲ್ಲಿ ಆಳುತ್ತಿದ್ದು ಗುಜರಾತಿನ ಚಾಲುಕ್ಯ ರಾಜಕುಮಾರಿಯನ್ನು ಕಲ್ಯಾಣ ಮಂಟಪದಿಂದ ಬಲವಂತವಾಗಿ ಅಪಹರಿಸಿ ಮದುವೆಯಾಗುತ್ತಿದ್ದನು. ಈತನು ಚಾಲುಕ್ಯ ರಾಜಕುಮಾರಿಯ ಪುತ್ರ ಕಾಂಚೀಶ, ಕೇರಳ ನರಾದೀಪ, ಚೋಳ, ಪ್ರಾಂತ್ಯ, ಶ್ರೀ ಹರ್ಷ, ವಜ್ರಟ ಇವರನ್ನೆಲ್ಲಾ ಸೋಲಿಸಲು ಸಮರ್ಥನಾದ ಅಜೇಯ "ಕರ್ನಾಟ ಬಲವನ್ನು"

ಪರಾಭವಗೊಳಿಸಿ 'ಚಾಲುಕ್ಯವಲ್ಲಭ' ಎಂಬ ಬಿರುದನ್ನು ಪಡೆದ ವಿಷಯವನ್ನು ಈತನ ಶಾಸನಗಳು ಸ್ಪಷ್ಟಪಡಿಸುತ್ತವೆ[೨೦].

## ಒಂದನೇ ಕೃಷ್ಣ (೭೫೦–೭೭೪):

ದಂತಿದುರ್ಗನು ಮರಣಹೊಂದಿದ ನಂತರ ಅವನಿಗೆ ಮಕ್ಕಳಿಲ್ಲದ ಕಾರಣ ಅವನ ಚಿಕ್ಕಪ್ಪನಾದ ಒಂದನೇ ಕೃಷ್ಣನು ಅಧಿಕಾರಕ್ಕೆ ಬಂದನು. ಈತ ಚಲುಕ್ಯ ದೊರೆ ಎರಡನೇ ಕೀರ್ತಿವರ್ಮನನ್ನು ರಣರಂಗದಲ್ಲಿ ಕೊಂದು, ಚಾಲುಕ್ಯವಶದಲ್ಲಿದ್ದ ರಾಜ್ಯಕ್ಕೆಲ್ಲಾ ಅಧಿಪತಿಯಾದನು. ನಂತರ ಗಂಗ ದೊರೆ, ಶ್ರೀ ಪುರುಷ ಮತ್ತು ವೆಂಗಿಯ ಚಾಲುಕ್ಯರ ದೊರೆ ನಾಲ್ಕನೇ ವಿಷ್ಣುವರ್ಧನರನ್ನು ಸೋಲಿಸಿ ವಿಂದ್ಯಾಪರ್ವತದ ದಕ್ಷಿಣ ಭಾಗದಿಂದ ಬೆಂಗಳೂರಿನವರೆಗೆ ಮತ್ತು ಅರಬ್ಬೀ ಸಮುದ್ರದಿಂದ ಹೈದ್ರಾಬಾದಿನವರೆಗೆ ಭೂ ಪ್ರದೇಶವನ್ನು ಸ್ವಾಧೀನಪಡಿಸಿಕೊಂಡು ರಾಷ್ಟ್ರಕೂಟರನ್ನು ದಕ್ಷಿಣ ಭಾರತದ ಬೃಹತ್ ಶಕ್ತಿಯಾಗಿ ಬೆಳೆಸಿದ್ದು ಈತನ ರಾಜಕೀಯ ಸಾಧನೆಯಾಗಿದೆ[೨೧]. ಕ್ರಿಶ ೭೦೭ರ ಶಿಗ್ಗಾಂವಿ ಗ್ರಾಮದ ಶಾಸನದಲ್ಲಿ ಆಲೋಪ ಚಿತ್ರವಾಹನ ಅರಸನ ವಿನಂತಿಯ ಮೇರೆಗೆ ಚಕ್ರವರ್ತಿ ವಿಜಯಾದಿತ್ಯನಿಗೆ ಪುಲಿಗೆರೆಯಲ್ಲಿ ಕುಂಕುಮದೇವಿ ಕಟ್ಟಿಸಿದ ಜೈನ ಬಸದಿಗೆ ಗುಡಿಗೆರೆ ಗ್ರಾಮದಾನ ನೀಡಿದ ಉಲ್ಲೇಖವಿದೆ[೨೨]. ಇದರಿಂದ ಈತನ ಸಾಮ್ರಾಜ್ಯದ ಗಡಿ ವಿಸ್ತಾರದಿಂದಲೇ ಹಾವೇರಿಯ ಬಹುಭಾಗ ಈತನ ಅಧೀನಕ್ಕೆ ಒಳಪಟ್ಟಿತ್ತು ಎಂದು ನಿರ್ಧರಿಸಬಹುದು. ಈತನ ತರುವಾಯ ಇವನ ಮಕ್ಕಳಾದ ಎರಡನೇ ಗೋವಿಂದ ಮತ್ತು ಧೃವ (ಕ್ರಿ.ಶ ೭೭೪–೮೦ ಮತ್ತು ೭೮೦–೭೯೩)ರಿಗೆ ಸಂಬಂಧಿಸಿದ ಶಾಸನಗಳು ಲಭ್ಯವಿರುವುದಿಲ್ಲ. ಆದರೆ, ರಾಜಕೀಯ ಇತಿಹಾಸದ ಅಧ್ಯಯನದ ದೃಷ್ಟಿಯಿಂದ ಎರಡನೇ ಗೊವಿಂದನ ಒಂದನೇ ಕೃಷ್ಣನ ಹಿರಿಯ ಮಗ ತಂದೆಯ ಆಳ್ವಿಕೆಯ ಕಾಲದಲ್ಲಿ ಗಂಗರು ಮತ್ತು ವೆಂಗಿಯ ಚಾಲುಕ್ಯರ ಮೇಲೆ ಹೋರಾಡಿದ ಸನ್ನಿವೇಶ ರಾಜ್ಯ ಸಂಘಟನೆಯಲ್ಲಿ ಉಂಟಾದ ಪ್ರಗತಿ ನಂತರ ರಾಜ್ಯಪರಿಪಾಲನೆಯಲ್ಲಿ ನಿರಾಸಕ್ತಿ ಅಧಿಕಾರದ ದುರಾಡಳಿತ ಮತ್ತು ದುಶ್ಚಟಗಳಿಗೆ ಬಲಿಯಾಗಿ ಐಶಾರಾಮಿ ಜೀವನದಲ್ಲಿ ಮುಳುಗಿದ ಇದರ ಸದುಪಯೋಗ ಪಡೆದ ಇವನ ತಮ್ಮ ಧೃವ ರಾಜ್ಯಾಡಳಿತದ ಸೂತ್ರವನ್ನು ಗೋವಿಂದನಿಂದ ಅಧಿಕಾರ ಕಬಳಿಸುವಲ್ಲಿ ಯಶಸ್ವಿಯಾದನು[೨೩].

## ಧೃವ (೭೫೦–೭೯೫):

ಒಂದನೇ ಕೃಷ್ಣನ ಮಗನಾದ ಧೃವನು ನಾಸಿಕ ಪ್ರಾಂತ್ಯದಲ್ಲಿ ಅಧಿಕಾರ ರೂಢನಾಗಿದ್ದು, ತನ್ನ ಅಣ್ಣನಾದ ೨ನೇ ಗೋವಿಂದನ ಅಧಿಕಾರ ಧಿಕ್ಕರಿಸಿ ಅನಂತರ ದಂಗೆಯೆದ್ದು ರಾಜ್ಯವನ್ನು ಕಸಿದು ತನ್ನ ಪ್ರಭುತ್ವವನ್ನು ಕ್ರಿ.ಶ. ೭೮೦ರಲ್ಲಿ ಪ್ರಾರಂಭಿಸಿದನು. ಈತನು ಗಂಗರ ಶ್ರೀಪುರುಷನನ್ನು ಸೋಲಿಸಿ ಅವನ ಮಗ ಶಿವಮಾರನನ್ನು ಸೆರೆಯಲ್ಲಿಟ್ಟು ಗಂಗವಾಡಿಯನ್ನು

ವಶಪಡಿಸಿಕೊಂಡನು. ತನ್ನ ಮಗ ಸ್ತಂಭನನ್ನು ಪ್ರಾಂತ್ಯಾಧಿಕಾರಿಯನ್ನಾಗಿ ನೇಮಿಸಿದನು[೨೨]. ಆದರೆ ಈತನಿಗೆ ಸಂಬಂಧಿಸಿದ ಶಾಸನಗಳು ಹಾವೇರಿ ಜಿಲ್ಲೆಯಲ್ಲಿ ದೊರೆಯುವುದಿಲ್ಲ. ಈತನ ತರುವಾಯ ೩ನೇ ಗೋವಿಂದ ಆಳ್ವಿಕೆ ನಡೆಸಿದ್ದಾನೆ.

## ಮೂರನೇ ಗೋವಿಂದ (೭೯೩-೮೧೪):

ಈತನು ಧ್ರುವನ ಮಗನಾಗಿದ್ದು ಈತನ ಆಳ್ವಿಕೆಯ ಕಾಲವು ಉನ್ನತಿಯನ್ನು ಹೊಂದಿತ್ತು. ಹಿಮಾಲಯದಿಂದ ಸಿಂಹಳದವರೆಗೆ ತನ್ನ ಪರಾಕ್ರಮವನ್ನು ನಡೆಸಿ ಈತನು ಪಟ್ಟವೇರಿದಾಗ ಗಂಗವಾಡಿಯಲ್ಲಿ ಮಾಂಡಳಿಕನಾಗಿದ್ದ ಈತನ ಅಣ್ಣನು ಬಂಡೇಳಲು ಈತನು ಬಂಧಿತ ಗಂಗಶಿವಮಾರನನ್ನು ಬಿಡುಗಡೆ ಮಾಡಿದನು. ಇದಾದ ಮೇಲೆ ಗೂರ್ಜರ ಪ್ರತಿಹಾರ ಎರಡನೇ ನಾಗಾಭಟ್ಟನನ್ನು ಸೋಲಿಸಿ ಮತ್ತು ಕನೂಜಿನ ಮೇಲೆ ಸಾಗಿ ಅಲ್ಲಿ ಆಳುತ್ತಿದ್ದ ಚಕ್ರಯುಧನನ್ನು ಪರಾಭವಗೊಳಿಸಿ ಕಪ್ಪ ಪಡೆದನು. ಬಂಗಾಳದ ಧರ್ಮಪಾಲನು ಈತನಿಗೆ ತಾನಾಗಿ ಶರಣಾದನು. "ಗೋವಿಂದನ ಕುದುರೆಗಳು ಹಿಮಾಲಯದಲ್ಲಿ ಹಿಮಕರಗಿದ ನೀರನ್ನು ಕುಡಿದವು ಆತನ ಆನೆಗಳು ಗಂಗಾನದಿಯ ಜಲದಿಂದ ತಮ್ಮ ನೀರಡಿಕೆ ಕಳೆದವು" ಎಂದು ಶಾಸನಗಳಲ್ಲಿ ಉಲ್ಲೇಖವಿದೆ[೨೩]. ಹಿರೇಕೆರೂರು ತಾಲ್ಲೂಕಿನ ಗುಂಡಕಟ್ಟಿಯ ತೇದಿರಹಿತ ಶಾಸನದಲ್ಲಿ[೨೪] ದಂತಿಗನು ಬನವಾಸಿ ೧೨೦೦೦ರಲ್ಲಿ ಆಳುತ್ತಿದ್ದಾಗ ಗುಡುಮರ ಪೊಲಹೋಚ್ಚನು ಮೇಂಟಿ ನಿಲ್ಲಿಸಿದ ವಿಷಯದ ಉಲ್ಲೇಖವಿದೆ ಹಾಗೂ ನೂಲಗೇರಿ ಗ್ರಾಮದ ಶಾಸನದಲ್ಲಿ ಮಾರಕ ಅರಸ ಬನವಾಸಿ ಆಳುವಾಗ ಕುಂದವಸಿ ಮತ್ತು ಅಜಾಕೆಯ್ಯರು ಮೇಟಿ ನಿಲ್ಲಿಸುವ ವಿಷಯದ ಪ್ರಸ್ಥಾಪವಿದೆ.

## ಅಮೋಘವರ್ಷ ನೃಪತುಂಗ (ಸು ಕ್ರಿ.ಶ. ೮೧೪-೮೭೮):

ಅಮೋಘವರ್ಷನು ಮೂರನೇ ಗೋವಿಂದನ ಮಗನಾಗಿದ್ದು ಈತನ ಮೊದಲ ಹೆಸರು ಶರ್ವ ಎಂಬುದಾಗಿದ್ದು, ಈತನು ಸಿಂಹಾಸನಾರೂಢನಾದ ನಂತರ ಅಮೋಘವರ್ಷ ಎಂಬ ಹೆಸರಿನಿಂದ ಪ್ರಸಿದ್ದನಾಗಿದ್ದಾನೆ. ಈತನು ನೃಪತುಂಗ, ರಟ್ಟಮಾರ್ತಾಂಡ, ವೀರನಾರಾಯಣ, ಅತಿಶಯದವಳ ಎಂಬ ಬಿರುದುಗಳನ್ನು ಹೊಂದಿದ್ದು ಹಿರಿಯರಿಂದ ತಾನು ಪಡೆದ ಸಾಮ್ರಾಜ್ಯವನ್ನು ಯಾವ ದೃಷ್ಟಿಯಿಂದಲೂ ದಕ್ಕೆಯಾಗದಂತೆ ಎಚ್ಚರ ವಹಿಸಿ ರಕ್ಷಿಸುವಲ್ಲಿ ಸಮರ್ಥ ದೊರೆ ಎನಿಸಿಕೊಂಡಿದ್ದ ಕ್ರಿ.ಶ. ೮೫೧ರಲ್ಲಿ ಭಾರತಕ್ಕೆ ಭೇಟಿ ನೀಡಿದ್ದ ಅರಬ್ ಪ್ರವಾಸಿ ಸುಲೈಮಾನ್ "ಈತನನ್ನು ಕುರಿತು ಅಮೋಘವರ್ಷನ ಸಾಮ್ರಾಜ್ಯ ಜಗತ್ತಿನ ನಾಲ್ಕು ಹಿರಿಯ ಸಾಮ್ರಾಜ್ಯಗಳಲ್ಲಿ" ಒಂದು ಎಂದಿದ್ದಾನೆ. ಈತ ಕೇವಲ ೧೪ ವರ್ಷದ ಬಾಲಕನಿದ್ದಾಗ ಪಟ್ಟವೇರಿದಾಗ ಉಂಟಾದ ಬಂಡಾಯವನ್ನು ಅವನ ದಾಯಾದಿಯಾದ ಗುಜರಾತಿನ ಸುವರ್ಣವರ್ಷನು ಈತನ ನೆರವಿಗೆ ನಿಂತು ಬಂಡಾಯಗಳನ್ನು ಮುರಿದನು. ಈತನ

ಪ್ರಾರಂಭದ ಕಾಲವನ್ನು ಅಂತಃಕಲಹಗಳ ಮತ್ತು ಹೋರಾಟಗಳ ಕಾಲವೆನ್ನಬಹುದು. ಕ್ರಿ.ಶ ೮೬೦ರಲ್ಲಿ[೨೭] ವೆಂಗಿಯ ಚಾಲುಕ್ಯರ ಮೇಲೆ ಯುದ್ಧ ಕೈಗೊಂಡ. ಆ ಸಂದರ್ಭದಲ್ಲಿ ರಾಜನಾಗಿದ್ದ ಗುಣವಿಜಯಾದಿತ್ಯ ಎಂಬುವವನನ್ನು ಸೋಲಿಸಿ ಹಿಮ್ಮೆಟ್ಟಿಸಿದನು. ನಂತರ ದೀರ್ಘಕಾಲ ರಾಜ್ಯವಾಳಿದ ಈತನು ವಿದ್ಯಾಪಕ್ಷಪಾತಿಯೂ ಧಾರ್ಮಿಕನೂ ಆಗಿದ್ದ ಖ್ಯಾತ ವಿದ್ವಾಂಸನು ಜೈನ ಸನ್ಯಾಸಿಗಳೂ ಆಗಿದ್ದ ವೀರಸೇನ, ಗುಣಭದ್ರ, ಶಕಟಾಯನ ಇವನ ಆಸ್ಥಾನದಲ್ಲಿದ್ದರೂ ಈತನ ಗಣ್ಯ ಸೇನಾನಿ ಬಂಕೆಯ ಬಂಕಾಪುರ ಗ್ರಾಮದ ನಿರ್ಮಾಣಕ್ಕೆ ಕಾರಣನಾದನು. ಆತನು ಕೊಣ್ಣೂರು (ಕೊಳನೂರು) ಪರಮೇಶ್ವರ ದೇವಾಲಯವನ್ನು ಕಟ್ಟಿಸಿದನು. ಈತನ ಕಾಲದ ಸವಣೂರ ತಾಲ್ಲೂಕಿನ ಬರಡೂರು ಶಾಸನದಲ್ಲಿ ಬನವಾಸಿ[೨೮] ೧೨,೦೦೦ವನ್ನು ಇಂದ್ರ ಆಳುತ್ತಿದ್ದ. ಕಿಮುಳೆಯಲ್ಲಿ ಇದ್ದ ಅಗ್ರಹಾರದ ಉಲ್ಲೇಖವಿದೆ. ಇದೇ ರೀತಿ ಉಣಕಲ್-೩೦ ಎಂಬ ಪ್ರದೇಶದ ಪ್ರಸ್ತಾಪವು ಶಾಸನದಲ್ಲಿ ಕಂಡುಬಂದಿದೆ ರಾಣೆಬೆನ್ನೂರು ಕ್ರಿ.ಶ.೮೫೯ರ ಶಾಸನದಲ್ಲಿ[೨೯] ಪೊಲಬ್ಬೆ ಎಂಬುವವಳು ಕಟ್ಟಿಸಿದ ಬಸದಿಗೆ ಭೂದಾನ ನೀಡಿದ ವಿಷಯ ಮತ್ತು ಇದೆ ತೇದಿರಹಿತ ಹಾನಗಲ್ ತಾಲ್ಲೂಕಿನ ಅರಿಶಿಣಗುಪ್ಪೆಯ ಶಾಸನದಲ್ಲಿ[೩೦] ಬನವಾಸಿ ೧೨೦೦೦ದ ಅಧಿಕಾರಿ ಬಂಕೆಯನಿಂದ ಕಂಕಾಳಗೋರವನಿಗೆ ಕಿರುಗುಪ್ಪ ಗ್ರಾಮದಾನ ನೀಡಿದ ಉಲ್ಲೇಖವಿದೆ ನಂತರ ಮಂತ್ರವಾಡಿಯ ಕ್ರಿ.ಶ.೮೬೫ರ ಶಾಸನದಲ್ಲಿ ಎಳ್ಪುಣಸೆ[೩೧] ಅಗ್ರಹಾರದ ಉಲ್ಲೇಖವಿದ್ದೂ ಆ ಅಗ್ರಹಾರದವರು ಆದಿತ್ಯ ಭಟಾರರಿಗೆ ದಾನ ನೀಡಿದ ವಿಷಯವಿದೆ. ಹಾಗೂ ಶಿಗ್ಗಾಂವಿ ಶಾಸನದಲ್ಲಿ[೩೨] ಈ ಅಗ್ರಹಾರದ ೪೦ ಮಹಾಜನರು ಮೂಲಸ್ಥಾನ ದೇವರಿಗೆ(ಈಶ್ವರ) ದಾನ ನೀಡಿದ ಮಾಹಿತಿಯು ಲಭ್ಯವಾಗಿದೆ. ಇದೇ ತಾಲ್ಲೂಕಿನ ಗುಡ್ಡದ ಚನ್ನಾಪುರ ಗ್ರಾಮದ ಶಾಸನದಲ್ಲಿ[೪೩] ಬನವಾಸಿಯನ್ನು ಲೋಕಟೆ ಆಳುತ್ತಿರಲು ಕುಂದವೂರ-೩೦ಕ್ಕೆ ಚಂದ್ರಯ್ಯ ನಾಡಗೌಡನಾಗಿದ್ದನೆಂದು ತಿಳಿಸಿದೆ. ಹೀಗೆ ತನ್ನದೇ ಆದ ರೀತಿಯಲ್ಲಿ ಅಮೋಘವರ್ಷನು ಆಳ್ವಿಕೆಯನ್ನು ನಡೆಸಿದ್ದಾನೆ.

## ಎರಡನೇ ಕೃಷ್ಣ (೮೭೮-೯೧೪):

ಅಮೋಘವರ್ಷನ ನಂತರ ಆತನ ಮಗನಾದ ಎರಡನೇ ಕೃಷ್ಣನು ಸಿಂಹಾಸನಾರೂಢನಾದನು. ಈತನಿಗೆ ಅಕಾಲವರ್ಷ, ಶುಭತುಂಗ, ಪೃಥ್ವೀವಲ್ಲಭ ಮೊದಲಾದ ಬಿರುದುಗಳಿದ್ದವು. ಈತ ಜೈನ ವಿದ್ವಾಂಸ ಗುಣಭದ್ರರಿಂದ ಶಿಕ್ಷಣ ಪಡೆದಿದ್ದನು. ಕೃಷ್ಣನು ವೆಂಗಿ ಚಾಲುಕ್ಯರ ವಿರುದ್ಧ ದೀರ್ಘ ಹೋರಾಟ ನಡೆಸಬೇಕಾಯಿತು. ಹಾಗೂ ಅನೇಕ ಬಾರಿ ಅವನು ಸೋಲನ್ನುಂಡನು. ಆದಿತ್ಯ ಚೋಳನಿಗೆ ತನ್ನ ಮಗಳನ್ನು ಮದುವೆ ಮಾಡಿಕೊಟ್ಟು ಅವನು ಉರೆಯೂರಿನ ಚೋಳರ ಉತ್ತರಾಧಿಕಾರಕ್ಕೆ ನಡೆದ ಯುದ್ದದಲ್ಲಿ ತನ್ನ ಮೊಮ್ಮಗ ಕನ್ನರನಿಗೆ ಪಟ್ಟಕೊಡಿಸಲು ವ್ಯರ್ಥ ಹೋರಾಟ ಮಾಡಿದನು. ಆದರೆ, ಮಧ್ಯ ಭಾರತದ ಗೂರ್ಜರ ಪ್ರತಿಹಾರ ಭೋಜನನ್ನು ಸೋಲಿಸಿ ಅವನಿಂದ ಕಪ್ಪವನ್ನು ಸಂಗ್ರಹಿಸಿ ಗುಜರಾತಿನ ರಾಷ್ಟ್ರಕೂಟ ಶಾಖೆಯನ್ನು ಕೊನೆಗೊಳಿಸಿದನು. ಕ್ರಿ.ಶ.

೯ನೇ ಶತಮಾನದಲ್ಲಿ ಹಿರೇಕೆರೂರು ತಾಲ್ಲೂಕಿನ ಅಣಜಿಯ ಶಾಸನದಲ್ಲಿ[೩೪] ಲೋಕಟೆ ಬನವಾಸಿನಾಡನ್ನಾಳುವಾಗ ದೇವಾಲಯಕ್ಕೆ ನೀಡಿದ ಭೂದಾನದ ಪ್ರಸ್ತಾಪವಿದೆ. ರಾಣಿಬೆನ್ನೂರು ತಾಲ್ಲೂಕಿನ ಹೊನ್ನತ್ತಿ ಶಾಸನದಲ್ಲಿ[೩೫] ಲೋಕಟೆ ಎಂಬಾತನು ಬನವಾಸಿ ೧೨೦೦೦ ಆಳುತ್ತಿದ್ದನೆಂದು ಅವನ ಮಗ ಕಲಿವಿಟ್ಟನು ಪುನ್ನವಂತಿ-೧೨ (ಹೊನ್ನತ್ತಿ) ಭಾಗವನ್ನು ಆಳುತ್ತಿದ್ದನೆಂದು ತಿಳಿಯುತ್ತದೆ.

ನಂತರ ಈತನ ಮೊಮ್ಮಗನಾದ (ಜಗತ್ತುಂಗನು ಬಹುಶಃ ಯುವರಾಜನಾಗಿದ್ದ ಕಾಲದ ಒಂದು ಶಾಸನದಲ್ಲಿ ರಾಣಿಬೆನ್ನೂರು ತಾಲ್ಲೂಕಿನ ಹೂಲಿಹಳ್ಳಿಯಲ್ಲಿ ಇದ್ದು ಆಗ ರಾಜಾದಿತ್ಯ ಬನವಾಸಿಯನ್ನಾಳುತ್ತಿದ್ದನೆಂದು) ಮೂರನೇ ಇಂದ್ರನು (೯೧೪-೯೨೨) ಅಧಿಕಾರಕ್ಕೆ ಬಂದನು. ಈತನು ಪರಮಾರ ಉಪೇಂದ್ರನ ಧಾಳಿಯನ್ನು ಎದುರಿಸಿ ಅವನನ್ನು ಸೋಲಿಸಿ ಹಿಂದಕ್ಕಟ್ಟಿದನು. ಗೂರ್ಜರ ಪ್ರತೀಹಾರ ವಂಶದಲ್ಲಿ ನಡೆದ ಅಂತಃಕಲಹದ ಲಾಭಪಡೆದು ಇಂದ್ರನು ಉತ್ತರದಲ್ಲಿ ಯಮುನಾ ನದಿಯನ್ನು ದಾಟಿ ಕನೋಜನ್ನು ಗೆದ್ದು ತನ್ನ ವಶಪಡಿಸಿಕೊಂಡನು. ಈ ಕಾಲಾವಧಿಯು ಭಾರತದಲ್ಲಿ ಕನೋಜದ ಅಧಿರಾಜತ್ವದ ಕಾಲ ಎಂದು ಹೇಳುವ ಉತ್ತರ ಭಾರತದ ಇತಿಹಾಸಕಾರರಿಗೆ ಕನೋಜ ಅರಸನಾದ ಹರ್ಷ ಇಂದ್ರಾಯುಧ, ಚಕ್ರಾಯುಧರನ್ನು ಸೋಲಿಸಿ ಮುಂದೆ ಕನೋಜನ್ನೆ ತನ್ನ ವಶದಲ್ಲಿ ಇರಿಸಿಕೊಂಡು ಕರ್ನಾಟಕ ಅರಸರ ಸಾಧನೆಯನ್ನು ಗಮನಿಸಿ ಇದು ಭಾರತದ ಇತಿಹಾಸದಲ್ಲಿ ಕರ್ನಾಟಕದ ಅಧಿರಾಜತ್ವದ ಕಾಲ ಎಂಬ ಸಂಗತಿ ಇನ್ನೂ ಮನವರಿಕೆಯಾಗಬೇಕಾಗಿದೆ. ಈತನ ನಂತರ ಇವನ ಮಕ್ಕಳಾದ ಎರಡನೇ ಅಮೋಘವರ್ಷ (೯೨೯-೯೩೦) ಮತ್ತು ೪ನೇ ಗೋವಿಂದ (೯೩೦-೯೩೬) ಆಳ್ವಿಕೆ ನಡೆಸಿದ್ದಾರೆ. ನಂತರ ೨ನೇ ಜಗತ್ತುಂಗನ ಮಗ ಮತ್ತು ೩ನೇ ಇಂದ್ರನ ಸಹೋದರನಾದ ೩ನೇ ಅಮೋಘವರ್ಷ (೯೩೬-೯೩೯)ನು ಆಳ್ವಿಕೆ ನಡೆಸಿದ ಬಗ್ಗೆ ಶಾಸನಗಳಲ್ಲಿ ಉಲ್ಲೇಖವಿದೆ. ಮೂರನೇ ಇಂದ್ರ ರಾಣಿಬೆನ್ನೂರು ತಾಲ್ಲೂಕಿನ ಇಟಗಿಯ ಕ್ರಿ.ಶ. ೯೧೬ರ ಶಾಸನದಲ್ಲಿ[೩೬] ಧೋರ ಎಂಬಾತನು ಬನವಾಸಿಯ ಅಧಿಕಾರಿ ಎಂದು ಮತ್ತು ಕ್ರಿ.ಶ ೯೧೮ರ ಹಿರೇಮಗನೂರು ಶಾಸನದಲ್ಲಿ[೩೭] ಬಂಕೆಯನು ಬನವಾಸಿಯ ಆಡಳಿತಾಧಿಕಾರಿಯೆಂದು ಹೇಳಿದೆ. ಮತ್ತು ಹತ್ತಿಮತ್ತೂರ ಐವತ್ತುಕಾಲ (ಗ್ರಾಮಸಭೆ)ದ ಉಲ್ಲೇಖ ಕ್ರಿ.ಶ. ೯೧೬-೯೧೭ರ ಶಾಸನದಲ್ಲಿದೆ[೩೮]. ನಂತರ ಇಂದ್ರನ ಮಗನಾದ ೪ನೇ ಅಮೋಘವರ್ಷನು ಕೇವಲ ಒಂದು ವರ್ಷ (೯೨೯) ಆಳ್ವಿಕೆಮಾಡಿ ಇಂದ್ರನ ಇನ್ನೊಬ್ಬ ಮಗನಾದ ನಾಲ್ಕನೇ ಗೋವಿಂದನನ್ನು (೯೨೦)ಕ್ಕೆ ಪಟ್ಟಕ್ಕೆ ತಂದನು ಈತನು ದುರ್ಬಲ ಅರಸನಾಗಿದ್ದು ವೆಂಗಿ ಚಲುಕ್ಯನು ಇವನನ್ನು ಸೋಲಿಸಿದರಲ್ಲದೆ ಕನೋಜದ ಮೇಲೆ ರಾಷ್ಟ್ರಕೂಟರಿಗಿದ್ದ ಹಿಡಿತವೂ ತಪ್ಪಿಹೋಯಿತು. ಕ್ರಿ.ಶ. ೯೩೧ರ ಅರಳಿಕಟ್ಟೆ ಶಾಸನದಲ್ಲಿ[೩೯] ಮಾಟೂರು ವಂಶದ ಮಾಂಚಿಯರಸ ಎಂಬ ಮಾಂಡಳೀಕನ ಉಲ್ಲೇಖವಿದೆ. ಹೀಗೆ ರಾಷ್ಟ್ರಕೂಟರು ಹಾವೇರಿ ಜಿಲ್ಲೆಯನ್ನು ಒಳಗೊಂಡಂತೆ ತಮ್ಮದೆ ಆದ ರೀತಿಯಲ್ಲಿ ಆಳ್ವಿಕೆ ಮಾಡಿರುವುದು ಇಲ್ಲಿ ದೊರೆತಿರುವ ಶಾಸನಗಳಿಂದ ಉಕ್ತವಾಗುತ್ತದೆ. ಇವರ ನಂತರ ಕಲ್ಯಾಣ ಚಾಲುಕ್ಯರು ಆಡಳಿತದ ಚುಕ್ಕಾಣಿ ಹಿಡಿಯುವಲ್ಲಿ ಯಶಸ್ವಿಯಾದರು.

## ರಾಷ್ಟ್ರಕೂಟರ ವಂಶವಾಹಿನಿ



## ಕಲ್ಯಾಣ ಚಾಳುಕ್ಯರು

ಕಲ್ಯಾಣ ಚಾಳುಕ್ಯರು ಮೂಲತಃ ಬಾದಾಮಿ ಚಾಳುಕ್ಯರ ವಂಶದವರಾಗಿದ್ದು ಇವರಿಬ್ಬರಿಗೂ ಮಧ್ಯದಲ್ಲಿ ಸುಮಾರು ೨೨೫ ವರ್ಷಗಳಷ್ಟು ದೀರ್ಘಕಾಲ ಆಳ್ವಿಕೆ ನಡೆಸಿದ ರಾಷ್ಟ್ರಕೂಟರ ತರುವಾಯ ಹಾವೇರಿ ಜಿಲ್ಲೆಯನ್ನೊಳಗೊಂಡಂತೆ ಉತ್ತರ ಕರ್ನಾಟಕದ ಬಹುಭಾಗವಲ್ಲದೆ, ಸುತ್ತಲಿನ ದಕ್ಷಿಣ ಕರ್ನಾಟಕ ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರ ಪ್ರದೇಶಗಳ ಮೇಲೆ ತಮ್ಮದೇ ಆದ ಆಳ್ವಿಕೆಯನ್ನು ನಡೆಸಿದರು[೪೦]. ಕ್ರಿ.ಶ. ೯೭೩ರಲ್ಲಿ ಈ ಮನೆತನದ ಆಳ್ವಿಕೆಯು ಪ್ರಾರಂಭವಾಗಿದ್ದು ಆ ವರ್ಷ ರಾಷ್ಟ್ರಕೂಟರ ಸಾಮಂತರಲ್ಲಿ ಒಬ್ಬನಾಗಿದ್ದು ೨ನೇ ತೈಲಪನು ಚಾಳುಕ್ಯರ ಮುಂದಾಳತ್ವವಹಿಸಿ ಸುಮಾರು ೩೦೦ ವರ್ಷಗಳ ಹಿಂದೆ ತನ್ನ ಪೂರ್ವಜರಿಂದ ಅಧಿಕಾರ ಕಸಿದು ಕೊಂಡಿದ್ದ ದಂತಿದುರ್ಗನ ಯುಕ್ತಿಯ ಮಾರ್ಗವನ್ನೇ ಅನುಸರಿಸಿ ಕ್ರಿ.ಶ.೯೭೩ರಲ್ಲಿ ರಾಷ್ಟ್ರಕೂಟ ದೊರೆ ೨ನೇ ಕರ್ಕನನ್ನು ಸೋಲಿಸಿ ಮೂಲೆ ಗುಂಪು ಮಾಡುವ ಮೂಲಕ ರಾಷ್ಟ್ರಕೂಟ ಮನೆತನವನ್ನು ಬೇರು ಸಮೇತ ಕಿತ್ತು ಚಾಳುಕ್ಯ ಸಾಮ್ರಾಜ್ಯದ ಅಧಿಕಾರವನು ಪುನಃ ಸ್ಥಾಪಿಸುವಲ್ಲಿ ಯಶಸ್ವಿಯಾದನು[೪೧].

### ೨ನೇತೈಲಪ:

ಈತ ನಾಲ್ಕನೇ ವಿಕ್ರಮಾದಿತ್ಯ ಮತ್ತು ಚೇದಿಅರಸ ಲಕ್ಷಣನ ಮಗಳು ಬೊಂತಾದೇವಿ ಈತನ ತಂದೆ-ತಾಯಿಯಂದಿರು. ಹಾವೇರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಈತನ ರಾಜಕೀಯ ಇತಿಹಾಸವನ್ನು ಅರಿಯಲು ಇಲ್ಲಿ ದೊರೆತಿರುವ ಕ್ರಿ.ಶ. ೯೭೫ರ ಚಿಕ್ಕೆರೂರಿನಲ್ಲಿ[೪೨] ಶಾಸನದಲ್ಲಿ ಬನವಾಸಿನಾಡನ್ನು ಭೀಮಯ್ಯ ಎಂಬುವನು ಆಳುತ್ತಿರುವಾಗ ಬಳರಿದೇವಿಯನ್ನು ಪಳ್ಳಿಗ ಎಂಬಾತನು ಪ್ರತಿಷ್ಠಾಪಿಸಿದನ್ನು ತಿಳಿಸುತ್ತದೆ. ಇದು ಐತಿಹಾಸಿಕವಾಗಿ ತುಂಬಾ ಮಹತ್ವದ ಶಾಸನವಾಗಿದ್ದು, "ಶ್ರೀಮದ್ ಅಹವುವಲ್ಲದೇವಂ ದಕ್ಷಿಣ ದಿಗ್ಬಗವಂ ನಿರಾಕುಳಂ ಮಾಡಿ ಉತ್ತರ ದಿಗ್ವಿಜಯಂಗೈದುಪ್ಪಳನ ಮೇಲೆ ನಡೆದಂದು" ಎಂಬ ಮಹತ್ವದ ಅಂಶವನ್ನು ದಾಖಲಿಸುತ್ತದೆ. ಇಲ್ಲಿ ಬರುವ ಅಹವಮಲ್ಲದೇವನೆಂದರೆ ಕಲ್ಯಾಣಿ ಚಾಳುಕ್ಯರ ದೊರೆ ನೂರ್ಮಡಿ ತೈಲಪ ಅಥವಾ ಅವನ ಮಗ ಇರಿವೆಬೆಡಂಗನೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ನಂತರ ಈತ ರಾಷ್ಟ್ರಕೂಟರ ಖೊಟ್ಟಿಗನನ್ನು ಪದಚ್ಯುತಿಗೊಳಿಸಿದ ನಂತರ ಮಾಳಖೇಡವನ್ನು ೯೭೩ ರಲ್ಲಿ ಗೆದ್ದು, ಗಂಗವಂಶದ ಪಾಂಚಾಲದೇವ ಎಂಬ ಗಂಗವಂಶಸೆಟ್ಟಿ ಆಡಳಿತ ನಿರ್ವಹಿಸಿ ಚಾಳುಕ್ಯರ ವಿರುದ್ಧ ಪ್ರತಿಭಟಿಸಲು ತೈಲನು ಅವನನ್ನು ಸೋಲಿಸಿದನು. ಕಣ್ಣಪ್ಪ ಎಂಬಾತನು ೯೭೫ ರಲ್ಲಿ ಪುಲಿಗೆರೆಯಲ್ಲೂ ೯೮೮ರಲ್ಲಿ ಬನವಾಸಿಯಲ್ಲಿ ಆಳುತ್ತಿದ್ದು ಅವನ ತಮ್ಮನಾದ ಶೋಭನರಸನು ಬೆಳ್ವೊಲ-೩೦೦ ಹಾಗೂ ಪುಲಿಗೆರೆ-೩೦೦ರಲ್ಲಿ ಆಳುತ್ತಿದ್ದನು. ಇವನ ನಂತರ ಕೇಶವಯ್ಯ ಈ ಪ್ರದೇಶದ ಮತ್ತು ಅಧಿಕಾರಿಯಾದ ಅಹವಮಲ್ಲ ಎಂಬುದು ತೈಲನ ಬಿರುದುಗಳಲ್ಲಿ

ಒಂದಾಗಿದ್ದು, ತೈಲನು ಸಮರ್ಥ ಸಾಹಸಿಯಾಗಿದ್ದು, ರಾಷ್ಟ್ರಕೂಟರನ್ನು ಸೋಲಿಸಿ, ಆ ಸೋಲಿನ ನಂತರ ತನ್ನನ್ನು ಎದುರಿಸಿದ ಎಲ್ಲಾ ಮಾಂಡಳೀಕರನ್ನು ನೆರೆಯ ರಾಜರನ್ನು ಬಗ್ಗುಬಡಿದು ಗುಜರಾತಿನವರೆಗೂ ದಂಡೆಯಾತ್ರೆ ನಡೆಸಿದನು. ಈತನ ನಂತರ ಸತ್ಯಾಶ್ರಯ ಅಧಿಕಾರಕ್ಕೆ ಬಂದನು ಆದರೆ ಈತನ ಶಾಸನಗಳು ಇಲ್ಲಿ ದೊರಕುವುದಿಲ್ಲ. ಇವನ ನಂತರ ಜಯಸಿಂಹನ ಕ್ರಿ.ಶ. ೧೦೧೫–೪೩ ರ ತೇದಿ ರಹಿತ ಶಾಸನವು[೪೩] ಕಣಿವೆ ಸಿದ್ದಗೇರಿಯಲ್ಲಿ ದೊರಕುತ್ತದೆ. ಕದಂಬ ವಂಶದ ಮಹಾಮಂಡಳೇಶ್ವರ ಪಾಂಡ್ಯದೇವನು ಹಿರಿಯರ ಐದು ತಲೆಮಾರುಗಳ ವಂಶವೃಕ್ಷವನ್ನು ಕೊಡುತ್ತಾರೆ. ಬೀರದೇವ ಮತ್ತು ಕೇತರಸಯ್ಯನಿಂದ ಆರಂಭವಾಗುವ ವಂಶ ಕೇತರಸನ ಮಗ ನಾಮರಸ ಅವನ ಮಗ ಇಮ್ಮಡಿ ಕೇತರಸ. ಕೇತರಸನಿಗೆ ಇಬ್ಬರು ಮಡದಿಯರಿದ್ದು, ಮೊದಲ ಹೆಂಡತಿಗೆ ಇಬ್ಬರು ಮಕ್ಕಳು ಪುಲಿಕೇಶಿ ಮತ್ತು ಪೆರ್ಮಾಡಿ. ಎರಡನೆಯವಳಿಗೆ ಮೂರುಜನ ಬೀರದೇವ, ಬೊಮ್ಮರಸ ಹಾಗೂ ಮಲ್ಲದೇವರು. ಬೀರದೇವರ ಮಗ ಕೇತರಸ, ಇವನ ಮಗ ಪಾಂಡ್ಯದೇವ, ಪಾಂಡ್ಯದೇವರಸನ ಕುಮಾರ ಚೌಡರಿಂದ ಭಗವತಿಘಟ್ಟದ ಜಮದಗ್ನಿರಾಮೇಶ್ವರ ದೇವರಿಗೆ ದಾನ ಕೊಟ್ಟ ವಿಷಯದ ಪ್ರಸ್ತಾಪವಿದೆ. ಕ್ರಿ.ಶ. ೧೦೩೪ರ ಗುಂಡೇನಹಳ್ಳಿ ಶಾಸನದಲ್ಲಿ[೪೪] ಅಜವರ್ಮನ ತಾಯಿ ಅಂಗಿಯಬ್ಬೆ ಆಲೂರಲ್ಲಿ ಮಲ್ಲಿಕಾರ್ಜುನ ದೇವಾಲಯವನ್ನು ಕಟ್ಟಿಸಿದಳು. ಈತನ ತರುವಾಯ ಸೋಮೇಶ್ವರ ಅಧಿಕಾರದ ಚುಕ್ಕಾಣಿ ಹಿಡಿದನು.

### ಸೋಮೇಶ್ವರ (೧೦೪೪–೧೦೬೮):

ಈತ ಎರಡನೇ ಜಯಸಿಂಹನ ಮಗನಾಗಿದ್ದು, ಇವನಿಗೆ ಭುವನಾಶ್ರಯ ಶ್ರೀ ಪೃಥ್ವಿವಲ್ಲಭ ಪರಮಭಟ್ಟಾರಕ ಆಹಮಲ್ಲ ಎಂಬ ಸಾಮ್ರಾಜ್ಯ ಪ್ರಶಸ್ತಿ ಸೂಚಕವಾದ ಬಿರುದುಗಳಿದ್ದವೆಂದು[೪೫] ಇತಿಹಾಸದ ಪುಟಗಳಿಂದ ತಿಳಿದುಬರುತ್ತದೆ. ಈತ ಚೋಳರ ಜೊತೆ ಆಂಧ್ರದ ಅಮರಾವತಿಯಲ್ಲಿ ನಡೆದ ಕಾಳಗದಲ್ಲಿ ಸೋತು ಚೋಳ ರಾಜಾಧಿರಾಜನು ಕಲ್ಯಾಣದವರೆಗೆ ಬಂದು ರಾಜಧಾನಿಯನ್ನು ಸೂರೆ ಮಾಡಿದನು. ನಂತರ ಚೋಳರನ್ನು ಬೆನ್ನಟ್ಟಿ ಇವನು ಕಂಚಿಯನ್ನು ಗೆದ್ದನು. ಆದರೆ ಚೋಳರು ಮತ್ತೆ ಚಾಲುಕ್ಯ ರಾಜ್ಯದ ಮೇಲೆ ಸಾಗಿಬರಲು ಕೊಪ್ಪಂನಲ್ಲಿ ಚೋಳರಾಜಾಧಿರಾಜನು ಹತನಾದನು. ಇದೇ ಯುದ್ದದಲ್ಲಿ ಸೋಮೇಶ್ವರ ಸೋದರ ಜಯಸಿಂಹನು ಮರಣ ಹೊಂದಿದನು. ಈ ವಿಜಯದ ಸ್ಮಾರಕವಾಗಿ ಅಣ್ಣಿಗೇರಿಯ ಅಮೃತೇಶ್ವರ ದೇವಾಲಯವನ್ನು ಸೋಮೇಶ್ವರನು ಕಟ್ಟಿಸಿದನು. ಈತನ ಶಾಸನಗಳು ಮೇದೂರು. ಹಿರೇಕೆರೂರು ಮತ್ತಿಹಳ್ಳಿ ಕಡೂರು, ಬಾಳಂಬೀಡ, ಚಿಕ್ಕೆರೂರುಗಳಲ್ಲಿ ದೊರಕುತ್ತವೆ. ಮೇದೂರಿನ ಶಾಸನದಲ್ಲಿ[೪೬] ಎಡವಟ್ಟಿ–೭೦ರ ಗ್ರಾಮವಾದ ಮೇದೂರಿನ ಮಹಾಕಾಳೇಶ್ವರದೇವರಿಗೆ ಚಾವುಂಡರಸನ ಬಾವ ಬಿಜ್ಜರಸನು ದಾನ ನೀಡುತ್ತಾನೆ. ಈ ದಾನವನ್ನು ಅಗ್ನಿಭೂಟ್ಟಾರಕರಿಗೆ ಕೊಡಲಾಯಿತು. ಹಾಗೆಯೇ ಮತ್ತೊಂದು ಶಾಸನದಲ್ಲಿ[೪೭] ಮಾಕಳಗಾವುಂಡನಿಂದ ಮಾಕಳೇಶ್ವರ

ದೇವಾಲಯಕ್ಕಾಗಿ ದೇವರಿಗೆ ದಾನಕೊಟ್ಟ ವಿಷಯವನ್ನು ಹೇಳಿದೆ. ಕ್ರಿ.ಶ. ೧೦೪೯ರ ಇಂಗಳಗುಂದಿಯ ಶಾಸನದಲ್ಲಿ[೪೮] ಕೇತಗಾವುಂಡನ ಮಗ ಮಹಾದೇವ ಮಾಳೇಶ್ವರ ದೇವಾಲಯ ಮತ್ತು ಕೆರೆಗೆ ದಾನ ನೀಡಿದ್ದನ್ನು ತಿಳಿಸುತ್ತದೆ. ಕ್ರಿ.ಶ. ೧೦೫೮ರ ಬಾಳಂಬೀಡದ ಶಾಸನದಲ್ಲಿ[೪೯] ಮಹಾತಟಾಕಗ್ರಾಮ (ಪಿರಿಯಕೆರೆಯಾರ) ಮತ್ತು ಬಾಳಂಬೀಡುಗಳ ನಡುವಣ ಕೆರೆ ಕೃಷ್ಣತಟಾಕ ಹಾಗೂ ವಿಷಪರಿಹಾರೇಶ್ವರ (ಪಾಂಡುರಂಗೇಶ್ವರ) ದೇವರಿಗೆ ದಾನ ಬಿಟ್ಟಿದನ್ನು ತಿಳಿಸುತ್ತದೆ. ಕ್ರಿ.ಶ. ೪೦೦ರ ಹಿರೇಕೆರೂರಿನ ತೇದಿರಹಿತ ಶಾಸನದಲ್ಲಿ ಈ ಊರಿಗೆ ಬಂದ ಪ್ರವಾಸಿರುಟ್ಟುವ ಸಲುವಾಗಿ ಗದ್ಯಾಣ-೪೦೦ನ್ನು ಪಿರಿಯಕೆರೆಯ ಸಾನಿರ್ವರಿಗೆ ಕೊಡುತ್ತಾನೆ ಇದು ಅಂದಿನ ಜನರಲ್ಲಿ ಇದ್ದ ಸಾಮಾಜಿಕ ಕಳಕಳಿಯನ್ನು ತೋರಿಸುತ್ತದೆ. ಕ್ರಿ.ಶ.೧೦೬೦ರ ಮತ್ತೊಂದು ಶಾಸನದಲ್ಲಿ[೫೦] ಚಾಲುಕ್ಯರ ಆರಂಭದ ಕಾಲದಲ್ಲಿ ರಾಜ್ಯದ ಉತ್ತರ ಗಡಿಯನ್ನು ರಕ್ಷಿಸಿದ ಗೊಂಡಮಯ್ಯ ದಂಡನಾಯಕನು ಪನ್ನಾಯ ಪೆರ್ಜುಂಕದ ಸುಂಕಗಳನ್ನು ಅಲ್ಲಿಯ ಹಿರಿಯರಿಗೆ ದಾನವಾಗಿ ಕೊಟ್ಟಿದ್ದನ್ನು ತಿಳಿಸುತ್ತದೆ. ಕ್ರಿ.ಶ, ೧೦೬೨ರ ಶಿಗ್ಗಾವಿ ತಾಲೂಕಿನ ಚಿಲ್ಲೂರಬದ್ನಿ ಶಾಸನದಲ್ಲಿ[೫೧] ಊರೊಡೆಯ ನಾಯಿಮ್ಮನು ಆ ಊರಲ್ಲಿ ರಾಮೇಶ್ವರ ಮಂದಿರ ನಿರ್ಮಿಸಿ, ಸಿಂಹಪರ್ಷೆಯ ಸೋವರಾಶಿಜೀಯರಿಗೆ ನೀಡಿದ ಉಲ್ಲೇಖವಿದೆ.

## ೨ನೇ ಸೋಮೇಶ್ವರ (೧೦೬೮-೧೦೭೬):

೧ನೇ ಸೋಮೇಶ್ವರನು ಮರಣಿಸಿದಾಗ ಆತನ ಹಿರಿಯ ಪುತ್ರ ಇಮ್ಮಡಿ ಸೋಮೇಶ್ವರನು ಕಲ್ಯಾಣದ ಚಕ್ರವರ್ತಿಯಾಗುತ್ತಾನೆ. ತಂದೆಯ ಕಾಲಾವಧಿಯಲ್ಲಿ ಬೆಳ್ವೊಲ, ಪುಲಿಗೆರೆ ಪ್ರದೇಶಗಳ ಅಧಿಕಾರಿಯಾಗಿದ್ದನು. ಇವನು ಪಟ್ಟವೇರಿದ ತಕ್ಷಣ ಚೋಳರ ಗುತ್ತಿಕೋಟೆಯನ್ನು ಆಕ್ರಮಿಸಿದನು. ಈ ಜಿಲ್ಲೆಯ ಶಾಸನಗಳಿಂದ ತಿಳಿದು ಬರುವ ಮಾಹಿತಿಯನ್ನು ಗಮನಿಸಿದಾಗ ಕ್ರಿ.ಶ. ೧೦೭೧-೭೨ ರ ಸುಮಾರಿಗೆ ಬಂಕಾಪುರದ ನೆಲೆವೀಡಿನಲ್ಲಿ ಆಳುತ್ತಿದ್ದನೆಂದು ಕಲಕೇರಿ ಶಾಸನ ತಿಳಿಸುತ್ತದೆ[೫೨]. ಇಮ್ಮಡಿ ಸೋಮೇಶ್ವರನು ಈ ಭಾಗಕ್ಕೆ ಬಂದು ಬಂಕಾಪುರದಲ್ಲಿ ತಂಗಿದ್ದುದು ಒಂದು ಮಹತ್ವಪೂರ್ಣ ಕೆಲಸಕ್ಕಾಗಿ. ಇಮ್ಮಡಿ ಸೋಮೇಶ್ವರನಿಗೂ ಆತನ ತಮ್ಮ ಆರನೇ ವಿಕ್ರಮಾದಿತ್ಯನಿಗೂ ಕಲಹವುಂಟಾಗಿತ್ತು. ಈ ಅಂಶವನ್ನು ಬಿಲ್ಹಣನು ತನ್ನ 'ವಿಕ್ರಮಾಂಕದೇವಚರಿತಂ' ಕಾವ್ಯದಲ್ಲಿ ಹೇಳಿದ್ದಾನೆ. ಬಿಲ್ಹಣನು ತನ್ನ ಕಾವ್ಯದಲ್ಲಿ ಸೋಮೇಶ್ವರ ವಿಕ್ರಮಾದಿತ್ಯನ ಶೌರ್ಯ ಸಾಹಸಗಳನ್ನು ನೋಡಿ ಸಹಿಸದೇ ಈತನನ್ನು ಕೊಲ್ಲಿಸಲು ಪ್ರಯತ್ನಿಸುತ್ತಾನೆ. ಈ ಅಪಾಯದ ಸೂಚನೆಯನ್ನು ಅರಿತ ವಿಕ್ರಮಾದಿತ್ಯನು ತನ್ನ ಕಿರಿಯ ತಮ್ಮ ಜಯಸಿಂಹನನ್ನು ಕರೆದುಕೊಂಡು ಕಲ್ಯಾಣನಗರ ಬಿಟ್ಟು ಹೋಗುತ್ತಾನೆ. ಈ ವಿಷಯ ಸೋಮೇಶ್ವರನಿಗೆ ಗೊತ್ತಾಗಿ ಇವರನ್ನು ಸೆರೆಹಿಡಿಯಲು ಸೈನ್ಯ ಕಳುಹಿಸುತ್ತಾನೆ. ಅನಂತರ ಈತ ಬನವಾಸ ಮಂಡಳಕ್ಕೆ ಬರುತ್ತಾನೆ ಹೀಗೆ ಬನವಾಸಿಗೆ ಬಂದು ಆಶ್ರಯ ಪಡೆದ ವಿಕ್ರಮಾದಿತ್ಯನನ್ನು ಸೆರೆಹಿಡಿಯುವುದಕ್ಕೋಸ್ಕರ ಇಮ್ಮಡಿ ಸೋಮೇಶ್ವರ ಸೈನ್ಯ ಸಮೇತನಾಗಿ ಬಂದು ಬಂಕಾಪುರದಲ್ಲಿ ಬೀಡು ಬಿಟ್ಟಿದ್ದಾನೆ. ಈ ವಿಷಯವನ್ನು

ಕಲಕೇರಿ ಶಾಸನವು ತಿಳಿಸುತ್ತದೆ. ಹಾನಗಲ್ಲು ತಾಲೂಕಿನ ತಿಳುವಳ್ಳಿ ಗ್ರಾಮದ ಕ್ರಿ.ಶ.೧೦೭೨ ರ ಶಾಸನದಲ್ಲಿ[೫೩] ದೊಡ್ಡ ಕೆರೆಯ ಏರಿಯ ರಚನೆಗಾಗಿ ಬಂಟರಿಂದ ದಾನ ಯಳವತ್ತಿಯ ದಂಡನಾಯಕ ಚರೋಜನ ಆದೇಶದಂತೆ ಕುಪ್ಪಟೂರು ಗ್ರಾಮದ ಭೂದಾನ. ಬನವಾಸಿ ೧೨೦೦ದ ಪೇರ್ಗಡೆ ಮಂದಿರಾಜನ ಆದೇಶದಂತೆ ತಿಳುವಳ್ಳಿಯಲ್ಲಿ ಮಾಳಪ್ಪಯ್ಯ ಬಿಟ್ಟ ದತ್ತಿಯ ವಿಷಯವನ್ನು ಪ್ರಸ್ತಾಪಿಸುತ್ತದೆ ಕ್ರಿ.ಶ.೧೦೭೪ರ ಮತ್ತಿಹಳ್ಳಿಯ ಶಾಸನದಲ್ಲಿ[೫೪] ಬಳ್ಳಿಗಾವೆಯನ್ನು ರಾಜಧಾನಿಯಾಗಿ ಮಾಡಿಕೊಂಡು ಬನವಾಸಿ ಹಾಗೂ ಸಾಂತಳಿಗೆ ಪ್ರದೇಶಗಳನ್ನು ಆಳುತ್ತಿದ್ದ ದಂಡನಾಯಕ ಉದಯಾದಿತ್ಯ ದೇವನ ಕಾಲದಲ್ಲಿ ಮುದಿಯನಪಳ್ಳಿ ಸ್ವಯಂಭೂ ದೇವರಿಗೆ ಪೆರ್ಗಡೆ ನಾರಾಯಣಯ್ಯನು ಚೆಲ್ಲಪಜೀಯರಿಗೆ ಕಚ್ಚವಿಯ ಗಳೆಯ ಕೋಲಲ್ಲಿ ಅಳೆದು ದಾನ ನೀಡಿದ ವಿಷಯವನ್ನು ತಿಳಿಸುತ್ತದೆ. ಮತ್ತು ಕ್ರಿ.ಶ.೧೦೭೪ರ ನೀರಲಗಿ ಶಾಸನದಲ್ಲಿ[೫೫] ಭುವನೈಕಮಲ್ಲ ಪಲ್ಲವ ಪೆರ್ಮಾಡಿ ನೀರಲುಗೆಯ ಮುನ್ನೂರ್ವರಿಗೆ ಹಾನಗಲ್ಲು ೫೦೦ ಕಂಪಣ ಎಳೆಂಬೆ-೭೦ರ ಬಸಲೂರ ಗ್ರಾಮದ ಮೇಲಾಳ್ಕೆ ಕೊಟ್ಟ ಉಲ್ಲೇಖವಿದೆ. ಕ್ರಿ.ಶ. ೧೦೭೫ರ ದೇವಗೇರಿಯ ಶಾಸನದಲ್ಲಿ[೫೬] ವೆಣ್ಣಮಮ್ಯನಿಂದ ದೇವಗಿರಿಯ ಕಂಕಳೇಶ್ವರ ದೇವರಿಗೆ ಸುಂಕ ದಾನ ನೀಡಿದ ಉಲ್ಲೇಖವಿದೆ.

## ೬ನೇ ವಿಕ್ರಮಾದಿತ್ಯ (೧೦೭೬-೧೧೨೬) :

ಒಂದನೇ ಸೋಮೇಶ್ವರನ ಮಗ ೨ನೇ ಸೋಮೇಶ್ವರನ ತಮ್ಮನಾದ ಈತ ತ್ರಿಭುವನಮಲ್ಲ ಎಂಬ ಬಿರುದನ್ನು ಹೊಂದಿದ್ದು ಉತ್ತರಾಧಿಕಾರಿಯಾಗಿ ತನ್ನ ತಂದೆಯ ಕಾಲದಿಂದಲೇ ಚಾಲುಕ್ಯರ ರಾಜಕೀಯ ರಣರಂಗದಲ್ಲಿ ಪ್ರಮುಖ ಪಾತ್ರವಹಿಸಿದ್ದ. ಈತನಿಗೆ ಪೆರ್ಮಾಡಿ ಎಂಬ ಬಿರುದು ಸಹ ಇತ್ತು. ಈತ ತನ್ನ ಅಣ್ಣನನ್ನು ಬದಿಗೊತ್ತಿ ಆಡಳಿತ ಪ್ರಾರಂಭಿಸಿ ತನ್ನದೆ ಆದ ಶಕವರ್ಷವನ್ನು ಆರಂಭಿಸಿದ. ಕರ್ನಾಟಕದ ಹೆಮ್ಮೆಯ ಚಕ್ರವರ್ತಿಯಾಗಿ ದೀರ್ಘಕಾಲ ಆಡಳಿತ ನಡೆಸಿ ಅನೇಕ ಯುದ್ಧಗಳಲ್ಲಿ ಪಾಲ್ಗೊಂಡು ಸಾಮ್ರಾಜ್ಯವನ್ನು ರಕ್ಷಿಸಿ ವಿಸ್ತರಿಸಿದನು. ವೆಂಗಿ ಚಾಲುಕ್ಯರಿಗೆ ಸೇರಿದ್ದ ಕೆಲವು ಪ್ರದೇಶಗಳನ್ನು ಗೆದ್ದುಕೊಂಡನು ಆದರೆ ಶಾಂತಿ ಪ್ರಿಯನಾಗಿದ್ದ ಈತನ ಕಾಲದಲ್ಲಿ ಅನೇಕ ಜಿನಾಲಯ, ದೇವಾಲಯ, ಅಗ್ರಹಾರ ಸ್ಥಾಪನೆಯಾದವು, ಇಂತಹ ಸಾಮಾಜಿಕ ಕಾರ್ಯಗಳಲ್ಲಿ ತೊಡಗಿದ ಈತನ ಶಾಸನಗಳು ಸಾತೇನಹಳ್ಳಿ, ಹೀರೆಕೆರೂರು, ನಾಗವಾರ, ಬಾಳಂಬೀಡು ಅಬ್ಬಲೂರು, ನೂಲಗೇರಿ, ಚಿಕ್ಕೇರೂರು, ಮೇದೂರು, ಚಿನ್ನಮುಳುಗುವ, ಮುತ್ತಿಹಳ್ಳಿ, ಮಡಲೂರ ಮುಂತಾದೆಡೆಗಳಲ್ಲಿ ದೊರಕಿವೆ. ಕ್ರಿ.ಶ. ೧೦೫೫ರ ಶಿಗ್ಗಾಂವ ಶಾಸನದಲ್ಲಿ[೫೭] ಮಹಾಮಂಡಳೇಶ್ವರ ಹರಿಕೇಸರಿದೇವ ಮತ್ತು ಸ್ಥಳದ ಸಂಘಗಳಿಂದ ಕದಂಬೇಶ್ವರ ದೇವಾಲಯಕ್ಕೆ ದಾನ ನೀಡಿದ ಉಲ್ಲೇಖವಿದೆ. ಕ್ರಿ.ಶ ೧೦೭೯ರ ಬಾಳಂಬೀಡ ಶಾಸನದಲ್ಲಿ[೫೮] ಪೇರ್ಗಡೆ ಬಲದೇವಯ್ಯನು ಪಿರಿಯಕೇರೆಯೂರಿನ ಮಹಾಜನ ಸಾಸಿರ್ವರ ಸಮ್ಮುಖದಲ್ಲಿ ವಿಷ ಪರಿಹಾರೇಶ್ವರ ದೇವರಿಗೆ ಬಿಟ್ಟದಾನದ ಉಲ್ಲೇಖವಿದೆ. ಕ್ರಿ.ಶ.೧೦೮೨ರ ಚಿಕ್ಕೆರೂರಿನ ಶಾಸನದಲ್ಲಿ[೫೯] ಬಿಯಪ್ಪಶೆಟ್ಟಿಯು

ಬೀರೆಶ್ವರದ ದೇವಾಲಯವನ್ನು ನಿರ್ಮಾಣಮಾಡಿ ಆ ದೇವಾಲಯಕ್ಕೆ ಭೂದಾನ ನೀಡಿದ ಉಲ್ಲೇಖವಿದೆ. ತೇದಿರಹಿತ ನೂಲಗೇರಿ ಶಾಸನದಲ್ಲಿ[೬೦] ತೆಂಕಣ ಅಯ್ಯವೂರ ಹಿರಿಯಕೆರೆಯಿಂದ ಮಹಾಜನಗಳ ಸಮ್ಮುಖದಲ್ಲಿ ಬಮ್ಮಿಸೆಟ್ಟಿಯ ಗವರೇಶ್ವರದ ನೈವೇದ್ಯಕ್ಕೆಂದು ಭೂಮಿ ಹಾಗೂ ಸುಂಕವನ್ನು ದಾನವಾಗಿ ನೀಡಲಾಗಿದೆ. ಕ್ರಿ.ಶ. ೧೦೯೨ರ ಬ್ಯಾಡಗಿ ಶಾಸನದಲ್ಲಿ[೬೧] ಮಹಾಮಂಡಳೇಶ್ವರ ವೀರಗಾಂಗೇಯರಾಯ ಬನವಾಸಿ ೧೨,೦೦೦ ಆಳುವಾಗ ಬ್ಯಾಡಗಿಯ ಮಲ್ಲಿಕಾರ್ಜುನ ದೇವರಿಗೆ ಬಿಟ್ಟ ದತ್ತಿಯನ್ನು ವಿವರಿಸುತ್ತದೆ. ಕ್ರಿ.ಶ.೧೧೦೧ರ ಅಬ್ಬಲೂರ ಶಾಸನದಲ್ಲಿ[೬೨] ದಂಡನಾಯಕ ಗೋವಿಂದ ರಸನಿಂದ ಬ್ರಹ್ಮೇಶ್ವರ ದೇವಾಲಯಕ್ಕೆ ಮುರಿಗನಹಳ್ಳಿಯನ್ನು ದಾನ ನೀಡಿದ ಬಗ್ಗೆ ಉಲ್ಲೇಖವಿದೆ. ಕ್ರಿ.ಶ. ೧೧೦೩ರ ಗೆಜ್ಜೆಹಳ್ಳಿ ಶಾಸನದಲ್ಲಿ[೬೩] ತೈಲಪನು ಹಾನಗಲ್ಲು – ೫೦೦ ಆಳುತ್ತಿರುವಾಗ ಬೊಪ್ಪಗಾವುಂಡನು ಮೂಲಸ್ಥಾನ ದೇವಾಲಯಕ್ಕೆ ದಾನ ನೀಡಿದ ವಿವರವಿದೆ. ಕ್ರಿ.ಶ. ೧೧೦೯ರ ಹಾವೇರಿಯ ಶಾಸನದಲ್ಲಿ[೬೪] ದಂಡನಾಯಕ ಅನಂತಪಾಳಯ್ಯನ ಅಧಿಕಾರಿ ಮಾಧವಭಟ್ಟರ ಮಗ ನರಸರಾಜನಿಂದ ಸಿದ್ದೇಶ್ವರ ದೇವಾಲಯಕ್ಕಾಗಿ ಕೆಲವು ಆದಾಯಗಳನ್ನು ದಾನ ನೀಡಿದ ಉಲ್ಲೇಖವಿದೆ. ಕ್ರಿ.ಶ. ೧೧೧೬ರ ಹತ್ತಿಮತ್ತೂರಿನ ಶಾಸನದಲ್ಲಿ[೬೫] ದಂಡನಾಯಕ ಲೋಕರಸಾದಿಗಳಿಂದ ದೇವಿಂಗೆರೆಯ ಜೀರ್ಣೋದ್ಧಾರಕ್ಕಾಗಿ ಸುಂಕದಾನ ಮಾಡಿದ ಉಲ್ಲೇಖವಿದೆ.

ಕ್ರಿ.ಶ ೧೧೧೮ರ ಬಾಳಂಬೀಡ ಶಾಸನದಲ್ಲಿ[೬೬] ಬಮ್ಮಗಾವುಂಡ ಮತ್ತು ಬಾಳಂಬೀಡಿನ ಪ್ರಜೆಗಳಿಂದ ರಾಮೇಶ್ವರ ದೇವರಿಗಾಗಿ ಅಮೃತರಾಶಿ ಪಂಡಿತರಿಗೆ ಭೂದಾನ ನೀಡಿದ ಉಲ್ಲೇಖವಿದೆ. ಕ್ರಿ.ಶ. ೧೧೧೮ ತಿಳುವಳ್ಳಿ ಗ್ರಾಮದ ಶಾಸನದಲ್ಲಿ[೬೭] ಮಲೆಮ ಚಟ್ಟೋಪಾಧ್ಯಾಯ ಕೈವಲ್ಯಕ್ಕಾಗಿ ರುದ್ರಚಟ್ಟೋಪಾಧ್ಯಾಯ ಮತ್ತು ಮಾಚಿಯಬ್ಬೆ ಬಗ್ಗೆ ದಂಪತಿಗಳಿಂದ ದಾನದಂಡನಾಯಕ ವಿಷ್ಣುದೇವರಸನಿಂದ ಮಾಳೇಶ್ವರದೇವರ ನಂದಾದೀವಿಗೆ ದಾನ ನೀಡಿದ ಉಲ್ಲೇಖವಿದೆ. ಕ್ರಿ.ಶ. ೧೧೩೧ರ ಹಾವಣಗಿ ಶಾಸನದಲ್ಲಿ[೬೮] ಮಯೂರವರ್ಮನು ಬನವಾಸಿ ೧೨,೦೦೦ ಆಳುವಾಗ ಸೋಮಗಾವುಂಡನಿಂದ ಮೂಲಸ್ಥಾನದ ಕುಲದೇವರಿಗೆ ದತ್ತಿ ನೀಡಿದ ಮಾಹಿತಿ ಲಭ್ಯವಿದೆ. ಕ್ರಿ.ಶ ೧೧೨೩ರ ಚಿನ್ನಮುಳುಗುಂದ ಶಾಸನದಲ್ಲಿ[೬೯] ದಂಡನಾಯಕ ಮಲ್ಲರಸ ಮತ್ತು ಮಹಾದೇವರಸರಿಂದ ದೊರೇಶ್ವರ ದೇವರಿಗೆ ಎಣ್ಣೆಗಾಣ ದಾನ ನೀಡಿದ ಉಲ್ಲೇಖವಿದೆ. ಇವನ ನಂತರ ಸರ್ವಜ್ಞ ಭೂಪನೆಂದು ಖ್ಯಾತನಾದ ಅವನ ಪುತ್ರ ೩ನೆಯ ಸೋಮೇಶ್ವರ ಅಧಿಕಾರಕ್ಕೆ ಬಂದನು.

## ೩ನೇ ಸೋಮೇಶ್ವರ (೧೧೨೬–೧೧೩೮):

ಆರನೇಯ ವಿಕ್ರಮಾದಿತ್ಯನ ನಂತರ ಅವನ ಮಗನಾದ ೩ನೇ ಸೋಮೇಶ್ವರನು ಅಧಿಕಾರಕ್ಕೆ ಬಂದನು. 'ಸಂಸ್ಕೃತ ವಿಶ್ವಕೋಶ' ಎಂದು ಹೆಸರಿಗೆ ಖ್ಯಾತವಾಗಿರುವ ಈತನ

ಮಾನಸೋಲ್ಲಾಸ ಎಂಬ ಕೃತಿಯ ನಿಮಿತ್ತ ಈತನನ್ನು "ಸರ್ವಜ್ಞಭೂಪ" ಎಂದು ಕರೆಯಲಾಗಿದೆ ಈತನ ಕಾಲದಲ್ಲಿ ವಿಷ್ಣುವರ್ಧನನು ಮತ್ತೆ ಬಂಡಾಯ ಹೂಡಿದರೂ ಅವನನ್ನು ಸದೆಬಡಿದನು. ಆದರೆ ಉಚ್ಚಂಗಿ ಹೊಯ್ಸಳರ ವಶವಾಯಿತು. ಕ್ರಿ.ಶ. ೧೧೩೬ರಲ್ಲಿ ವೆಂಗಿಯ ಸೋಮೇಶ್ವರನ ಕೈ ತಪ್ಪಿದರೂ ವೆಂಗಿಯ ರಾಜ್ಯಕ್ಕೆ ಸೇರಿದ ಬಹು ಭಾಗವನ್ನು ಅವನು ವಶಪಡಿಸಿಕೊಂಡನು. ಕ್ರಿ.ಶ ೧೧೩೧ರ ಬನ್ನಿಕೊಪ್ಪ ಶಾಸನದಲ್ಲಿ[೨೦] ದಂಡನಾಯಕ ಹೋಲಕೇಶವನಿಂದ ಬನ್ನಿಯೂದತೀರ್ಥದ ಭೀಮೇಶ್ವರ ದೇವಾಲಯಕ್ಕೆ ಭೂದಾನ ನೀಡಿದ ಉಲ್ಲೇಖವಿದೆ. ಕ್ರಿ.ಶ.೧೧೩೮ರ ·ಮುತ್ತೂರು· ಶಾಸನದಲ್ಲಿ[೨೧] ಕಮ್ಮನವಳ್ಳಿಯ ಜಕ್ಕಸೆಟ್ಟಿ ಮುತ್ತೂರ ಮೇಲೆ ದಾಳಿ ಮಾಡಿದಾಗ ಕಮ್ಮಾರ ಮಾಚನವೀರ ಮರಣ ಜಕ್ಕಾಗೌಡದಿಗಳಿಂದ ಆತನ ಅಣ್ಣನಿಗೆ ಭೂದಾನ ನೀಡಿದ ವಿಷಯವಿದೆ.

ತೇದಿರಹಿತ ಹುನಗುಂದ ಶಾಸನದಲ್ಲಿ[೨೨] ಕೆರೆಯ ಜೀರ್ಣೋದ್ದಾರಕ್ಕೆ ಭೂದಾನ ನೀಡಿದ ವಿವರವಿದೆ ಇದರಿಂದ ಹಾವೇರಿ ಜಿಲ್ಲಾ ವ್ಯಾಪ್ತಿಯಲ್ಲಿ ಈತನು ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ. ಈತನ ತರುವಾಯ ೨ನೇ ಜಗದೇಕಮಲ್ಲ ಅಧಿಕಾರಕ್ಕೆ ಬಂದನು (೧೧೩೯-೪೯). ಕ್ರಿ.ಶ. ೧೧೪೨ರ ಚಿನ್ನಮುಳಗುಂದ ಶಾಸನದಲ್ಲಿ[೨೩] ದಂಡನಾಯಕ ದೇವಧರನಿಂದ ಸೋಮೇಶ್ವರ ದೇವರಿಗೆ ಮುಗದ ಗ್ರಾಮದಲ್ಲಿ ಪನ್ನಾಯ ಮತ್ತು ಬೀರವಣ ಎಂಬ ಸುಂಕಗಳನ್ನು ದಾನ ನೀಡಿದ ಉಲ್ಲೇಖವಿದೆ. ಕ್ರಿ.ಶ.೧೧೪೩ರ ಹೂಲಿಹಳ್ಳಿಯ ಶಾಸನದಲ್ಲಿ[೨೪] ನಾಲ್ಪ್ರಭು ಸಾಮಂತ ಕೇತಗಾವುಂಡ ರಾಮೇಶ್ವರ ದೇವಾಲಯಕ್ಕೆ ಭೂದಾನ ನೀಡಿದ ವಿವರವಿದೆ ಕ್ರಿ.ಶ.೧೧೪೫ರ ಬಾಳೇಹಳ್ಳಿ ಶಾಸನದಲ್ಲಿ[೨೫] ಗಡಿಯಂಕ ಮಲ್ಲಿಸೆಟ್ಟಿಯ ನೇತೃತ್ವದಲ್ಲಿ ಕದಳಿಪುರ (ಬಾಳೆಹಳ್ಳಿ)ದ ಐನೂರ್ವರು ಮತ್ತು ಮುಮ್ಮರಿ ದಂಡಗಳು ದಂಡನಾಯಕ ತಿಪ್ಪರಸನು ಗೌರೇಶ್ವರ ದೇವಾಲಯಕ್ಕೆ ನೀಡಿದ ದಾನದ ಪ್ರಸ್ತಾಪವಿದೆ. ಕ್ರಿ.ಶ. ೧೧೪೮ ರ ಯಳ್ಳವಟ್ಟಿ ಶಾಸನದಲ್ಲಿ[೨೬] ದಂಡನಾಯಕ ಸೋವಿದೇವರಸನಿಂದ ಯಲಿವಟ್ಟಿಯ ರಾಮೇಶ್ವರ ದೇವರಿಗೆ ಭೂದಾನ ನೀಡಿದ ಬಗ್ಗೆ ಮಾಹಿತಿಯಿದೆ.

## ೩ನೇ ತೈಲಪ (೧೧೪೯-೧೧೬೨):

೨ನೇ ಜಗದೇಕಮಲ್ಲನ ನಂತರ ೩ನೇ ತೈಲಪನು ಉತ್ತರಾಧಿಕಾರಿಯಾದ ನಂತರ ೪ನೇ ಸೋಮೇಶ್ವರ ಈತನ ಜೊತೆಗೂಡಿ ಜಂಟಿ ಅರಸನಾಗಿದ್ದು, ತೈಲನು ಕಾಕತೀಯ ಪೋರನ ಕೈಯಲ್ಲಿ ಸೋತು ಬಂಧಿತನಾಗಿ ಪ್ರತಿಷ್ಠೆ ಕಳೆದುಕೊಂಡ ಸೋತು ಬಂಧಿತನಾಗಿ ಪ್ರತಿಷ್ಠೆ ಕಳೆದುಕೊಂಡ ಉತ್ತರದ ಸೇವುಣರೂ ಆಗಿದ್ದ ತೈಲನು ಕಾಕತೀಯ ಪೂಲನ ಕೈಯಲ್ಲಿ ಸೋತು ಬಂಧಿತನಾಗಿ ಪ್ರತಿಷ್ಠೆ ಕಳೆದುಕೊಂಡ. ಕ್ರಿ.ಶ.೧೧೫೭ ರಲ್ಲಿ ತರ್ದವಾಡಿ ತರಿಕಾಡುನಾಡುಗಳ ಮಂಡಳಿಕ ಹಾಗೂ ೬ನೇ ವಿಕ್ರಮಾದಿತ್ಯನ ಮಗಳ, ಮಗ ಕಳಚೂರಿ ೨ ನೇ ಬಿಜ್ಜಳನು ಕಲ್ಯಾಣವನ್ನು ಗೆದ್ದುಕೊಂಡನು. ನಂತರ ತೈಲನು ೧೧೬೨ ರಲ್ಲಿ ಮರಣ ಹೊಂದಿದನು.

## ಕಲ್ಯಾಣ ಚಾಲುಕ್ಯರ ವಂಶಾವಳಿ




## ಕಲಚೂರಿಗಳು

ಕಲಚೂರಿಗಳು ಸುಮಾರು ೧೧ ನೇ ಶತಮಾನದ ಕೊನೆಯ ಭಾಗದಿಂದ ೧೨ ನೇ ಶತಮಾನದವರೆಗೆ ಹಾವೇರಿ ಜಿಲ್ಲೇಯನ್ನೊಳಗೊಂಡಂತೆ ಆಳ್ವಿಕೆ ನಡೆಸಿದ್ದಾರೆ. ಪ್ರಾಚೀನ ಐತಿಹ್ಯಗಳ ಪ್ರಕಾರ ಇವರು ಚಂದ್ರವಂಶಿಯರು, ಯದು, ಸಹಸ್ರಜಿತ್ (ಕಾರ್ತವೀರ್ಯ) ಕಾರ್ತವೀರ್ಯರ್ಜುನಹಯ[೭೭] ಇವರ ಪೂರ್ವಜರು, ಇವರಲ್ಲಿ ಬೇರೆ ಬೇರೆ ಪಂಗಡದ ಶಾಖೆಗಳಿದ್ದು ಮಧ್ಯಭಾರತದಲ್ಲಿ ಕಳಚೂರಿ ಶಾಖೆಯ ಬಾದಾಮಿ ಚಾಲುಕ್ಯ ರಾಷ್ಟ್ರಕೂಟರು ಮತ್ತು ಕಲ್ಯಾಣ ಚಾಲುಕ್ಯ ಮನೆತನದೊಡನೆ ವೈವಾಹಿಕ ಸಂಬಂಧಗಳನ್ನು ಬಳಸಿ ಕರ್ನಾಟಕದೊಂದಿಗೆ ಪರಸ್ಪರ ನಿಕಟ ಸಂಬಂಧ ಹೊಂದಿದ್ದರು[೭೮]. ಕಾಲಕ್ರಮೇಣ ಪ್ರಮುಖರಾದ

ಪ್ರತಿಹಾರರು ಕಲಚೂರಿಗಳ ಭದ್ರಕೋಟೆಯಾಗಿದ್ದ 'ಕಾಲಂಜರ'ವನ್ನು ಆಕ್ರಮಿಸಿಕೊಂಡರು ಹೀಗೆ ಶತ್ರುಗಳ ಹೊಡೆತಕ್ಕೆ ಕೆಲವು ವ್ಯಕ್ತಿಗಳು ಕುಂತಲ ದೇಶಕ್ಕೆ ಬಂದು ತರಿಕಾಡುನಾಡಿನ ಪ್ರಮುಖ ಸ್ಥಳವಾದ ಮಂಗಳ ವೇಡದಲ್ಲಿ[೭೯] ತಳವೂರಿದರು ಅಂದು ಹಾವೇರಿ ಜಿಲ್ಲೆಯು ಕುಂತಳನಾಡಿಗೆ ಸೇರಿತ್ತು. ಬಹುಕಾಲ ಇವರು ಮಹಾಮಂಡಲೀಕರಾಗಿ ಆಳ್ವಿಕೆ ನಡೆಸಿದರೂ ಕೊನೆಗೆ ಸ್ವತಂತ್ರವಾಗಿ ರಾಜ್ಯವಾಳಿದರು ಕ್ರಿ.ಶ. ೧೧೬೨ ರಲ್ಲಿ ಕಲ್ಯಾಣದ ಅರಸ ೨ನೇ ತೈಲಪನಿಂದ ಸಿಂಹಾಸನವನ್ನು ಕಸಿದುಕೊಂಡು ೧೧೮೪ ರಲ್ಲಿ ತಮ್ಮ ಅಧಿಪತ್ಯವನ್ನು ಸ್ಥಾಪಿಸಿ ಕನ್ನಡ ನಾಡಿನ ಇತಿಹಾಸದಲ್ಲಿ ವಿಶಿಷ್ಟಸ್ಥಾನವನ್ನು ಪಡೆದುಕೊಂಡರು.

ಪ್ರಾರಂಭದಲ್ಲಿ ೨ನೇ ಬಿಜ್ಜಳ ೧೧೨೯ ರ ಸುಮಾರಿಗೆ ತರಿಕಾಡುನಾಡು, ಕರ್ಹಾಡ-೪೦೦೦ ಹಾಗೂ ತರ್ದವಾಡಿ-೧೦೦೦ಗಳ ಮಂಡಳೀಕನಾಗಿ ೧೧೫೭ ಸ್ವಾತಂತ್ರ್ಯ ಘೋಷಿಸಿದನು. ಇಲ್ಲಿನ ಶಾಸನಗಳನ್ನು ಅವಲೋಕಿಸಿದಾಗ ಸಿಂಧರು ರಾಜ್ಯದಲ್ಲಿ ಉತ್ತರಗಡಿಯಲ್ಲಿ ಇದ್ದವರು ಇವರಲ್ಲಿ ಕ್ರಿ.ಶ. ೧೧೫೬ ರ ಬೆಟಗೇರಿ ಶಾಸನದಲ್ಲಿ[೮೦] ಬಿಜ್ಜಳನ ಸೋದರ ಮೈಲುಗಿ ಬೆಳ್ವೊಲ-೩೦೦ನ್ನು ಮುಳಗುಂದದಿಂದ ಆಳುತ್ತಿದ್ದನೆಂದು ಹೇಳಿದೆ. ೬ನೇ ವಿಕ್ರಮಾದಿತ್ಯನ ಮಗಳು ಸಾವಳದೇವಿಯ ಮಗನಾದ ಬಿಜ್ಜಳನನ್ನು ಕ್ರಿ.ಶ.೧೧೪೯ರ ಎಮ್ಮಿಗನೂರು ಶಾಸನದಲ್ಲಿ[೮೧] ಭೂಪಾಲ ಚಕ್ರವರ್ತಿ ಎಂದು ಕರೆಯಲಾಗಿದೆ. ಅಲ್ಲದೆ ಕ್ರಿ.ಶ.೧೧೪೬ರ ಕಾಗಿನೆಲೆಯ[೮೨] ಬಂಡಾಯವನ್ನು ಗಮನಿಸಿದ ಪ್ರದೇಶ ಬಿಜ್ಜಳನ ವಶವಗಿತ್ತೇ ಎಂಬ ಸಂದೇಶ ಬರುತ್ತದೆ. ಬಿಜ್ಜಳನ ನಂತರದಲ್ಲಿ ಹಾವೇರಿಯ ಹಾನಗಲ್ಲು, ಹಿರೇಕೆರೂರು, ಪ್ರದೇಶಗಳು ಸಣ್ಣ ಪುಟ್ಟ ಸಾಕ್ಷಿಯಾಗಿ ಯುದ್ಧಗಳಿಗೆ ವೀರಗಲ್ಲುಗಳು ನಿಂತಿವೆ. ಕ್ರಿ.ಶ.೧೧೬೫ರ ಹಳೆನೀಡುನೇಗಿಲು ಶಾಸನದಲ್ಲಿ[೮೩] ಕಳಚೂರಿ ಭುಜಬಲ ಮಲ್ಲಿದೇವನ ರಾಜ್ಯ ಪಡೆಯಲು ಕಾರಣರಾದ ಸಿಂಧರು ಉತ್ತರಗಡಿಯಲ್ಲಿ ಇದ್ದವ ಇವರಲ್ಲಿ ಭೂಪನು. ಅವನ ಮಾವ ಅಲ್ಲಮನ ಸಹಾಯದಿಂದ ಹಳ್ಳವೂರದ ನೆಲೆವೀಡಿನಲ್ಲಿ ರಾಜ್ಯಾಧಿಕಾರ ನಡೆಸುತ್ತಿರುವಾಗ ನಿಡುನೇಗಿಲಲ್ಲಿ ಮಹಾದೇವಣ್ಣನು ಮಲ್ಲಿಕಾರ್ಜುನ ದೇವರಿಗೆ ಆರಾಧನೆಯನ್ನು ಮಾಡಿಸಿದ ಸಲುವಾಗಿ ದಾನ ನೀಡುತ್ತಾನೆ. ಈ ದಾನವನ್ನು ದಕ್ಷಿಣ ಕೇದಾರೇಶ್ವರ ದೇವಾಲಯದ ಆಚಾರ್ಯ ಭವಶಕ್ತಿ ಪಂಡಿತರಿಗೆ ಕೊಡಲಾಗಿದೆ. ಅಬ್ಬಲೂರಿನಲ್ಲಿ ಬಿಜ್ಜಳನ ಆಡಳಿತಾವಧಿಯಲ್ಲಿ ಕಂಡು ಬಂದ ಶಾಸನದಲ್ಲಿ[೮೪] ಏಕಾಂತರಾಮಯ್ಯ ಜೈನರೊಂದಿಗೆ ವಾದ ಮಾಡಿ ಶಿವನೇ ಶ್ರೇಷ್ಠನೆಂದು ಶಿರಸ್ತು ಪವಾಡ ಮಾಡಿ ಮೆರೆದ ಘಟನೆಯನ್ನು ವಿವರಿಸುತ್ತದೆ. ಎಮ್ಮಿಗನೂರಿನಲ್ಲಿ ಕೇತಸೆಟ್ಟಿಯ ಮಗ ಕಾಮಗಾವುಂಡನಿಂದ ರಾಮೇಶ್ವರ ದೇವಾಲಯ ನಿರ್ಮಾಣ ಮಾಡಿ ಪಾಶುಪತ ವ್ರತಧಾರಿಗಳಾದ ಯೋಗೇಶ್ವರ ಹಟ್ಟಹಾಸ ಮುನಿಗಳಲ್ಲಿ ದಾನ ನೀಡಿದ ವಿಷಯದ ಪ್ರಸ್ತಾಪವಿದೆ. ಹಾನಗಲ್ಲು ತಾಲೂಕಿನ ಮಂತಗಿಯ ತೇದಿ-ರಹಿತ ಶಾಸನದಲ್ಲಿ[೮೫] ಕಲಿದೇವಸೆಟ್ಟಿಯು ಬಿಜ್ಜಳನ ಕಾಲದಲ್ಲಿ ಬಸದಿಯನ್ನು ಸ್ಥಾಪಿಸಿ ೨೪ ಜನ ತೀರ್ಥಂಕರರನ್ನು ಪ್ರತಿಷ್ಠಾಪಿಸಿದ ಉಲ್ಲೇಖವಿದೆ. ಕ್ರಿ.ಶ. ೧೧೬೪ರ ಶಾಸನದಲ್ಲಿ[೮೬] ಹುಯಿಲಗೋಳದ ವ್ಯಾಪಾರಿ ಶ್ರೇಣಿಗಳು ಆ ಊರ ಚಂಡೇಶ್ವರ

ದೇವರಿಗೆ ದಾನ ನೀಡಿದ ವಿಚಾರವನ್ನು ತಿಳಿಸುತ್ತದೆ ಇದರಿಂದ ಬಿಜ್ಜಳನ ನಂತರ ಆತನ ಹಿರಿಯ ಮಗ ಸೋವಿದೇವ (೧೧೬೭-೧೧೭೨) ಚಿಕ್ಕಪ್ಪ ಮೈಲುಗಿ ಹಾಗೂ ಬಿಜ್ಜಳನ ಮೊಮ್ಮಗ ಕಲಿದೇವ ಇವರಿಬ್ಬರೂ ಅಷ್ಟಾಗಿ ಸಮರ್ಥರಾಗಿರಲಿಲ್ಲ ಇದಾದ ಮೇಲೆ ಸಂಕಮನು ೧೧೭೮ರಲ್ಲಿ ಅಧಿಕಾರಕ್ಕೆ ಬಂದನು. ಕ್ರಿ.ಶ. ೧೧೮೧ರ ಹರಳಹಳ್ಳಿ ಶಾಸನದಲ್ಲಿ[೮೭] ಅವನ ಅಧಿಕಾರಿ ಜೋಯಿದೇವನು ಮಾಡಿದ ದಾನಗಳ ಉಲ್ಲೇಖವಿದೆ ಇದಲ್ಲದೆ ಕ್ರಿ.ಶ.೧೧೮೩ ರ ಕಲಕೇರಿ ಶಾಸನದಲ್ಲಿ ಅಹವಮಲ್ಲನ ಕಾಲದಲ್ಲಿ ಆತನ ವಿರುದ್ಧ ರಟ್ಟಿಹಳ್ಳಿಯಲ್ಲಿ ಒಂದು ಯುದ್ಧ ನಡೆದ ಬಗ್ಗೆ ತಿಳಿಸುತ್ತದೆ. ಈ ಮೇಲಿನ ಎಲ್ಲಾ ಅಂಶಗಳಿಂದ ಈ ಪ್ರದೇಶದಲ್ಲಿ ಕಲಚೂರಿಗಳಿಂದ ತಮ್ಮದೇ ಆದ ಆಳ್ವಿಕೆಯನ್ನು ನಡೆಸಿದ್ದಾರೆ ಎಂಬುದನ್ನು ತಿಳಿಯಬಹುದಾಗಿದೆ.

## ಕಲಚೂರಿಗಳ ವಂಶವೃಕ್ಷ



# ಹಾನಗಲ್ ಕದಂಬರು

ಕಲ್ಯಾಣಿ ಚಾಲುಕ್ಯರ ಮಾಂಡಳಿಕರಾಗಿ ಹಾನಗಲ್ ಕದಂಬರು ಹಾವೇರಿ ಜಿಲ್ಲೆಯಲ್ಲಿ ಸುಮಾರು ಕ್ರಿ.ಶ. ೮ನೇ ಶತಮಾನದಿಂದ ಸುಮಾರು ಕ್ರಿ.ಶ. ೧೨ ನೇ ಶತಮಾನದವರೆಗೆ ಉತ್ತರ ಕರ್ನಾಟಕ ಭಾಗದಲ್ಲಿ ಆಳ್ವಿಕೆ ನಡೆಸಿದರು. ಇವರು ಆರಂಭದಲ್ಲಿ ರಾಷ್ಟ್ರಕೂಟ ಕಾಲದಲ್ಲಿ ಬನವಾಸಿಯಿಂದ ಆಳ್ವಿಕೆ ಮಾಡುತ್ತಿದ್ದು ಬನವಾಸಿ-೧೨೦೦೦, ಪ್ರಾಂತ್ಯದ ಮೇಲೆ ಅಧಿಕಾರ ಚಲಾಯಿಸಲು ಅನುವಾದರು.

ಬನವಾಸಿ ಕದಂಬರ ಉತ್ತರಾಧಿಕಾರಿಗಳೆಂದು ಕರೆದುಕೊಂಡು ಬನವಾಸಿಯಿಂದಲೇ ಮೊದಲು ಆಳ್ವಿಕೆ ಮಾಡುತ್ತಿದ್ದ ಚಟ್ಟಯ್ಯದೇವ ಎಂಬಾತನು ಕ್ರಿ.ಶ. ೮೯೯ರಲ್ಲಿ ರಾಷ್ಟ್ರಕೂಟ ಮಾಂಡಳೀಕರಾಗಿ ಆಳುತ್ತಿದ್ದುದರ ಬಗ್ಗೆ ಉತ್ತರ ಕನ್ನಡದ ಸೋಮನಹಳ್ಳಿಯಲ್ಲಿ ಕ್ರಿ.ಶ. ೯೯೯ರ ಶಾಸನವು ತಿಳಿಸುತ್ತದೆ. ತಾನು ಬನವಾಸಿ ೧೨೦೦೦, ಸಾಂತಳಿಗೆ ೧೦೦೦, ಪ್ರದೇಶಗಳನ್ನು ಆಳುತ್ತಿದ್ದನು. ಈತನ ನಂತರ ಚಾಲುಕ್ಯ ೨ನೇ ಜಯಸಿಂಹನ ಕಾಲದಲ್ಲಿ ರಾಜಕೀಯ ಆಳ್ವಿಕೆ ಮಾಡಿರುವುದು ಕಂಡುಬಂದರೂ ಯಾವುದೇ ರೀತಿಯ ಶಾಸನಗಳು ಈತನ ಕಾಲದಲ್ಲಿ ಕಾಣಸಿಗುವುದಿಲ್ಲ ಬಂಕಾಪುರದ ಕದಂಬರು ಇನ್ನೊಂದು ಶಾಖೆಯವರಾಗಿದ್ದು ಆಗ ಹಾನಗಲ್ ಬನವಾಸಿಗಳನ್ನು ಆಳುತ್ತಿದ್ದರೆಂದು ಡಾ. ಬಿ.ಆರ್.ಗೋಪಾಲ ಅವರು ಹೇಳಿದ್ದಾರೆ[೯].

ಈತನ ತರುವಾಯ ಜಯಸಿಂಹನ ೫ ಜನ ಮಕ್ಕಳಲ್ಲಿ ಒಬ್ಬನಾದ ಕೀರ್ತಿವರ್ಮನು ಬನವಾಸಿ, ಹಾನಗಲ್‌ಗಳನ್ನು ೧೦೬೮-೧೦೭೧ರವರೆಗೆ ಆಳ್ವಿಕೆ ಮಾಡಿದನು. ಈತ ಸೋಮೇಶ್ವರನ ಕಾಲದಲ್ಲಿ ನಡೆದ ಇವನ ಆಡಳಿತ ಕಾಲದಲ್ಲಿ ಅಣ್ಣನ ವಿರುದ್ಧ ಬಂಡಾಯ ಹೂಡಿ ೬ನೇ ವಿಕ್ರಮಾದಿತ್ಯನಿಗೆ ನೆರವಾದನು. ಈತನನ್ನು ಶಿಕ್ಷಿಸಲು ಎರಡನೆ ಸೋಮೇಶ್ವರನು ದಂಡನ್ನು ಕಳುಹಿಸಲು ಕೀರ್ತಿವರ್ಮನ ಇನ್ನೊಬ್ಬ ಸೋದರ ತೈಲನು ಅವನಿಗೆ ಎದುರು ಬಿದ್ದು ಶಿರಸಿಯಲ್ಲಿ ಯುದ್ಧವಾಗಿ ಕೀರ್ತಿವರ್ಮನು ಸೋತು ಬನವಾಸಿಗೆ ತನ್ನ ಅಧಿಕಾರ ಮಿತಗೊಳಿಸಿದನು. ಈತನ ತೇದಿರಹಿತ ಬಾಳೆಹಳ್ಳಿ ಶಾಸನದಲ್ಲಿ[೧೦] ನಾವಿಕೆರೆಯ ಮಹಾಪ್ರಭು ಬೆಳಗಾವುಂಡನ ಆದೇಶದಂತೆ ಸೇಣಿಗ ಸೋಮನಾಥನು ಪ್ರಾಣವನ್ನು ಅರ್ಪಿಸಿದುದ್ದಕ್ಕಾಗಿ ಬಿಟ್ಟ ಭೂದಾನದ ಉಲ್ಲೇಖವಿದೆ. ಈತನ ತರುವಾಯ ತೈಲನು ಬನವಾಸಿ ಹಾಗೂ ಹಾನಗಲ್ಲುಗಳನ್ನು ೧೯೯೦ರಲ್ಲಿ ಆಳಲಾರಂಭಿಸಿದನು. ಈತನ ತೇದಿರಹಿತ ಮಂತಗಿ ಶಾಸನದಲ್ಲಿ[೧೧] ತೈಲಪನು ಬನವಾಸಿ-೧೨೦೦, ಆಳುವಾಗ ಮಂತಗೆಯ "ಸಾಸಿರ್ವರು ಹಾಗೂ ಅರವತ್ತೂರ್ಕ್ಕಲು" ಸೋಮೇಶ್ವರ ದೇವರಿಗೆ ನೀಡಿದ ಚಿನ್ನ ಮತ್ತು ಭೂಮಿ ದಾನದ ಉಲ್ಲೇಖವಿದೆ. ಕ್ರಿ.ಶ. ೧೧೨೧ರ ಹಾನಗಲ್ ಶಾಸನದಲ್ಲಿ[೧೨] ಹಾನಗಲ್ಲಿನಲ್ಲಿ ತೈಲೇಶ್ವರ ದೇವಾಲಯವನ್ನು ಈತನ ಹೆಸರಿನಲ್ಲಿ ಕಟ್ಟಿಸಿದ್ದರ ಬಗ್ಗೆ ಉಲ್ಲೇಖವಿದೆ. ನಂತರ ಕ್ರಿ.ಶ.೧೧೨೬ ರ ನರೇಗಲ್ ಶಾಸನದಲ್ಲಿ[೧೩]

ದಾಸಿಮಯ್ಯ ಎಂಬಾತ ಸೂರ್ಯ ದೇವಾಲಯ ಕಟ್ಟಿಸಿದ ಬಗ್ಗೆ ಮಾಹಿತಿ ಇದೆ. ಈತನ ಕಾಲದಲ್ಲಿ ಹೊಯ್ಸಳ ವಿಷ್ಣುವರ್ಧನನು ಸಾಮ್ರಾಜ್ಯದ ಮೇಲೆ ಒತ್ತುವರಿ ನಡೆಸಿ ತುಂಗಭದ್ರಾ ನದಿಯನ್ನು ದಾಟಿ ಬರುತ್ತಿರಲು ಹೋಯ್ಸಳನನ್ನು ಈತನು ಪ್ರತಿಭಟಿಸಿದ್ದರ ಪ್ರತಿಧ್ವನಿಯು ಹಾನಗಲ್ಲು ಮಲ್ಲಿಗಾರ, ಹಾವಣಗಳಲ್ಲಿ ದೊರೆತ ವೀರಗಲ್ಲುಗಳಲ್ಲಿ ಕಂಡು ಬಂದಿವೆ. ತೈಲನ ನಂತರ ಈತನ ಮಕ್ಕಳಾದ ಮಯೂರವರ್ಮ (೧೦೩೦-೩೨), ಮಲ್ಲಿಕಾರ್ಜುನ (೧೧೩೨-೪೬) ಹಾಗೂ ಮೊದಲನೆಯ ತೈಲಪ (೧೧೪೭-೪೮) ಆಳಿದರು. ಇವರ ನಂತರ ಬಂದವರು ೩ನೇ ತೈಲಪ, ೨ನೇ ಕೀರ್ತಿವರ್ಮ, ಕಾಮದೇವ. ಇವರು ಈ ಪ್ರಾಂತ್ಯದಲ್ಲಿ ತನ್ನದೇ ಆದ ಆಳ್ವಿಕೆ ನಡೆಸಿದ್ದಾರೆ.

## ಗುತ್ತಲದ ಗುತ್ತರು

ಕಲ್ಯಾಣದ ಚಾಲುಕ್ಯರ ಮಾಂಡಳಿಕರಾಗಿ ಕೆಲಕಾಲ ಸ್ವತಂತ್ರರಾಗಿ ಮುಂದೆ ದೇವಗಿರಿಯ ಸೇವುಣರ ಮಾಂಡಳಿಕರಾಗಿ ೧೨ನೇ ಶತಮಾನದ ಆದಿಭಾಗದಿಂದ ೧೩ನೇ ಶತಮಾನದ ಅಂತ್ಯದವರೆಗೆ ಹಾವೇರಿ ತಾಲೂಕಿನ ಗುತ್ತವೊಳಲ್ ಅಥವಾ ಗುತ್ತಲದಿಂದ ಆಳಿದ ರಾಜವಂಶವೇ ಈ ಗುತ್ತರು[೪]. ಇವರು ತಮ್ಮನ್ನು ಮಗಧರ ಗುತ್ತರ ಉತ್ತರಾಧಿಕಾರಿಗಳೆಂದು ಉಜ್ಜಯಿನಿಪುರವರಾಧೀಶ್ವರರೆಂದು ಚಂದ್ರಗುಪ್ತಾನ್ವಯರೆಂದೂ ಕರೆದುಕೊಂಡ ಇವರ ಮೂಲಪುರುಷ ಮಾಗುಪ್ತ (ಮಹಾಗುಪ್ತ) ಹಾಗೂ ಆತನ ಮಗ ಗುಪ್ತ ಎಂದು ಇದರ ಶಾಸನಗಳು ಹೇಳಿವೆ. ಬಹುಶಃ ಈತನು ಕಲ್ಯಾಣದ ಒಂದನೆಯ ಸೋಮೇಶ್ವರನ ಕಾಲದಲ್ಲಿ ಅಧಿಕಾರ ಹೊಂದಿದ್ದು ಹಾನಗಲ್ ಕದಂಬರಿಂದ ಕೆಲವೊಂದು ಪ್ರದೇಶಗಳನ್ನು ಗೆದ್ದುಕೊಂಡಿರಬೇಕು. ಇವನ ನಂತರ ಮಲ್ಲದೇವನು. ೬ನೇ ವಿಕ್ರಮಾದಿತ್ಯನ ಮಾಂಡಳಿಕ ಗೋವಿಂದರಸನ ಅಧೀನನಾಗಿದ್ದನೆಂದು ತಿಳಿಯುತ್ತದೆ. ನಂತರ ಹೊನ್ನತ್ತಿ ಶಾಸನದಲ್ಲಿ ಜಟಾಚೋಡವಂಶದ ಅತ್ತಿರಾಜ ಎಂಬ ಅಧಿಕಾರಿ ನಂದಿತೀರ್ಥದಲ್ಲಿ ಶಿವಾಲಯ ರಚಿಸಿದನೆಂದು ಹೇಳಿದೆ. ಈತನ ನಂತರ ಜೋಯಿದೇವನು ಅಣ್ಣ ಮಲ್ಲದೇವನ ಜೊತೆ ಆಡಳಿತ ನಡೆಸಿದನು. ಮಲ್ಲದೇವನ ಮಗನಾದ ೨ನೇ ವಿಕ್ರಮಾದಿತ್ಯನನ್ನು ಉಲ್ಲೇಖಿಸುವ ಕ್ರಿ.ಶ.೧೧೬೩ರ ಗುತ್ತಲ ಶಾಸನದಲ್ಲಿ ರಾಜ್ಯದ ವ್ಯಾಪ್ತಿಯು ಚಿಕ್ಕಪ್ಪನ ರಾಜ್ಯದಷ್ಟೇ ಇದ್ದು ಈತನು ಗುತ್ತಲದಲ್ಲಿ ಬಸದಿಯೊಂದಕ್ಕೆ ದಾನ ನೀಡಿದ ವಿವರವಿದೆ. ಈತನು ತನ್ನ ತಾಯಿಯಿಂದ ಲಾಳಿಯದೇವಿ ಹೆಸರಿನಲ್ಲಿ ಪದ್ಮೇಶ್ವರ ದೇವಾಲಯ ಕಟ್ಟಿಸಿ ೧೧೯೦ರಲ್ಲಿ ದಾನ ನೀಡಿದನು. ನಂತರ ಈತನ ಸೇನಾನಿ ದಾಸರಾಜನು ಹಾವೇರಿ ತಾಲೂಕಿನ ಹರಳಹಳ್ಳಿಯಲ್ಲಿ ದಾಸೇಶ್ವರ ದೇವಾಲಯ ಕಟ್ಟಿಸಿದನು. ಕ್ರಿ.ಶ.೧೧೮೩ರಲ್ಲಿ ಕಲಚೂರಿಯ ಅಹವಮಲ್ಲನು ಈತನನ್ನು ಸೋಲಿಸಿದನು. ವಿಕ್ರಮಪುರ ಶಾಸನದಲ್ಲಿ[೫] ಗ್ರಾಮ ನಿರ್ಮಿಸಿ ಜೋಯಿದೇವನು ತನ್ನ ವಂಶದವರ ಸ್ಮಾರಕವಾದ ವಿಕ್ರಮೇಶ್ವರ ಮತ್ತು ಗುತ್ತೇಶ್ವರ ಮಂದಿರಗಳಿಗೆ ದಾನ ನೀಡಿದ ಉಲ್ಲೇಖವಿದೆ. ಶಾಸನದಲ್ಲಿ ಅಹವಮಲ್ಲನನ್ನು ಚಕ್ರವರ್ತಿಯೆಂದು

ಉಲ್ಲೇಖಿಸಿದೆ. ಈತನ ತರುವಾಯ ೩ನೇ ಜೋಯಿದೇವ ಮತ್ತು ೩ನೇ ವಿಕ್ರಮರು ರಾಜ್ಯಭಾರ ಮಾಡಿದರು ಉಚ್ಚಂಗಿ ಪಾಂಡ್ಯ ವಂಶದ ಸೋವಲದೇವಿ ಇವರ ರಾಣಿಯಲ್ಲಿ ಒಬ್ಬಳಾಗಿದ್ದು, ಸಾಂತಳಿಗೆ ನಾಡು ಸಿಂಗಿದೇವ ಇವನ ಅಳಿಯ ಜೋಯಿದೇವನು ಸೇವುಣ ಸಿಂಘಣನ ಸೇನಾನಿ ಬೀಚಿದೇವನಿಂದ ಸೋತು ಅವನ ಮಾಂಡಳಿಕನಾಗಿ ಸುಮಾರು ೧೦ ವರ್ಷಗಳ ಕಾಲ ಆಳ್ವಿಕೆ ಮಾಡಿದ ೩ನೇ ವಿಕ್ರಮಾದಿತ್ಯ ನಂತರ ಅವನ ಸೋದರ ೩ನೇ ಸೋಯಿದೇವನಿಗೆ ೧೧೩೮ರಲ್ಲಿ ಪಟ್ಟವಾಯಿತು. ಸೇವುಣ ಕನ್ನರನ ಮಾಂಡಳಿಕನಾಗಿ ಹೆಬ್ಬಳ್ಳಿಯ 'ಕುಮಾರ ವೃತ್ತಿ'ಯನ್ನು ಹೊಂದಿದ್ದನೆಂದು ಹಳಹಳ್ಳಿ ಶಾಸನವು[೯೬] ತಿಳಿಸುತ್ತದೆ.

## ನೂರುಂಬಾಡ ಕದಂಬರು

ಶಾಸನಗಳಲ್ಲಿ ತಮ್ಮನ್ನು "ಕಡಂಬ" ಎಂದು ಕರೆಸಿಕೊಂಡಿರುವ ಇವರು ಕಲ್ಯಾಣ ಚಲುಕ್ಯರ ಕಾಲಾವಧಿಯಲ್ಲಿ ತಲೆಯೆತ್ತಿ ರಟ್ಟಪಳ್ಳಿ-೭೦ ಹಾಗೂ ಇಟ್ಟಿಗೆ-೩೦ (ರಾಣೆಬೆನ್ನೂರು ತಾಲೂಕು) ಹೀಗೆ ೧೦೦ ಗ್ರಾಮಗಳನ್ನು ಒಳಗೊಂಡ ಪ್ರದೇಶದಲ್ಲಿ ಆಳ್ವಿಕೆ ಮಾಡುತ್ತಿದ್ದರು. ಹೀರೆಕೆರೂರು ತಾಲೂಕಿನ ರಟ್ಟಿಪಳ್ಳಿ ಇವರ ಕೇಂದ್ರ ಸ್ಥಾನವಾಗಿದ್ದು, ಚಾಲುಕ್ಯ ಸಾಮ್ರಾಟ ಎರಡನೆಯ ಜಯಸಿಂಹನು ಯಾವುದೇ ಶತ್ರುವನ್ನು ಸೋಲಿಸಿ ಶತ್ರುವಿನ ಒಂದು ಆನೆಯನ್ನು ವಶಪಡೆದು ಅದನ್ನು ಚಕ್ರವರ್ತಿಗೆ ನೀಡಿದ್ದರಿಂದ ಈ ನೂರುಂಬಾಡದ ಆಡಳಿತವನ್ನು ಬೀರದೇವನಿಗೆ ನೀಡಲಾಯಿತೆಂದು ೧೧೭೪ರ ಹಿರೇಕೆರೂರು ತಾಲೂಕಿನ ಕಣವಿಸಿದ್ದಗೇರಿ ಹಾಗೂ ರಟ್ಟಿಹಳ್ಳಿ ಶಾಸನ ತಿಳಿಸುತ್ತದೆ[೯೭].

ಈ ವಂಶದ ಪ್ರಥಮ ಉಲ್ಲೇಖವು ಚಾಲುಕ್ಯ ಇಮ್ಮಡಿ ಜಗದೇಕಮಲ್ಲನ ರಟ್ಟಿಹಳ್ಳಿ ಶಾಸನದಲ್ಲಿ ಮೂರನೇ ಕೇತ ಅರಸನಿಂದ ಮಂತ್ರಿಗಳಾಗಿದ್ದು ಮಲ್ಲರ ಉಲ್ಲೇಖವಿದೆ[೯೮]. ಈ ಕೇತಮಲ್ಲನ ಮಗ ಪಾಂಡ್ಯನು ಬಿಜ್ಜಳ ಸೋವಿದೇವನ ಮಾಂಡಳಿಕನಾಗಿದ್ದನೆಂದು ಹೇಳಿದೆ. ಈ ಪಾಂಡ್ಯದ ಹಡವಳ ಕುಮಾರ ಚೌಡರಸನ ಉಲ್ಲೇಖವಿದ್ದು, ಕಡಂಬೇಶ್ವರ ಸೇವೆಗೆ ಕಾಳಮುಖ ಪಂಥದ ಕಲ್ಯಾಣ ದೇವಪಂಡಿತರಿಗೆ ನೀಡಿದ ದಾನದ ಉಲ್ಲೇಖ ಶಾಸನದಲ್ಲಿ ದಾಖಲಾಗಿದೆ. ಇದೇ ರೀತಿ ಕ್ರಿ.ಶ. ೧೧೭೪ರ ಕಣವಿಸಿದ್ದಗೇರಿ ಹಾಗೂ ರಟ್ಟಹಳ್ಳಿ ಶಾಸನದಲ್ಲಿ[೯೯] "ಭಗವತಿ ಘಟ್ಟದ ಜಮದಗ್ನಿ ರಾಮೇಶ್ವರ ದೇವರಿಗೆ" ಪಾಂಡ್ಯದೇವರಸನು, ಕುಮಾರ ಚೌಡರಸನಿಂದ ಅದೇ ವರ್ಷ ನೀಡಿದ ದಾನದ ಉಲ್ಲೇಖಗಳಿವೆ. ಕ್ರಿ.ಶ.೧೨೩೮ ರ ರಟ್ಟಹಳ್ಳಿಯ ಶಾಸನದಲ್ಲಿ[೧೦೦] ಪಾಂಡ್ಯನಿಗೆ ಗರುಡ ಪಾಂಡ್ಯನೆಂಬ ತಮ್ಮನಿದ್ದಾನೆಂದು ಹೇಳಿದ್ದು, ಪಟ್ಟಾಭಿಷೇಕವಾದ ನಂತರ ಅವನು ಆ ಕಾಲಕ್ಕೆ ಸೇವುಣ ಸಿಂಘಣನ ಮಾಂಡಳಿಕನಾಗಿದ್ದ ಹೊನ್ನ ಬೊಮ್ಮಸೆಟ್ಟಿ ಎಂಬುವನು ರಟ್ಟಿಹಳ್ಳಿ ಕದಂಬೇಶ್ವರ ದೇವಾಲಯದಲ್ಲಿ ಮಲ್ಲೇಶ್ವರ ಮತ್ತು ರಾಜೇಶ್ವರ ಲಿಂಗಗಳನ್ನು ಪ್ರತಿಷ್ಠಾಪಿಸಿ ಅವುಗಳ ಅರ್ಚಕರಿಗೆ ಕಾಡಹಿವೂರು ಎಂಬ ಗ್ರಾಮವನ್ನು ಕಾಳಮುಖ ಪಂಥದ ರಾಜಗುರು ಮೂರುಜಾವಿದೇವರಿಗೆ ಒಪ್ಪಿಸಿದನ್ನು ಈ ಶಾಸನದಲ್ಲಿ ತಿಳಿಸಿದೆ.

# ದೇವಗಿರಿಯ ಯಾದವರು (ಸೇವುಣರು)

ದೇವಗಿರಿಯ ಯಾದವರ ಇತಿಹಾಸವು ಕಲ್ಯಾಣಿ ಚಾಲುಕ್ಯರ ವಂಶದ ಇತಿಹಾಸದ ನಂತರ ಬಾದಾಮಿ ಚಾಲುಕ್ಯರ ಕಾಲದಿಂದ ಐದು ಶತಮಾನದಷ್ಟು ದೀರ್ಘಕಾಲ ನಡೆದು ಬಂದು ಕಾವೇರಿಯಿಂದ ನರ್ಮದಾವರೆಗಿನ ಕರ್ನಾಟಕ ಸಾಮ್ರಾಜ್ಯ ಒಡೆದು ಚೂರುಚೂರಾಗಿ ದೇವಗಿರಿ (ಅಂದರೆ ಈಗಿನ ದೌಲಬಾಬಾದ್)ಯ ಸೇವುಣ ಯಾದವರು ಓರಂಗಲ್‌ನ ಕಾಕತೀಯರು ಹಾಗೂ ದ್ವಾರಸಮುದ್ರದ ಹೊಯ್ಸಳರಲ್ಲಿ ಹಂಚಿ ಹೋದರು[೧೦೧]. ಇವರು ಹಾವೇರಿ ಜಿಲ್ಲೆಯಲ್ಲಿ ಕ್ರಿ.ಶ ೧೨ ಮತ್ತು ೧೩ ನೇ ಶತಮಾನದಲ್ಲಿ ಆಳ್ವಿಕೆ ಮಾಡಿರುವುದು ಶಾಸನಗಳಲ್ಲಿ ತಿಳಿದುಬರುತ್ತದೆ. ಪ್ರಥಮವಾಗಿ ಈ ಜಿಲ್ಲೆಯ ಮೇಲೆ ಪೂರ್ತಿ ಹಿಡಿತ ಹೊಂದಿದವನು ಸಿಂಘಣ. ಈತನ ಶಾಸನಗಳು ಕ್ರಿ.ಶ. ೧೨೪೧ರ ಹಿರೇಕೆರೂರು ತಾಲೂಕಿನ ಸಾತೇನಹಳ್ಳಿ ಶಾಸನದಲ್ಲಿ[೧೦೨] ನಾಡಪ್ರಭು ಬೊಮ್ಮಸೆಟ್ಟಿಯು ಶಂಕರನಾರಾಯಣ ದೇವಾಲಯವನ್ನು ಕಟ್ಟಿಸಿದನು. ಕ್ರಿ.ಶ ೧೨೫೦ ರ ಶಾಸನದಲ್ಲಿ ಹಾನಗಲ್ಲು ಕದಂಬವಂಶದ ಮಲ್ಲದೇವನ ಪತ್ನಿ ಪದ್ಮಲದೇವಿ ಹುಲಗೂರಲ್ಲಿ ಒಂದು ಅಗ್ರಹಾರವನ್ನು ಸ್ಥಾಪಿಸಿದಳು ಹಾಗೂ ಬಾಳಂಬೀಡು ಶಾಸನದಲ್ಲಿ[೧೦೩] ದಂಡನಾಯಕ ಬಾಚಯ್ಯ ಪಂಡರಂಗೇಶ್ವರನಿಗೆ ದಾನ ನೀಡಿದ ವಿವರವಿದೆ. ಹಾವೇರಿ ಸಿದ್ದನಾಥ ದೇವಾಲಯಕ್ಕೆ ದಾನ ನೀಡಿದ ಬಗ್ಗೆ ಕ್ರಿ.ಶ, ೧೨೯–೩೬ರ ಕಾಲದ ಶಾಸನಗಳು ಲಭ್ಯವಿದ್ದು, ಅದರಲ್ಲಿ ಪಾಂಡ್ಯದೇವನೆಂಬಾತನ ವಿರುದ್ದ ಹೋರಾಡಿ ಮಡಿದ ೫ ಜನ ವೀರರನ್ನು ಹೆಸರಿಸುವ ವೀರಗಲ್ಲುಗಳು ಕಳ್ಳಹಾಳದಲ್ಲಿ ಇವೆ. ಕ್ರಿ.ಶ. ೧೨೩೮ರ ರ ಹೀರೆಅಣಜಿ ಶಾಸನದಲ್ಲಿ[೧೦೪] ದೇವಂಗೆರಿ–೧೪೦ರಲ್ಲಿಯ ಗೂಟ್ಟಗುಡಿಯ ಗೋಗ್ರಹಣದಲ್ಲಿ ಗೊಗ್ಗಿಸೆಟ್ಟಿಯ ವೀರಮರಣವನ್ನು ತಿಳಿಸುತ್ತದೆ. ಕ್ರಿ.ಶ.೧೨೬೧ ರ ಇಟಗಿಯ ಶಾಸನದಲ್ಲಿ[೧೦೫] ರಟ್ಟಿಹಳ್ಳಿ ಯುದ್ದದಲ್ಲಿ ಡಬ್ಬಣ ರಾವುತನ ಸಂಬಂಧಿಕನೊಬ್ಬನ ವೀರಮರಣ ತಿಳಿಸುತ್ತದೆ. ಕ್ರಿ.ಶ. ೧೨೪೩ ರ ಕಲಕೇರಿಯ ಶಾಸನದಲ್ಲಿ[೧೦೬] ರಾಜಗುರು ಅಮರೇಶ್ವರನದೇವನು ತನ್ನ ಶಿಷ್ಯ ಮಲ್ಲಿಕಾರ್ಜುನ ಪಂಡಿತನಿಗೆ ಜಯಸಿಂಹಶ್ವರ ಸ್ಥಾನವನ್ನು ನೀಡಿದ ವಿಷಯವನ್ನು ದಾಖಲಿಸುತ್ತದೆ. ಕ್ರಿ.ಶ. ೧೨೩೪ರ ಮಂತ್ರವಾಡಿ ಶಾಸನದಲ್ಲಿ[೧೦೭] ಹೊನ್ನಬೊಮ್ಮಿಸೆಟ್ಟಿಯಿಂದ ಸೊನ್ನಲಿಗೆಯ ಕಪಿಲಸಿದ್ದ ಮಲ್ಲಿಕಾರ್ಜುನ ದೇವರಿಗೆ ಮಂತ್ರವಾಡಿ ಗ್ರಾಮದಾನ ನೀಡಿದನ್ನು ಉಲ್ಲೇಖಿಸುತ್ತದೆ. ಈತನ ತರುವಾಯ ರಾಮಚಂದ್ರನು ಅಧಿಕಾರಕ್ಕೆ ಬಂದನು (೧೨೭೧–೧೩೧೨). ಈತನ ಕಾಲವು ಕ್ರಿ.ಶ. ೧೨೮೮ರ ಕಿತ್ತೂರಿನ ಶಾಸನದಲ್ಲಿ[೧೦೮] ಮಹಾಮಂಡಳೇಶ್ವರ ಬಾವುಗೆದೇವರಾನೆಯನಿಂದ ಕಲಿನಾಥ ಮೂಲಸ್ಥಾನ ಜಕ್ಕೇಶ್ವರ ದೇವಾಲಯದ ಬ್ರಾಹ್ಮಣರಿಗಾಗಿ ಬಾಚಿದೇವನಿಗೆ ಭೂದಾನ ನೀಡಿದ ಉಲ್ಲೇಖವಿದೆ. ಕ್ರಿ.ಶ.೧೯೨ರ ಬೆನಕನಕೊಂಡದ ಶಾಸನದಲ್ಲಿ[೧೦೯] ಮಹೇಶ್ವರದೇವನಾಳುವಾಗ ಬೀಳುಗಲಿಯ ಅಳಿವಿನಲ್ಲಿ ಮಸಣೆಯನಾಯಕನಿಗೆ ದೇಕಗೌಡನಿಂದ ನೆತ್ತರು ಗೆಯ್ ಕೊಡುಗೆ ನೀಡಿದನ್ನು ದಾಖಲಿಸುತ್ತದೆ. ಅದೇ ರೀತಿ

ಚೌಡದಾನಪುರದ ಶಾಸನದಲ್ಲಿ[೧೯೦] ಮಹಾಪ್ರಧಾನ ಸರ್ವಾಧಿಕಾರಿ ಪರುಶುರಾಮದೇವರ ಆಜ್ಞೆಯ ಮೇರೆಗೆ ಸಂಕವೆರ್ಗಡೆಯಿಂದ ಮುಕ್ತನಾಥ ದೇವರಿಗೆ ಸುಂಕ ದಾನ ನೀಡಿದ ಬಗ್ಗೆ ಮಾಹಿತಿ ಲಭ್ಯವಿದೆ. ಹೀಗೆ ಈ ಪ್ರಾಂತ್ಯದಲ್ಲಿ ಯಾದವರು ತನ್ನದೇ ಆದ ರೀತಿಯಲ್ಲಿ ಆಳ್ವಿಕೆಯನ್ನು ನಡೆಸಿದ್ದಾರೆ.

**ಸೇವುಣರ ವಂಶವಾಹಿನಿ**



# ಹೊಯ್ಸಳರು

ಹತ್ತನೆಯ ಶತಮಾನದ ಮಧ್ಯಭಾಗದಿಂದ ಹದಿನಾಲ್ಕನೇ ಶತಮಾನದ ಮಧ್ಯಭಾಗದವರೆಗೆ, ವಿಶೇಷವಾಗಿ ದಕ್ಷಿಣ ಕರ್ನಾಟಕ ಮತ್ತು ಸುತ್ತಲಿನ ಭಾಗಗಳನ್ನು ಆಳಿದ ರಾಜಮನೆತನ. ಈ ವಂಶದ ಅರಸರ ರಾಜಧಾನಿ ಮೊದಲು ಶಶಾಕಪುರ ಅಥವಾ ಸೊಸೆವೂರು (ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲೂಕಿನ ಆಂಗಡಿ) ಅನಂತರ ಬೇಲೂರು ಮತ್ತು ದೊರಸಮುದ್ರ ಮಲೆನಾಡಿನ ಒಂದು ಚಿಕ್ಕಪಾಳೆಯ ಪಟ್ಟಾಗಿ ಆರಂಭವಾಗಿ, ತತ್ಕಾಲಿನ ಅಸ್ಥವ್ಯಸ್ಥ ರಾಜಕೀಯ ಪರಿಸ್ಥಿತಿಯ ಲಾಭ ಪಡೆದು ಮೊದಲು ಕಲ್ಯಾಣಿ ಚಾಲುಕ್ಯರ ಸಾಮಂತರಾಗಿ, ನೆಲೆಗೊಂಡು ಮುಂದೆ ಶೌರ್ಯ ಹಾಗೂ ಸ್ವಸಾಮರ್ಥ್ಯದಿಂದ ರಾಜ್ಯ ವಿಸ್ತಾರ ಮಾಡಿ, ಸ್ವತಂತ್ರರಾಗಿ ತಮ್ಮ ಪ್ರಭಾವವನ್ನು ತಮಿಳುನಾಡಿಗೂ ವಿಸ್ತರಿಸಿ ನಾಡಿನ, ಆರ್ಥಿಕ, ಸಾಂಸ್ಕೃತಿಕ ರಂಗಗಳಲ್ಲಿ ಉನ್ನತ ಸಾಧನೆಗಳಿಗೆ ಪ್ರೋತ್ಸಾಹ ನೀಡಿ ಸುಮಾರು ಮೂರು ಶತಮಾನಗಳಿಗೂ ಹೆಚ್ಚು ಕಾಲ ವೈಭವೋಪೇತವಾಗಿ ಮೆರೆದ ಈ ರಾಜವಂಶದ ಇತಿಹಾಸ ಕರ್ನಾಟಕದ ಇತಿಹಾಸದ ಒಂದು ಮುಖ್ಯ ಅಧ್ಯಾಯ. ಹಾವೇರಿ ಜಿಲ್ಲೆಯ ಶಾಸನಗಳನ್ನು ಅವಲೋಕಿಸಿ ನೋಡಿದಾಗ ಹೊಯ್ಸಳರ ಸಾಮ್ರಾಜ್ಯದ ಆಳ್ವಿಕೆ ಎರಡನೇ ವೀರಬಲ್ಲಾಳನ ಕಾಲದಿಂದ ರಾಜಕೀಯ ಇತಿಹಾಸವು ಪ್ರಾರಂಭವಾಗುತ್ತದೆ[೧೧೧]. (ವಿಷ್ಣುವರ್ಧನು ಹೆದ್ದೊರೆಯ ತನಕ ದಂಡಯಾತ್ರೆ ಮಾಡಿದನಾದರೂ ಕ್ರಿ.ಶ. ೧೧೪೧ರಲ್ಲಿ ಬಂಕಾಪುರದಲ್ಲಿ ಸಾವನ್ನಪ್ಪಿದನು ಎಂಬ ಉಲ್ಲೇಖಗಳು ಕಂಡುಬಂದರೂ ಈ ಪ್ರಾಂತ್ಯದಲ್ಲಿ ಇವನಿಗೆ ಸಂಬಂಧಪಟ್ಟ ಯಾವುದೇ ಶಾಸನ ದಾಖಲೆಗಳು ಕಂಡುಬರುವುದಿಲ್ಲ). ಕ್ರಿ.ಶ. ೧೨೦೩[೧೧೨]ರ ಬೆನಕನಕೊಂಡ ಶಾಸನದಲ್ಲಿ ಮಹಾಮಂಡಳೇಶ್ವರ ಕುಮಾರ ಆಳ್ವಿಕೆಯಲ್ಲಿ ದಾಸಿಮಾದಿಗಳಿಂದ ಚೌಡಯ್ಯ ನಾಯಕರುಗಳಿಗೆ ಭೂಮಿ ಮತ್ತು ನಿವೇಶನ ದಾನ ನೀಡಿದ ಉಲ್ಲೇಖವಿದೆ. ಕ್ರಿಶ ೧೨೦೪ರ ಸಾತೇನಹಳ್ಳಿಯ ಶಾಸನದಲ್ಲಿ[೧೧೩] ಸಾತೇನಹಳ್ಳಿಯ ಒಂದು ಪ್ರಮುಖ ಬಣಂಜು ಪಟ್ಟಣ, ನಾಗರಖಂಡ-೭೦ನ್ನು ಬೋಮ್ಮನು ಆಳುತ್ತಿದ್ದು ಹರಿಹರೇಶ್ವರ ದೇವಾಲಯವನ್ನು ಕಟ್ಟಿಸಿದ ವಿಚಾರವಿದೆ. ನಂತರ ಸಿಂಘಣನ ಕಾಲದ ಅನೇಕ ಶಾಸನಗಳು ಹಿರೇಕೆರೂರಿನಲ್ಲಿ ದೊರೆತಿದ್ದು, ಇವುಗಳೆಲ್ಲವೂ ವೀರಗಲ್ಲುಗಳಾಗಿವೆ. ಕ್ರಿ.ಶ.೧೨೩೭-೩೮ ರಟ್ಟಿಹಳ್ಳಿಯಲ್ಲಿ ದೊರೆತ ಶಾಸನಗಳಲ್ಲಿ ಇಮ್ಮಡಿ ಜಗದೇಕಮಲ್ಲ ಹಾಗೂ ಬಿಜ್ಜಳನ ಕಾಲದಲ್ಲಿ ಕಂಡುಬರುವ ಶಾಸನಗಳಂತಿದ್ದು ಅಲ್ಲದೆ ಕೇತಗನ ಮಕ್ಕಳು ವೀರ ಪಾಂಡ್ಯ ಗರುಡ ಪಾಂಡ್ಯರ ಉಲ್ಲೇಖವಿದೆ. ಮುಳಗುಂದ ಹೊನ್ನ ಬೋಮ್ಮನ ಮಂತ್ರಿ ಕರನದರಲ್ಲಿ ಎನ್ನುವವನು ಕದಂಬೇಶ್ವರ ದೇವರ ಪೂಜಾಕಾರ್ಯಕ್ಕೆಂದು ಮೂರು ಜಾವಿದೇವರ ಕೈಯಲ್ಲಿ ದಾನಕೊಟ್ಟ ಉಲ್ಲೇಖಗಳಿವೆ.



ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಹೊಯ್ಸಳರು ಈ ಭಾಗದಲ್ಲಿ ಅಸ್ತಿತ್ವ ಸ್ಥಾಪಿಸಿದ್ದು ಸರಿಯಷ್ಟೆ ಆದರೆ ಇವರ ಶಾಸನಗಳು ಅಷ್ಟಾಗಿ ಈ ಜಿಲ್ಲೆಯಲ್ಲಿ ದೊರೆಯದಿರುವುದು ಒಂದು ದುರ್ದೈವದ ಸಂಗತಿಯಾಗಿದೆ.

## ಹೊಯ್ಸಳರ ವಂಶವಾಹಿನಿ



ನೃಪಕಾಮ
(ಕ್ರಿ.ಶ. ೧೦೨೨ – ೧೦೪೦)
ವಿನಯದಿತ್ಯ
(ಕ್ರಿ.ಶ. ೧೦೪೧ – ೧೦೯೮)
ಎರೆಯಂಗ
(ಕ್ರಿ.ಶ. ೧೦೯೮ – ೧೧೦೦)
ಮೊದಲನೆಯ ಬಲ್ಲಾಳ
(ಕ್ರಿ.ಶ. ೧೧೦೦ – ೧೧೦೮)
ವಿಷ್ಣುವರ್ಧನ
(ಕ್ರಿ.ಶ. ೧೧೦೮ – ೧೧೪೨)
ಉದಯಾದಿತ್ಯ
ಬಲ್ಲಾಳದೇವ
ಮೊದಲನೆಯ ನರಸಿಂಹ
(ಕ್ರಿ.ಶ. ೧೧೫೨ – ೧೧೭೭)
ಇಮ್ಮಡಿ ಬಲ್ಲಾಳ
(ಕ್ರಿ.ಶ. ೧೧೭೩ – ೧೨೨೦)
ಇಮ್ಮಡಿ ನರಸಿಂಹ
(ಕ್ರಿ.ಶ. ೧೧೨೦ – ೧೨೩೫)
ಮುಮ್ಮಡಿ ನರಸಿಂಹ
(ಕ್ರಿ.ಶ. ೧೧೨೦ – ೧೨೩೫)
ರಾಮನಾಥ
(ಕ್ರಿ.ಶ. ೧೨೫೩ – ೧೨೯೫)
ಮುಮ್ಮಡಿ ಬಲ್ಲಾಳ
(ಕ್ರಿ.ಶ. ೧೨೫೩ – ೧೩೪೯)
ವಿಶ್ವನಾಥ
(ಕ್ರಿ.ಶ. ೧೨೯೫ – ೧೩೦೦)
ವಿರೂಪಾಕ್ಷ (ನಾಲ್ಕನೇ ಬಲ್ಲಾಳ)
(ಕ್ರಿ.ಶ. ೧೩೪೩ – ೧೩೪೬)

## ವಿಜಯನಗರ ಸಾಮ್ರಾಜ್ಯ

ದಕ್ಷಿಣ ಭಾರತದ ಇತಿಹಾಸದಲ್ಲಿ ಸುಮಾರು ಮೂರನೇ ಶತಮಾನಗಳಿಗೂ ಹೆಚ್ಚು ಕಾಲ (೧೪-೧೭ ನೇ ಶತಮಾನ) ಆಳ್ವಿಕೆ ನಡೆಸಿ ಹಿಂದೂಧರ್ಮ ಮತ್ತು ಸಂಸ್ಕೃತಿಯನ್ನು ಪೋಷಿಸಿದ ವಿಶಾಲ ಸಾಮ್ರಾಜ್ಯ ಸಂಗಮ ವಂಶದ ಸಹೋದರರಾದ ಹರಿಹರ, ಬುಕ್ಕರು ೧೩೩೬ರಲ್ಲಿ ಈ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಇವರ ಕಿರಿಯ ಸಹೋದರರಾದ ಕಂಪಣ್ಣ, ಮಾರಪ್ಪ, ಮುದ್ದಪ್ಪ ಇವರಿಗೆ ಬೆಂಬಲ ನೀಡಿದರು. ಮಹಮದ್ ಬಿನ್ ತುಘಲಕ್‌ನ ದಾಳಿಗೆ ದಕ್ಷಿಣದ ದೇವಗಿರಿಯ ಸೇವುಣ, ವಾರಂಗಲ್‌ನ ಕಾಕತೀಯ, ಹೊಯ್ಸಳ ರಾಜ್ಯಗಳು ಒಳಗಾದವು. ದಖನ್ ರಾಜಕೀಯ ಅನೈತಿಕತೆ ಮತ್ತು ಶೂನ್ಯವನ್ನು ಹೋಗಲಾಡಿಸಿದ ವಿಜಯನಗರ ಸಾಮ್ರಾಜ್ಯ ಹಿಂದೂ ಧರ್ಮದ ರಕ್ಷಣಾ ಕೋಟೆಯಂತೆ ಕಾರ್ಯನಿರ್ವಹಿಸಿತು. ಕಲೆ, ವಾಸ್ತುಶಿಲ್ಪ, ಸಾಹಿತ್ಯ, ಧರ್ಮಗಳನ್ನು ರಕ್ಷಿಸಿ ಪ್ರೋತ್ಸಾಹಿಸಿತು. ಆಡಳಿತ ಕ್ಷೇತ್ರಗಳಲ್ಲಿ ಹೊಸರೂಪ ತಂದಿತು. ವಿದೇಶಿಯರ ಧಾಳಿಗಳಿಂದ ನಾಡನ್ನು ರಕ್ಷಿಸಿದ್ದರಿಂದಲೇ ಈ ವಂಶಕ್ಕೆ ವಿಜಯನಗರದ ಅರಸರೆಂಬ ಪ್ರತೀತಿ. ತುಂಗಭದ್ರಾ ದಂಡೆಯ ಹಂಪಿ ಇವರ ರಾಜಧಾನಿಯಾಗಿದ್ದು, ವರಾಹವನ್ನು ರಾಜಲಾಂಛನವಾಗಿ ಹೊಂದಿದ್ದರು[೧೧೪]. ಈ ಸಾಮ್ರಾಜ್ಯದ ಸಂಸ್ಥಾಪಕರು ಮೇಲೆ ಹೇಳಿದ ಸಂಗಮನ ಮಕ್ಕಳಾದ, ಹರಿಹರ, ಬುಕ್ಕ, ಕಂಪಣ, ಮಾರಪ್ಪ ಮತ್ತು ಮುದ್ದಪ್ಪ ಎಂಬವರೆಂದು ಕ್ರಿ.ಶ. ೧೩೪೬ರ ಶೃಂಗೇರಿ ಶಾಸನದಲ್ಲಿ ಉಲ್ಲೇಖವಾಗಿದೆ[೧೧೫]. ಮೂಲತಃ ಸಂಗಮನ ವಂಶದವರು ಕಾಳಾಮುಖ ಪಂಥಕ್ಕೆ ಸೇರಿದವರಾಗಿದ್ದು, ಕಾಶೀವಿಲಾಸ ಕ್ರಿಯಾಶಕ್ತಿಗಳು ಅವರ ಗುರುಗಳಾಗಿದ್ದರು. ಹರಿಹರಾದ ಸಂಗಮ ಸೋದರರು ಶೃಂಗೇರಿಯಲ್ಲಿ ಶಂಕರರು ಸ್ಥಾಪಿಸಿದ್ದ 'ಧರ್ಮಪೀಠ'ದಲ್ಲಿ ಅನುಷ್ಠಾನ ಮಾಡಿಕೊಂಡಿರಲು ಭಾರತಿ ತೀರ್ಥರಿಗೆ ದಾನ ಕೊಡುವುದಕ್ಕೆ ಮುಂದೆ ಶೃಂಗೇರಿ ಮಠದ ಬಗ್ಗೆ ವಿಶೇಷ ಭಕ್ತಿ ತೋರಿದಕ್ಕೆ ಹೆಚ್ಚಿನ ಮಹತ್ವವಿಟ್ಟರು. ಇದರಿಂದ ಹಾವೇರಿ ಜಿಲ್ಲೆಯನ್ನೊಳಗೊಂಡಂತೆ ವಿಜಯನಗರದ ಅರಸರು ಅಧಿಪತ್ಯ ಸ್ಥಾಪಿಸಿದರು. ಈ ಸಾಮ್ರಾಜ್ಯದ ಸ್ಥಾಪಕ ೧ ನೇ ಹರಿಹರ (೧೩೩೬-೧೩೫೬). ಈತ ಎರಡು ದಶಕಗಳ ಕಾಲ ರಾಜ್ಯವಾಳಿ ಸಾಮ್ರಾಜ್ಯದ ಭದ್ರಬುನಾದಿಯ ಮೇಲೆ ರಾಜ್ಯವನ್ನು ಸ್ಥಾಪಿಸಿ ತನ್ನ ನಾಲ್ವರು ತಮ್ಮಂದಿರ ನೆರವಿನಿಂದ ರಾಜಕೀಯ ಅಸ್ಥಿರತೆಯನ್ನು ಪಡೆದು ಶಾಂತಿ ನೆಲೆಸುವಂತೆ ಮಾಡಿದನು.

ಕ್ರಿ.ಶ.೧೩೪೯ರ ಹಿರೇಕೆರೂರು ತಾಲೂಕಿನ ಅಬಲೂರು ಗ್ರಾಮದಲ್ಲಿ ದೊರೆತ ಶಾಸನದಲ್ಲಿ[೧೧೬] ಸಮುದ್ರ ಸಾಳ್ವವೀರ ಬಾಚಪ್ಪದೇವ ಎಂಬ ಅಧಿಕಾರಿಯ ಉಲ್ಲೇಖವಿದೆ. ಇದು ಒಂದು ವೀರಗಲ್ಲಾಗಿದ್ದು, ಮರಣ ಹೊಂದಿದ ವೀರನ ಹೆಸರು ಅಸ್ಪಷ್ಟವಾಗಿದೆ. ೧೩೫೩ರ ಮತ್ತೊಂದು ಶಾಸನದಲ್ಲಿ ಸಾವಣ್ಣ ಒಡೆಯನ ಉಲ್ಲೇಖವಿದ್ದು ಲಕ್ಷ್ಮೇಶ್ವರದ ಸೋಮಯ್ಯ (ಸೊಮೇಶ್ವರ) ದೇವಾಲಯದ ಜೀರ್ಣೋದ್ಧಾರವನ್ನು ಚಿಕ್ಕಕೆರೆಯ ನಾಯಕನು ಮಾಡಿದನೆಂಬ ಉಲ್ಲೇಖವಿದೆ. ಕ್ರಿ.ಶ. ೧೩೫೭ರ ಶಾಸನದಲ್ಲಿ ಕುಮಾರ ವಿರೂಪಣ್ಣ ಒಡೆಯರು ಆಳುತ್ತಿದ್ದಾಗ

ಮಾದರಸ ಚಟ್ಟನಹಳ್ಳಿಯ ಭೈರವೇಶ್ವರ ದೇವರಿಗೆ ದಾನ ನೀಡಿದ ಮಾಹಿತಿಯಿದೆ.[೧೧೭]. ಈತನ ನಂತರ ೧ನೇ ಬುಕ್ಕನು ೧೩೫೦-೧೩೭೭ ರಂದು ಅಧಿಕಾರಕ್ಕೆ ಬಂದನು. ಈತನ ಕಾಲದಲ್ಲಿ ಮಾದರಸನು ಎಂಬುವನು ಕ್ರಿ.ಶ. ೧೩೭೦ರಲ್ಲಿ ಚಂದ್ರಗುತ್ತಿ ಗೋವೆಗಳಿಂದ ಆಳುತ್ತಿದ್ದ. ಈತನ ತರುವಾಯ ೨ನೇ ಹರಿಹರ (೧೩೭೭-೧೪೦೪) ರಾಜ್ಯವಾಳತೊಡಗಿದನು. ಈತನು ಕ್ರಿ.ಶ.೧೩೮೭ರ ಸುತಕೋಟಿ ಶಾಸನದಲ್ಲಿ ಚಕ್ರವರ್ತಿ ೨ನೇ ಹರಿಹರನ ಉಲ್ಲೇಖವಿದ್ದು ವೀರನೊಬ್ಬನ ಮರಣದ ಉಲ್ಲೇಖವಿದೆ. ಅದೇ ರೀತಿ ಬ್ಯಾಡಗಿ ತಾಲೂಕಿನ ಹಿರೇಹಳ್ಳಿಯ ತೇದಿರಹಿತ ಶಾಸನದಲ್ಲಿ ೨ನೇ ಹರಿಹರನ ಕಾಲದಲ್ಲಿ ವೀರನೊಬ್ಬನ ಮರಣದ ಉಲ್ಲೇಖ ಮತ್ತು ವೀರನ ತಂದೆ ತಾಯಂದಿರ ಹೆಸರು ಪ್ರಸ್ತಾಪವಿದೆ ಹಾಗೂ ಮತ್ತೊಂದು ತೇದಿರಹಿತ ಶಿಗ್ಗಾಂವಿ ತಾಲೂಕಿನ ಮುತ್ತಹಳ್ಳಿ ಶಾಸನದಲ್ಲಿ ಮೇಲೆ ತಿಳಿಸಿದ ಮಾದರಸ ಒಡೆಯನ ಉಲ್ಲೇಖವಿದ್ದು, ಇಲ್ಲಿ ಆತನು 'ಗೋವೆಯ ಮಾದರಸ' ಎಂದು ಸ್ಪಷ್ಟವಾಗಿ ತಿಳಿಸಿದ್ದು, ಎರಡನೆ ಹರಿಹರನ ಕಾಲದಲ್ಲಿ ಸೂರಪ್ಪಯ್ಯ ಎಂಬುವರಿಗೆ ಮುತ್ತಹಳ್ಳಿ ಗ್ರಾಮ ದಾನಮಾಡಿದ ವಿವರವಿದೆ ಹಾಗೂ ಇಲ್ಲಿ ಮಾದನಒಡೆಯನ ಮಗ ಸಿಂಗಿನಾಯಕನ ಸೂರಪ್ಪಯ್ಯನ ಮಗ ಜನ್ನಪ್ಪಯ್ಯನಿಗೆ ದಾನ ನೀಡಿದ ವಿಚಾರವಿದೆ ಹಾಗೂ ಬಂಕಾಪುರದ ತೇದಿರಹಿತ ಶಾಸನದಲ್ಲಿ ಹರಿಹರ ಮತ್ತು ಮಾದವ ಮಂತ್ರಿಯ ಉಲ್ಲೇಖವಿರುವುದನ್ನೂ ಅಂಶ ತಿಳಿಯಬಹುದಾಗಿದೆ ಕ್ರಿ.ಶ. ೧೪೦೩ ರ ಬ್ಯಾಡಗಿ ಶಾಸನದಲ್ಲಿ ವೀರನೊಬ್ಬ ಹರಿಹರನ ಕಾಲದಲ್ಲಿ ಮರಣ ಹೊಂದಿದ ಸಂಗತಿಯ ಪ್ರಸ್ತಾಪವಿದೆ[೧೧೮].

ಈತನ ನಂತರ ಇವನ ಮಗ ವಿರೂಪಾಕ್ಷ (೧೪೦೪), ಎರಡನೇ ಬುಕ್ಕ (೧೪೦೫-೦೬) ಹಾಗೂ ಕೊನೆಗೆ ಈತನ ತಮ್ಮ ದೇವರಾಯ (೧೪೦೬-೨೨) ಇವರುಗಳು ಆಳಿದರು. ಇವರೆಲ್ಲರೂ ಎರಡನೇ ಹರಿಹರನ ಮಕ್ಕಳಾಗಿದ್ದರು ಈ ದೇವರಾಯನು ತಂದೆಯ ಕಾಲದಲ್ಲೇ ಉದಯಗಿರಿಯ ರಾಜ್ಯಪಾಲರಾಗಿ ಬಹುಮನಿ ಹಾಗೂ ರೆಡ್ಡಿ ಮತ್ತು ವೇಳೆಮೆ ರಾಜರ ವಿರುದ್ದ ಹೋರಾಡಿದ ಬಹುಮನಿಗಳು ರೆಡ್ಡಿಗಳು ಒಟ್ಟಾಗಿ ೧೪೦೬ ರಲ್ಲಿ ವಿಜಯನಗರ ರಾಜ್ಯದ ಮೇಲೆ ಧಾಳಿ ಮಾಡಿದರು. ಈತನ ಕಾಲದಲ್ಲಿ ಕ್ರಿ.ಶ. ೧೪೦೮ರ ಹಾವೇರಿ ತಾಲೂಕಿನ ಸಂಗೂರಿನ ಶಾಸನದಲ್ಲಿ[೧೧೯] ಮಾದರಸ ಎಂಬಾತ ಕುಮಾರ ರಾಮನಾಥನ ಸ್ಮಾರಕ ನಿರ್ಮಾಣ ಮಾಡಿದ ವಿಚಾರ ಹಾಗೂ ಕ್ರಿ.ಶ. ೧೪೧೩ರ ಶಾಸನದಲ್ಲಿ ಮುದರಸನಿಂದ ಎಂಬಾತ ಕುಮಾರ ರಾಮನಾಥನ ದೇವರ ನಿರ್ಮಾಣ ಮಾಡಿದ ವಿಚಾರ ಹಾಗೂ ಕ್ರಿ.ಶ.೧೪೧೩ ರ ಶಾಸನದಲ್ಲಿ ಯುದ್ದದಲ್ಲಿ ಮಡಿದವೀರನ ವಂಶಸ್ಥರಿಗೆ ಭೂಮಿ ದಾನ ನೀಡಿದ ವಿಚಾರ ಹಾಗೂ ಇದೇ ತೇದಿಯ ಲಕ್ಷ್ಮೇಶ್ವರದ ಶಾಸನದಲ್ಲಿ ಅಲ್ಲಿನ ಶಂಖ ಜೀನಾಲಯ ಮತ್ತು ಸೋಮೇಶ್ವರ ದೇವಾಲಯದ ಆಡಳಿತಕ್ಕೆ ಸಂಬಂಧಪಟ್ಟವರಲ್ಲಿ ತಮಗೆ ಸೇರಿದ ಭೂಮಿಗೆ ಸಂಬಂಧಿಸಿದ ವಿವಾದ ಕಾಣಿಸಲು ಮಹಾಪ್ರಧಾನ ದಣ್ಣಾನಾಯಕ ಮತ್ತು ಅರಮನೆಯ ಪುರೋಹಿತ ಸಂಗಮ ದೇವರು ಶಂಖ ಜೀನಾಲಯದ ಅಪಹೃತವಾಗಿದ್ದ ಭೂಮಿಯನ್ನು ಅದಕ್ಕೆ ಮರಳಿಸಿದರು ಎಂದು ವಿಷಯದ

ಪ್ರಸ್ತಾಪವಿದೆ. ದೇವರಾಯನ ನಂತರ ಆತನ ಮಗನಾದ ರಾಮಚಂದ್ರ (೧೪೨೨-೨೪) ಇವನ ನಂತರ ತನ್ನ ತಂದೆ ವಿಜಯರಾಯನ ಕಾಲದಲ್ಲಿ ಆಡಳಿತದ ಬಾರ ಹೊತ್ತಿದ್ದ ಇಮ್ಮಡಿ ದೇವರಾಯನಿಗೆ (೧೪೨೪-೪೬) ಪಟ್ಟವಾಯಿತು ಸಂಗಮವಂಶದಲ್ಲಿ ಖ್ಯಾತನಾದ ಸಮರ್ಥ ದೊರೆಯಾಗಿದ್ದಾನೆ. ಹಿರೇಕೆರೂರು ತಾಲೂಕಿನ ಕಡೂರಿನ ಕ್ರಿಶ ೧೪೨೯ರ ಶಾಸನದಲ್ಲಿ[೧೨೦] ಆ ಪ್ರದೇಶವು ಚಂದ್ರಗುತ್ತಿಯಲ್ಲಿದ್ದ ಗೋಪಿನಾಥ ನಾಯಕನ ಆಡಳಿತಕ್ಕೆ ಒಳಪಟ್ಟಿತ್ತೆಂದು ಹೇಳುತ್ತಾ ನಾಗರಸ ಎಂಬ ವೀರನ ಸ್ಮಾರಕವಾಗಿ ಸ್ಥಾಪಿಸಿದ ವೀರಗಲ್ಲಿನ ಉಲ್ಲೇಖವಿದೆ. ಬ್ಯಾಡಗಿ ತಾಲೂಕಿನ ಕ್ರಿ.ಶ. ೧೪೪೧ ಶಾಸನದಲ್ಲಿ[೧೨೧] ಚಂದ್ರಗುತ್ತಿಯ ಅಧಿಕಾರಿ ಮಲ್ಲರಸ ಒಡೆಯನನ್ನು ಉಲ್ಲೇಖಿಸಿ ಬಾಚನಾಯಕ ಎಂಬಾತನ ಮೇಲೆ ಮಲ್ಲರಸನು ದಾಳಿ ಮಾಡಿದನೆಂದು ಹೇಳಿದೆ. ಈತನ ನಂತರ ಆಳಿದ ಅವನ ಮಗ ಮಲ್ಲಿಕಾರ್ಜುನ (೧೪೪೬-೬೫), ನಂತರ ವಿರೂಪಾಕ್ಷ (೧೪೬೫-೮೫), ಇವನ ಮಗ ಪ್ರೌಢದೇವರಾಯ (೧೪೮೫) ಪಟ್ಟಕ್ಕೆ ಬಂದರು. ಇವರುಗಳು ಅಸಮರ್ಥರಾದ್ದರಿಂದ ಈ ಸಂದರ್ಭವನ್ನು ಬಳಸಿಕೊಂಡ ಸಾಳ್ವನರಸಿಂಹನು ತನ್ನ ಸೇನಾನಿ ನರಸನಾಯಕನ್ನು ವಿಜಯನಗರಕ್ಕೆ ಸೈನ್ಯ ಸಮೇತ ಕಳುಹಿಸಿ ಕೆಲಕಾಲ ಆಳಿದ ಪ್ರೌಢದೇವರಾಯ ರಾಜಧಾನಿಯಿಂದ ಪಲಾಯನ ಮಾಡಲು ಸಾಳುವ ನರಸಿಂಹನು ರಾಜಗ್ರಹಣ ಮಾಡಿದನು (೧೪೮೫). ಹೀಗೆ ಹಾವೇರಿ ಜಿಲ್ಲೆಯ ಬಹುಭಾಗ ೧೫೦೦ ರವರೆಗೆ ಬಹುಮನಿಗಳ ವಶವಿದ್ದಿರಬೇಕು ವಿರೂಪಾಕ್ಷನ ಯಾವುದೇ ಶಾಸನಗಳು ಈ ಜಿಲ್ಲೆಯಲ್ಲಿ ಕಂಡುಬರುವುದಿಲ್ಲ ಈತನ ನಂತರ ಸಾಳ್ವ ನರಸಿಂಹ (೧೪೮೫-೮೯) ನಂತರ ಇವನ ಮಕ್ಕಳಾದ ತಿಮ್ಮ (೧೪೫೧) ಮತ್ತು ೩ನೇ ನರಸಿಂಹ (೧೪೧೧-೧೫೦೫) ಆಳಿದರು. ಇವನ ನಂತರ ತುಳುವ ಮನೆತನದ ವೀರನರಸಿಂಹನು (೧೫೦೫-೧೫೦೯), ನಂತರ ಕೃಷ್ಣದೇವರಾಯ (೧೫೦೯-೧೫೩೦) ಆಳಿದರು. ಇವನು ಈ ಸಾಮ್ರಾಜ್ಯದ ಸಮರ್ಥ ದೊರೆಯಾಗಿ ಪಟ್ಟಕ್ಕೆ ಬಂದ ಕೂಡಲೆ ಒರಿಸ್ಸಾದ ಗಣಪತಿಯನ್ನು ಸೋಲಿಸಿ ಆದಿಲ್‌ಖಾನನ್ನು ದೋಣಿ, ಕೊವಿಲ ಕೊಂಡಗಳಲ್ಲಿ ಸೋಲಿಸಿ ಈ ವಿಜಯದ ನಂತರ ಪಟ್ಟಾಭಿಷೇಕ ಮಾಡಿಕೊಂಡ ಬಗ್ಗೆ ಶಾಸನಗಳಲ್ಲಿ ಶಿಗ್ಗಾಂವ ತಾಲೂಕಿನ ಕಬನೂರಿನ ಶಾಸನದಲ್ಲಿ ೧೩೯ ಸ್ಥಳೀಯ ಪಾಳೆಗಾರನಾಗಿದ್ದ ಇಮ್ಮಡಿ ಎಲ್ಲಪ್ಪನಾಯಕ ಎಂಬಾತನು ವ್ಯಕ್ತಿಯೊಬ್ಬನಿಗೆ ಭೂದಾನ ನೀಡಿದ ಮಾಹಿತಿಯಿದೆ. ಬ್ಯಾಡಗಿ ತಾಲೂಕಿನ ಕಳಗೊಂಡ ಶಾಸನದಿಂದ ಬೊಳೆ ಮಲ್ಲರಸನ ಗುಡ್ಡದ ತಿರುಮಲ (ತಿರುಪತಿ) ದೇವಾಲಯಕ್ಕೆ ಗ್ರಾಮದಾನ ನೀಡಿದ ಉಲ್ಲೇಖವಿದೆ. ಇದರಿಂದಾಗಿ ಕೆಲವು ದಶಕಗಳ ನಂತರ ವಿಜಯನಗರವು ಹಾವೇರಿ ಜಿಲ್ಲೆಯಲ್ಲಿ ಮತ್ತೆ ಅಧಿಕಾರ ಪಡೆಯಿತೆಂಬುದು ಕೃಷ್ಣದೇವರಾಯನ ಅನೇಕ ಶಾಸನಗಳಿಂದ ತಿಳಿಯಬಹುದಾಗಿದೆ. ಈತನ ನಂತರ ಅವನ ಮಲ ಸಹೋದರ ಅಚ್ಯುತರಾಯನಿಗೆ (೧೫೨೯-೪೨) ಪಟ್ಟವಾಯಿತು. ಆದರೆ ಇವನಿಗೆ ಸಂಬಂಧಪಟ್ಟಂತೆ ಹಾವೇರಿ ಜಿಲ್ಲೆಯಲ್ಲಿ ಯಾವ ಶಾಸನವು ಲಭ್ಯವಿರುವುದಿಲ್ಲ. ಈತನ ನಂತರ ಸದಾಶಿವರಾಯನು ಕ್ರಿ.ಶ ೧೫೪೨ ರಲ್ಲಿ ಅಧಿಕಾರಕ್ಕೆ ಬಂದನು. ಆದರೆ ಈತ ನಾಮ

ಮಾತ್ರ ಅರಸನಾಗಿದ್ದು ಆಡಳಿತವೆಲ್ಲ ಕೃಷ್ಣದೇವರಾಯನ ಅಳಿಯ ರಾಮರಾಯನ ಕೈಯಲ್ಲಿತ್ತು. ಆಗ ದಖನ್‌ನಲ್ಲಿ ಬಹುಮನಿರಾಜ್ಯ ಒಡೆಯ ಹುಟ್ಟಿಕೊಂಡ ಐದು ಷಾಹಿ ರಾಜ್ಯಗಳ ಒಳಜಗಳಗಳಿಂದ ಲಾಭ ಪಡೆದ ಇವನು ರಾಜ್ಯವನ್ನು ಕೃಷ್ಣೆಯಿಂದ ಆಚೆಗೆ ವಿಸ್ತರಿಸಿದನು. ಆದರೆ ೧೫೫೬ರ ರಕ್ಕಸತಂಗಡಿಯ ಯುದ್ದದಲ್ಲಿ ವಿಜಯನಗರ ಸೋತಿತು. ಯುದ್ದದಲ್ಲಿ ಅಳಿಯ ರಾಮರಾಯ ಮೃತನಾದ ನಂತರ ಸದಾಶಿವರಾಯ ಪೆನುಗೊಂಡೆಯ ಕಡೆಗೆ ಪಲಾಯನ ಮಾಡಿದ ಈತನ ಶಾಸನಗಳು ಹಾವೇರಿ ಜಿಲ್ಲೆಯಲ್ಲಿ ಕೆಲವು ಮಾತ್ರ ಕಂಡುಬಂದಿವೆ. ಅವುಗಳನ್ನು ಗುತ್ತಲರಾಣಿ ಬೆನ್ನೂರ ಪ್ರದೇಶಗಳಲ್ಲಿ ಕಾಣಬಹುದು.

ಕ್ರಿ.ಶ. ೧೫೪೪ ರ ಗುತ್ತಲದ ಶಾಸನದಲ್ಲಿ[೧೨] ನಾವಿಂದನಿಗೆ ನೀಡಿದ ಸುಂಕದಾನ ಮತ್ತು ಗುತ್ತಲದ ದೇಸಾಯಿ ಹನುಮಂತಗೌಡನ ಗೌಡತಿಯ ಮನ್ಯರ ಹೊಲದ ಸೀಮೆಯ ವಿಷಯವಿದೆ ಹಾಗೂ ಕ್ರಿ.ಶ. ೧೫೫೬ರ ರಾಣಿಬೆನ್ನೂರ ತಾಲೂಕಿನ ಶಾಸನದಲ್ಲಿ[೧೩] ತಿಮ್ಮೋಜ, ಕೊಂಡೋಜ ಹಾಗೂ ಭದ್ರೋಜರಿಗೆ ಸುಂಕ ಮತ್ತು ದಾನದ ಉಲ್ಲೇಖವಿದೆ.

ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಹಾವೇರಿ ಜಿಲ್ಲೆಯಲ್ಲಿ ರಾಜಕೀಯವಾಗಿ ಪೂರ್ವ ಇತಿಹಾಸ ಕಾಲದಿಂದ ವಿಜಯನಗರದವರೆಗೆ ತಮ್ಮದೆ ಆದ ಆಳ್ವಿಕೆಯನ್ನು ರಾಜ ಮಹಾರಾಜರುಗಳು ನಡೆಸಿ ಚಾರಿತ್ರಿಕವಾಗಿ ತಮ್ಮದೇ ಆದ ಛಾಪನ್ನು ಮೂಡಿಸಿದ್ದಾರೆ ಇವರಲ್ಲದೆ ಬಹುಮನಿ ಸುಲ್ತಾನರು, ಬಿಜಾಪುರದ ಆದಿಲ್‌ಶಾಹಿಗಳು, ಕೆಳದಿ ವಂಶಸ್ಥರು, ಮರಾಠರು, ಸವಣನೂರು, ನವಾಬರು, ಹೈದರಾಲಿ ಮತ್ತು ಟಿಪ್ಪುಸುಲ್ತಾನ್‌ರು ಈ ಜಿಲ್ಲೆಯಲ್ಲಿ ಆಡಳಿತ ನಡೆಸಿದ್ದಾರೆ. ಆದ್ದರಿಂದ ಅಧ್ಯಯನದ ವ್ಯಾಪ್ತಿಯನ್ನು ಆರಂಭದಿಂದ ವಿಜಯನಗರದ ಅರಸರ ಕಾಲದವರೆಗೆ ಸೀಮಿತಗೊಳಿಸಲಾಗಿದೆ.

## ವಿಜಯನಗರ ಅರಸರು

### ೧. ಸಂಗಮ ವಂಶವಾಹಿನಿ

ಸಂಗಮ

- ೧ನೇಯ ಹರಿಹರ (ಕ್ರಿ.ಶ. ೧೩೩೬ – ೧೩೫೬)
- ೧ನೇಯ ಬುಕ್ಕ (ಕ್ರಿ.ಶ. ೧೩೫೬ – ೧೩೭೭)
- ಮಾರಪ್ಪ
- ಮುದ್ದಪ್ಪ

೧ನೇಯ ಬುಕ್ಕ →

- ಎರಡನೆಯ ಹರಿಹರ (ಕ್ರಿ.ಶ. ೧೩೭೭–೧೪೦೪)
- ಎರಡನೆಯ ಕಂಪಣ
- ಮೊದಲನೆ ವಿರೂಪಾಕ್ಷ
- ಭಾಸ್ಕರ

ಎರಡನೆಯ ಹರಿಹರ →

- ೨ನೆಯ ಬುಕ್ಕ (ಕ್ರಿ.ಶ. ೧೪೦೪–೧೪೦೬)
- ೨ನೆಯ ವಿರೂಪಾಕ್ಷ (ಕ್ರಿ.ಶ. ೧೪೦೪–೧೪೦೬)
- ೧ನೆಯ ದೇವರಾಯ (ಕ್ರಿ.ಶ. ೧೪೦೪–೧೪೨೨)
- ಚಕ್ಕರಾಯ

೨ನೆಯ ವಿರೂಪಾಕ್ಷ →

- ವೀರ ವಿಜಯ
- ವೀರಮಲ್ಲಪ್ಪ
- ಮುಮ್ಮಡಿ ಹರಿಹರ
- ರಾಮಚಂದ್ರ

ವೀರ ವಿಜಯ → ವಿಜಯ ಭೂಪತಿ

ವಿಜಯ ಭೂಪತಿ → ಮುಮ್ಮಡಿ ವಿಜಯಬುಕ್ಕ (ಕ್ರಿ.ಶ. ೧೪೨೨ – ೧೪೨೪)

ಮುಮ್ಮಡಿ ವಿಜಯಬುಕ್ಕ →

- ಇಮ್ಮಡಿ ದೇವರಾಯ (ಪ್ರೌಢದೇವರಾಯ) (ಅಭಿನವದೇವರಾಯ) (ಕ್ರಿ.ಶ. ೧೪೨೪ – ೧೪೪೬)
- ಪ್ರತಾಪ ದೇವ (ಇಮ್ಮಡಿ ವಿಜಯರಾಯ)

ಇಮ್ಮಡಿ ದೇವರಾಯ →

- ಮಲ್ಲಿಕಾರ್ಜುನ ದೇವರಾಯ (ಕ್ರಿ.ಶ. ೧೪೪೬ – ೧೪೬೫) ರಾಜಶೇಖರ
- ಮುಮ್ಮಡಿ ವಿರೂಪಾಕ್ಷ (ಕ್ರಿ.ಶ. ೧೪೬೫ – ೧೪೮೫) ಪ್ರೌಢದೇವರಾಯ

## ೨. ಸಾಳುವ ವಂಶ

ಗೌಂಡ

೧ನೇಯ ನರಸಿಂಹ (ಕ್ರಿ.ಶ. ೧೪೮೫ – ೧೪೯೧)




## ೩. ತುಳುವ ವಂಶ

ಕುಶವರ ನಾಯಕ

ನರಸ ನಾಯಕ



**ಟಿಪ್ಪಣಿಗಳು:**

೧. ನಾಯಕ ಹಾ.ಮಾ. (ಸಂ.), ೨೦೦೫, ಕನ್ನಡ ವಿಷಯ ವಿಶ್ವಕೋಶ, ಪ್ರಸಾರಾಂಗ, ಮೈ.ವಿ.ವಿ., ಮೈಸೂರು, ಪುಟ. ೧೩೩೩.

೨. ಲಿಂಗರಾಜು ಕಮ್ಮಾರ (ಸಂ.), ಗಿರಿಜಾ ದುರ್ಗನಮಠ, ೨೦೦೭, 'ಹೆಬ್ಬಾಗಿಲು' ಹಾವೇರಿ ಜಿಲ್ಲಾ ಉತ್ಸವ, ಹಾವೇರಿ.

೩. ಸೂರ್ಯನಾಥ ಕಾಮತ್ ಯು., ೧೯೮೬, ಧಾರವಾಡ ಜಿಲ್ಲೆ, ಗ್ಯಾಸೆಟಿಯರ್ಸ್, ಬೆಂಗಳೂರು, ಪುಟ. ೫೨.

೪. ಶಿವತಾರಕ್. ಕೆ.ಬಿ., ೨೦೦೧, ಕರ್ನಾಟಕದ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕ.ವಿ.ವಿ., ಹಂಪಿ, ಪು. ೬೨೯-೪೮.

೫. ಅದೇ ಪುಟ, ೬೨೯-೬೪೮.

೬. ಅದೇ ಪುಟ, ೬೨೯-೬೪೮.

೭. ಅದೇ ಪುಟ, ೬೨೯-೬೪೯.

೮. ಕಲವೀರ್ ಮನ್ವಚಾರ್, ೨೦೦೩, ಡೆಕ್ಕನ್ ಹೆರಾಲ್ಡ್, ನ್ಯೂಸ್ ಪೇಪರ್.

೯. ಶಿವತಾರಕ್ ಕೆ.ಬಿ., ೨೦೦೧, ಕ.ಪು.ವಿ., ಪ್ರ.ಕ.ವಿ.ನೆ., ಹಂಪಿ, ಪುಟ. ೬೨೯-೪೮.

೧೦. ದಿವಾಕರ್ ಆರ್.ಆರ್., ೧೯೭೨, ಕರ್ನಾಟಕದ ಪರಂಪರೆ, ಸಂ – ೧, ಬೆಂಗಳೂರು, ಪುಟ. ೧೩೨-೧೩೬.

೧೧. ಶ್ರೀನಿವಾಸ ಪಾಡಿಗಾರ, ೧೯೮೧, ಭಾರತೀಯ ಶಾಸನ ಆಕರಗಳು, ಧಾರವಾಡ, ಪುಟ. ೪.

೧೨. ಸೂರ್ಯನಾಥ ಕಾಮತ್, ೧೯೮೬, ಧಾರವಾಡ ಜಿಲ್ಲಾ ಗ್ಯಾಸೆಟಿಯರ್ಸ್, ಬೆಂಗಳೂರು, ಪುಟ. ೫೫.

೧೩. ದಿವಾಕರ ಆರ್.ಆರ್., ೧೯೯೨, ಕರ್ನಾಟಕದ ಪರಂಪರೆ, ಸಂ. – ೧, ಬೆಂಗಳೂರು, ಪುಟ. ೨೩೭-೨೫೬.

೧೪. ಸೂರ್ಯನಾಥ ಕಾಮತ್, ೧೯೮೬, ಧಾರವಾಡ ಜಿಲ್ಲಾ ಗ್ಯಾಸೆಟಿಯರ್ಸ್, ಬೆಂಗಳೂರು, ಪುಟ. ೫೫.

೧೫. ಎಫ್.ಇಂ. ಸಂ. XXXII, ಪುಟ. ೩೧೭-೨೪.

೧೬. ಸೂರ್ಯನಾಥ ಕಾಮತ್, ೧೯೮೬, ಧಾರವಾಡ ಜಿಲ್ಲಾ ಗ್ಯಾಸೆಟಿಯರ್ಸ್, ಬೆಂಗಳೂರು, ಪುಟ. ೫೭.

೧೭. ಎಫ್.ಇಂ. ಸಂ. XXXII, ಪುಟ. ೩೧೭-೨೪.

೧೮. ಸೂರ್ಯನಾಥ ಕಾಮತ್, ೧೯೯೯, ಕರ್ನಾಟಕ ಸಂಕ್ಷಿಪ್ತ ಚರಿತ್ರೆ, ಬೆಂಗಳೂರು, ಪುಟ. ೭೫.

೧೯. ತಿಪ್ಪೇರುದ್ರಸ್ವಾಮಿ ಹೆಚ್., ೨೦೧೦, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಬೆಂಗಳೂರು, ಪುಟ. ೧೧೦-೧೨.

೨೦. ಸೂರ್ಯನಾಥ ಕಾಮತ್, ೧೯೮೬, ಧಾರವಾಡ ಜಿಲ್ಲಾ ಗ್ಯಾಸಟಿಯರ್, ಬೆಂಗಳೂರು, ಪುಟ. ೬೦.

೨೧. ನಾಯಕ ಹಾ.ಮಾ. (ಸಂ.), ೨೦೦೫, ಕ.ವಿ.ವಿ.ಕೋ., ಪ್ರ., ಮೈಸೂರು ವಿ.ವಿ., ಮೈಸೂರು, ಪುಟ. ೮೩೫.

೨೨. ಎಫ್.ಇಂ. ಸಂ. XXXII, ಪುಟ. ೩೧೭-೨೪.

೨೩. ನಾಯಕ ಹಾ.ಮಾ. (ಸಂ.), ೨೦೦೭, ಕ.ವಿ.ವಿ. ಪ್ರ, ಮೈ.ವಿ.ವಿ., ಮೈ, ಪುಟ. ೮೩೫.

೨೪. ಅದೇ, ಪುಟ. ೮೩೬.

೨೫. ಅದೇ, ಪುಟ. ೮೩೬.

೨೬. ಕೆ.ಆರ್.ಐ. ಪಿಆರ್. ೬೬, ೧೯೫೩.

೨೭. ತಿಪ್ಪೇರುದ್ರಸ್ವಾಮಿ ಹೆಚ್., ೨೦೧೦, ಕ.ಸಂ.ಸ. ಮೈಸೂರು, ಪುಟ. ೧೧೮.

೨೮. ಧಾ.ಜಿ.ಶಾ.ಸೂ. ಶಾ.ಸಂ. ೬೬, ಪುಟ. ೨೯.

೨೯. ಕ.ಇ.ಸಂ.ಸಂ. II, ಪು-೫.

೩೦. ಕೆ.ಆರ್.ಐ.ಪಿ.ಆರ್. ೧೯೫೩-೫೭, ಪುಟ. ೭೨.

೩೧. ಎಫ್.ಇಂ. ಸಂ. VII, ಪುಟ. ೨೦೧.

೩೨. ಕ.ಇ.ಸಂ.I,೧೩, ಕ.ಇ.ಸಂ.VII ಪುಟ. ೨೦೧.

೩೩. ಧಾ.ಜಿ.ಶಾ.ಸೂ.ಶಾ.ಸಂ. ೨೬, ಪುಟ. ೨೮.

೩೪. ಕ.ಇ.ಸಂ.VI ಪಡ. ೩.

೩೫. ಧಾ.ಜಿ.ಶಾ.ಸೂ., ಶಾ.ಸಂ. ೯೫, ಪುಟ. ೫೭.

೩೬. ಎಸ್.ಐ.ಐ.ಸಂ. XVIII, ಪುಟ ೧೯.

೩೭. ಧಾ.ಜಿ.ಶಾ.ಸೂ.,ಶಾ.ಸಂ. ೮೦. ಪುಟ. ೫೭.

೩೮. ಎಸ್.ಐ.ಐ.ಸಂ. XII, ಪುಟ ೨೨೪.

೩೯. ಧಾ.ಜಿ.ಶಾ.ಸೂ.,ಶಾ.ಸಂ.೨೫, ಪುಟ. ೭೧.

೪೦. ನಾಯಕ ಹಾ.ಮಾ. (ಸಂ.), ೨೦೦೫, ಕ.ವಿ.ವಿ. ಪ್ರ, ಮೈ.ವಿ.ವಿ., ಮೈ, ಪುಟ. ೫೭೫.

೪೧. ಅದೇ ಪುಟ, ೫೭೫.

೪೨. ಎಫಿ.ಇಂ. ಸಂ. ೩೩, ಪುಟ. ೧೩೧-೩೩.

೪೩. ಧಾ.ಜಿ.ಶಾ.ಸೂ.,ಶಾ.ಸಂ. ೬೭, ಪುಟ. ೭೨.

೪೪. ಧಾ.ಜಿ.ಶಾ.ಸೂ.,ಶಾ.ಸಂ. ೩೬, ಪುಟ. ೫೧.

೪೫. ದಿವಾಕರ್ ಆರ್.ಆರ್., ೨೦೦೬, ಕರ್ನಾಟಕ ಪರಂಪರೆ, ಸಂ. ೧, ಬೆಂಗಳೂರು, ಪುಟ. ೩೨೭.

೪೬. ಕ.ಇ.ಸಂ. IV ಪುಟ ೪೦.

೪೭. ಕ.ಇ.ಸಂ. VI ಪುಟ ೮.

೪೮. ಧಾ.ಜಿ.ಶಾ.ಸೂ.,ಶಾ.ಸಂ. ೪೬, ಪುಟ. ೭೧.

೪೯. ಧಾ.ಜಿ.ಶಾ.ಸೂ.,ಶಾ.ಸಂ. ೧೬೩, ಪುಟ. ೭೫.

೫೦. ಕ.ಇ.ಸಂ. VI ೨೬, ಕೆ.ಆರ್.ಐ.ಪಿ.ಆರ್., ೧೯೪೭, ಪುಟ ೨೩.

೫೧. ಧಾ.ಜಿ.ಶಾ.ಸೂ.,ಶಾ.ಸಂ.೩೪, ಪುಟ. ೨೮.

೫೨. ನಾಗಯ್ಯ ಜಿ.ಎಂ., ೧೯೯೨, ಕಲಕೇರಿ, ಸಿ. ಬಸವೇಶ್ವರ ಜೀರ್ಣೋದ್ಧಾರ ಟ್ರಸ್ಟ್, ಕಲಕೇರಿ, ಹಾನಗಲ್ಲು ತಾಲ್ಲೂಕು, ಹಾವೇರಿ ಜಿ. ಪುಟ. ೩೧.

೫೩. ಕ.ಇ.ಸಂ. V ೮, ಎಫಿ.ಇಂ. XVI, ೩೩೮, ಕ.ಇ.ಸಂ. II ೮.

೫೪. ಕ.ಇ.ಸಂ.VI ೧೨.

೫೫. ಎಫಿ.ಇಂ. XVI, ಪುಟ ೬೮–೭೩.

೫೬. ಎಫಿ.ಇಂ. XIX, ಪುಟ ೧೮೩–೮೭.

೫೭. ಕ.ಇ.ಸಂ. I ಪುಟ ೧೭.

೫೮. ಕೆ.ಐ.ಸಂ. IV ಪುಟ ೩೩.

೫೯. ಧಾ.ಜಿ.ಶಾ.ಸೂ.,ಶಾ.ಸಂ.೧೦೨, ಪುಟ. ೭೩.

೬೦. ಧಾ.ಜಿ.ಶಾ.ಸೂ.,ಶಾ.ಸಂ.೧೫೪, ಪುಟ. ೭೫.

೬೧. ಧಾ.ಜಿ.ಶಾ.ಸೂ.,ಶಾ.ಸಂ.೬೦, ಪುಟ. ೫೨.

೬೨. ಎಫಿ.ಇ.ಸಂ.V, ಪುಟ. ೨೧೩–೩೧.

೬೩. ಧಾ.ಜಿ.ಶಾ.ಸೂ.,ಶಾ.ಸಂ.೯೩, ಪುಟ. ೬೧.

೬೪. ಧಾ.ಜಿ.ಶಾ.ಸೂ.,ಶಾ.ಸಂ.೧೫೫, ಪುಟ. ೪೮.

೬೫. ಧಾ.ಜಿ.ಶಾ.ಸೂ.,ಶಾ.ಸಂ.೧೩೮, ಪುಟ. ೪೭.

೬೬. ಎಸ್.ಎ.ಐ.ಐ.ಸಂ. XX. ಪುಟ ೭೬.

೬೭. ಕ.ಇ.ಸಂ.V. ಪುಟ ೧೭.

೬೮. ಧಾ.ಜಿ.ಶಾ.ಸೂ.,ಶಾ.ಸಂ.೩೨೩, ಪುಟ. ೬೯.

೬೯. ಕ.ಇ.ಸಂ.VI. ಪುಟ. ೨೦.

೭೦. ಧಾ.ಜಿ.ಶಾ.ಸೂ.,ಶಾ.ಸಂ.೬೪, ಪುಟ. ೨೯.

೭೧. ಕ.ಇ.ಸಂ.IV. ಪುಟ. ೫೩.

೭೨. ಧಾ.ಜಿ.ಶಾ.ಸೂ.,ಶಾ.ಸಂ.೧೫೯, ಪುಟ. ೩೨.

೭೩. ಕ.ಇ.ಸಂ.VI. ಪುಟ. ೨೭.

೭೪. ಧಾ.ಜಿ.ಶಾ.ಸೂ.,ಶಾ.ಸಂ.೮೬, ಪುಟ. ೫೭.

೭೫. ಧಾ.ಜಿ.ಶಾ.ಸೂ.,ಶಾ.ಸಂ.೧೮೨, ಪುಟ. ೬೪.

೭೬. ಧಾ.ಜಿ.ಶಾ.ಸೂ.,ಶಾ.ಸಂ.೨೫೮, ಪುಟ. ೬೭.

೭೭. ಕನ್ನಡ ವಿಷಯ ವಿಶ್ವಕೋಶ, ೨೦೦೫, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಪುಟ. ೫೭೮.

೭೮. ಅದೇ, ಪುಟ. ೨೯೨.

೭೯. ಅದೇ, ಪುಟ. ೫೯೨.

೮೦. ಸೂರ್ಯನಾಥ ಕಾಮತ್, ೧೯೮೬, ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ಪುಟ. ೭೨.

೮೧. ಕ.ಇ.ಸಂ.IV. ಪುಟ. ೧೫.

೮೨. ಧಾ.ಜಿ.ಶಾ.ಸೂ.,ಶಾ.ಸಂ.೨೦, ಪುಟ. ೫೦.

೮೩. ಕ.ಇ.ಸಂ.IV. ಪುಟ. ೧೪.

೮೪. ಎಫಿ.ಇ.ಸಂ.XXIX, ಪುಟ. ೧೪೨.

೮೫. ಧಾ.ಜಿ.ಶಾ.ಸೂ.,ಶಾ.ಸಂ.೨೩೨, ಪುಟ. ೬೬.

೮೬. ಸೂರ್ಯನಾಥ ಕಾಮತ್, ೧೯೮೬, ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ಬೆಂಗಳೂರು, ಪುಟ. ೬೪.

೮೭. ಕ.ಇ.ಸಂ.VI. ಪುಟ. ೩೯.

೮೮. ಎಸ್.ಐ.ಐ.ಸಂ.XX. ಪುಟ. ೧೬೯.

೮೯. ಸೂರ್ಯನಾಥ ಕಾಮತ್, ೧೯೮೬, ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ಬೆಂಗಳೂರು, ಪುಟ. ೭೪.

೯೦. ಧಾ.ಜಿ.ಶಾ.ಸೂ.,ಶಾ.ಸಂ.೧೮೧, ಪುಟ. ೬೪.

೯೧. ಧಾ.ಜಿ.ಶಾ.ಸೂ.,ಶಾ.ಸಂ.೨೩೦, ಪುಟ. ೬೬.

೯೨. ಕ.ಇ.ಸಂ.V. ಪುಟ. ೧೯, ಕ.ಕ. ಪುಟ. ೪೩೮–೪೦.

೯೩. ಧಾ.ಜಿ.ಶಾ.ಸೂ.,ಶಾ.ಸಂ.೧೪೦, ಪುಟ. ೬೨.

೯೪. ಸೂರ್ಯನಾಥ ಕಾಮತ್, ೧೯೮೬, ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ಬೆಂಗಳೂರು, ಪುಟ. ೭೬.

೯೫. ಅದೇ, ಪುಟ. ೭೬.

೯೬. ಕ.ಇ.ಸಂ.VI. ಪುಟ ೩೯.

೯೭. ಕ.ಇ.ಸಂ.IV. ಪುಟ ೨.

೯೮. ಕ.ಇ.ಸಂ.VI. ಪುಟ ೩೧.

೯೯. ಕ.ಇ.ಸಂ.VI. ಪುಟ ೭.

೧೦೦. ಕ.ಇ.ಸಂ.VI. ಪುಟ ೪೪.

೧೦೧. ಸೂರ್ಯನಾಥ ಕಾಮತ್, ೧೯೮೬, ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ಬೆಂಗಳೂರು, ಪುಟ. ೮೨.

೧೦೨. ಕ.ಇ.ಸಂ.IV. ಪುಟ ೨.

೧೦೩. ಧಾ.ಜಿ.ಶಾ.ಸೂ.,ಶಾ.ಸಂ.೧೬೭, ಪುಟ. ೭೬.

೧೦೪. ಧಾ.ಜಿ.ಶಾ.ಸೂ.,ಶಾ.ಸಂ.೧೦೩, ಪುಟ. ೫೩.

೧೦೫. ಧಾ.ಜಿ.ಶಾ.ಸೂ.,ಶಾ.ಸಂ.೧೨, ಪುಟ. ೫೫.

೧೦೬. ಧಾ.ಜಿ.ಶಾ.ಸೂ.,ಶಾ.ಸಂ.೫೨, ಪುಟ. ೬೦.

೧೦೭. ಧಾ.ಜಿ.ಶಾ.ಸೂ.,ಶಾ.ಸಂ.೭೪, ಪುಟ. ೨೯.

೧೦೮. ಧಾ.ಜಿ.ಶಾ.ಸೂ.,ಶಾ.ಸಂ.೪೦, ಪುಟ. ೪೪.

೧೦೯. ಧಾ.ಜಿ.ಶಾ.ಸೂ.,ಶಾ.ಸಂ.೫೦, ಪುಟ. ೫೬.

೧೧೦. ಸಿ.ಎಂ, ಪುಟ. ೧೧೩-೧೪.

೧೧೧. ಕನ್ನಡ ವಿಷಯ ವಿಶ್ವಕೋಶ, ೨೦೦೫, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಪುಟ. ೧೧೪೧-೪೨.

೧೧೨. ಧಾ.ಜಿ.ಶಾ.ಸೂ.,ಶಾ.ಸಂ.೪೮, ಪುಟ. ೫೬.

೧೧೩. ಕ.ಇ.ಸಂ.IV. ಪುಟ ೧.

೧೧೪. ಕನ್ನಡ ವಿಷಯ ವಿಶ್ವಕೋಶ, ೨೦೦೯, ಇತಿಹಾಸ ಮತ್ತು ಪುರಾತತ್ವ ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಪುಟ. ೯೬೦.

೧೧೫. ಎಫಿ.ಕ.ಸಂ.II.ಎಸ್.ಜಿ. ಪುಟ ೧.

೧೧೬. ಧಾ.ಜಿ.ಶಾ.ಸೂ.,ಶಾ.ಸಂ.೨೦, ಪುಟ. ೭೧.

೧೧೭. ಸೂರ್ಯನಾಥ ಕಾಮತ್, ೧೯೮೬, ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ಬೆಂಗಳೂರು, ಪುಟ. ೯೦.

೧೧೮. ಅದೇ, ಪುಟ. ೯೦

೧೧೯. ಧಾ.ಜಿ.ಶಾ.ಸೂ.,ಶಾ.ಸಂ.೧೨೯, ಪುಟ. ೪೭.

೧೨೦. ಕ.ಇ.ಸಂ.VI. ಪುಟ ೬೬.

೧೨೧. ಧಾ.ಜಿ.ಶಾ.ಸೂ.,ಶಾ.ಸಂ.೩೧, ಪುಟ. ೫೧.

೧೨೨. ಧಾ.ಜಿ.ಶಾ.ಸೂ.,ಶಾ.ಸಂ.೬೬, ಪುಟ. ೪೫.

೧೨೩. ಧಾ.ಜಿ.ಶಾ.ಸೂ.,ಶಾ.ಸಂ.೭೦, ಪುಟ. ೫೬.

# ಅಧ್ಯಾಯ – ೨

## ಆಡಳಿತ ವ್ಯವಸ್ಥೆ

- ರಾಜ
- ರಾಣಿಯರು
- ಮಂತ್ರಿಮಂಡಲ
- ಇತರ ಅಧಿಕಾರಿ ವರ್ಗ
- ಸೈನ್ಯಾಡಳಿತ
- ಪ್ರಾಂತ್ಯಾಡಳಿತ
- ಗ್ರಾಮಾಡಳಿತ
- ನ್ಯಾಯಾಂಗ ವ್ಯವಸ್ಥೆ

# ಆಡಳಿತ ವ್ಯವಸ್ಥೆ

ವಿಶಾಲವಾದ ಯಾವುದೇ ಸಾಮ್ರಾಜ್ಯವನ್ನು ಆಡಳಿತದ ಅನುಕೂಲಕ್ಕಾಗಿ ಚಿಕ್ಕ ಚಿಕ್ಕ ಘಟಕಗಳಾಗಿ ವಿಭಾಗಿಸಿ ಅಭ್ಯಸಿಸುವುದನ್ನು ಪ್ರಾಚೀನ ಕಾಲದ ಕನ್ನಡ ನಾಡಿನ ರಾಜಕೀಯ ಚರಿತ್ರೆಯಲ್ಲಿ ಕಾಣುತ್ತೇವೆ. ಇದರನ್ವಯ ಕರ್ನಾಟಕದ ಆಡಳಿತ ಪರಂಪರೆಯ ಇತಿಹಾಸದಲ್ಲಿ ವಿಶಾಲವಾದ ಕುಂತಲ ಸಾಮ್ರಾಜ್ಯವನ್ನು ಮೊದಲು ಮಂಡಲ ಅಥವಾ ವಿಷಯಗಳಲ್ಲಿಯೂ, ನಾಡು ಇಲ್ಲವೇ ಕಂಪಣಗಳಾಗಿ ವಿಭಾಗಿಸಿರುವುದು ಪ್ರಧಾನ ವಿಷಯವಾಗಿದೆ.

ಒಂದು ದೇಶದ, ರಾಜ್ಯದ, ಗ್ರಾಮದ ಆಡಳಿತವು ಸುಸೂತ್ರವಾಗಿ ನಡೆಯಬೇಕಾದರೆ ಅದಕ್ಕೆ ಪೂರಕವಾದ ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗದ ಅವಶ್ಯಕತೆಯಿದೆ. ಅದರಲ್ಲಿ ರಾಜ್ಯಾಂಗದ ಪ್ರಮುಖ ಭಾಗವಾದ ಕಾರ್ಯಾಂಗದ ಬಗ್ಗೆ ಪ್ರಾಚೀನ ಕಾಲದಲ್ಲಿನ ಹಲವಾರು ಶಾಸನಗಳಲ್ಲಿ ಉಲ್ಲೇಖವಿದೆ. ಅವು ರಾಜ್ಯದ ಆಡಳಿತವನ್ನು ಮತ್ತು ವಿಭಿನ್ನ ಅಧಿಕಾರಿ ವರ್ಗಗಳನ್ನು ಕುರಿತು ವಿವರ ನೀಡುತ್ತದೆ. ಈ ವಿವರಗಳ ಜೊತೆಯಲ್ಲಿಯೇ ಅವರು ನಿರ್ವಹಿಸುತ್ತಿದ್ದ ಕಾರ್ಯ ವೈಖರಿಯನ್ನು ಕುರಿತಂತೆ ಮಾಹಿತಿಗಳು ದೊರೆಯುತ್ತವೆ. ಒಟ್ಟಾರೆಯಾಗಿ ಆಡಳಿತದ ಪ್ರಮುಖ ಭಾಗವಾಗಿ ರಾಜರು, ರಾಣಿಯರು, ಮಂತ್ರಿ, ಮಹಾಮಂಡಳೇಶ್ವರರು, ದಂಡನಾಯಕ, ಸಾಮಾಂತಾಧಿಕಾರಿ, ಸೈನ್ಯಾಧಿಕಾರಿ, ಕಂದಾಯಾಧಿಕಾರಿ, ಪ್ರಾಂತ್ಯಾಡಳಿತ, ಗ್ರಾಮಾಡಳಿತ, ನ್ಯಾಯಾಡಳಿತ, ಇನ್ನಿತರ ಅಧಿಕಾರಿಗಳು ಆಡಳಿತದ ಅವಿಭಾಜ್ಯ ಅಂಗಗಳಾಗಿ ಕಾರ್ಯನಿರ್ವಹಿಸಿದ್ದರು. ಹೀಗೆ ಎಲ್ಲಾ ಆಧಿಕಾರಿ ವರ್ಗದವರು ತಮ್ಮದೇ ಆದ ರೀತಿಯಲ್ಲಿ ಆಡಳಿತದಲ್ಲಿ ಭಾಗಿಯಾಗಿ ಉತ್ತಮ ರೀತಿಯ ಬೆಳವಣಿಗೆಗೆ ಸಹಕಾರಿಯಾಗಿದ್ದಾರೆ.[೧]

ಕರ್ನಾಟಕದಲ್ಲಿ ಆಡಳಿತ ವ್ಯವಸ್ಥೆಯ ಇತಿಹಾಸವು ಕ್ರಿ.ಪೂ. ೩-೪ನೇ ಶತಮಾನಗಳ ಹೊತ್ತಿಗೆ ಪ್ರಾರಂಭವಾಯಿತೆಂದು ಹೇಳಬಹುದು. ಭಾರತದ ಪ್ರಾಚೀನ ಶಾಸ್ತ್ರಜ್ಞರು, ಅರ್ಥಶಾಸ್ತ್ರ, ಮಹಾಭಾರತ, ಮನುಸ್ಮೃತಿಯಂತಹ ಗ್ರಂಥಗಳಲ್ಲಿ ನಿರೂಪಿಸಿದ ತತ್ವ ಹಾಗೂ ಸಿದ್ಧಾಂತಗಳೇ ಕರ್ನಾಟಕದಲ್ಲಿ ರೂಪುಗೊಂಡಿದ್ದ ರಾಜಕೀಯ ಸಂಸ್ಥೆಗಳಿಗೆ ಮತ್ತು ಸರ್ಕಾರಗಳಿಗೆ ಆಧಾರ ಸ್ತಂಭಗಳಾಗಿದ್ದವು.[೨]

ಇತ್ತೀಚಿನ ದಿನಗಳಲ್ಲಿ ಪ್ರಜಾಪ್ರಭುತ್ವ ಸಿದ್ಧಾಂತ ಪಸರಿಸುವವರೆಗೂ ಸರ್ಕಾರಕ್ಕೆ ಸಂಬಂಧಿಸಿದಂತೆ ಈ ದೇಶದಲ್ಲಿದ್ದುದು ಏಕರಾಜ ಪ್ರಭುತ್ವ ಅಂದರೆ ರಾಜನೇ ದೇಶದ ಸಾರ್ವಭೌಮ. ಆದರೆ ಭಾರತೀಯ ಪರಂಪರೆಯಲ್ಲಿ ರಾಜನು ನಿರಂಕುಶ ಪ್ರಭುಗಳಾಗಲು

ಸಾಧ್ಯವಾಗುತ್ತಿರಲಿಲ್ಲ. ರಾಜರಾಗಲೀ ಇತರೆ ಯಾರೇ ವ್ಯಕ್ತಿಗಳಾಗಲಿ, ಧರ್ಮದ ಚೌಕಟ್ಟಿನಲ್ಲಷ್ಟೇ ತಮ್ಮ ಅಧಿಕಾರವನ್ನು ಚಲಾಯಿಸುವ ಹಕ್ಕಿರುತ್ತಿತ್ತು. ಶೃತಿ ಮತ್ತು ಸ್ಮೃತಿಗಳಲ್ಲಿ ಉಕ್ತವಾದ ಧರ್ಮರೀತಿಗಳು ಮತ್ತು ಅನೂಚನವಾಗಿ ನಡೆದು ಬರುತ್ತಿದ್ದ ಪದ್ಧತಿಗಳು ರಾಜನನ್ನು ಒಳಗೊಂಡಂತೆ ಎಲ್ಲರ ವ್ಯವಹಾರಗಳ ನಿರ್ದೇಶಕ ಸೂತ್ರಗಳಾಗಿದ್ದವು. ಅಂದರೆ ರಾಜ ದೇವರಿಗೆ ಸಮಾನ ಅಥವಾ ದೈವಾಂಶ ಸಂಭೂತನೆಂದು ನಂಬಿಕೆಯಿದ್ದು, ಅವನು ಧರ್ಮಭ್ರಷ್ಟ ಅಥವಾ ನೀತಿಭ್ರಷ್ಟನಾದಾಗ ಅವನ ಪಾವಿತ್ರ್ಯಗಳಿಗೆ ಕುಂದು ಬರುತಿತ್ತು. ರಾಜತ್ವ ಸಾಮಾನ್ಯವಾಗಿ ವಂಶಪಾರಂಪರ್ಯವಾಗಿತ್ತು.[೩]

ರಾಜನೇ ರಾಜ್ಯದ ಮುಖ್ಯ ಸೂತ್ರಾಧಿಕಾರಿಯಾಗಿದ್ದು ಧರ್ಮಶಾಸ್ತ್ರಗಳು ನಿರೂಪಿಸುವಂತೆ ಅವನ ಕರ್ತವ್ಯಗಳಲ್ಲಿ ದ್ರುಷ್ಟನಿಗ್ರಹ, ಶಿಷ್ಟಪರಿಪಾಲನೆ, ಆತ್ಮರಕ್ಷಣಾ ಮತ್ತು ಧರ್ಮಯತ್ನಗಳಾಗಿದ್ದು, ಒಟ್ಟಿನಲ್ಲಿ ಸಮ್ಯಕ್ ಪರಿಪಾಲನಾ ವ್ಯವಸ್ಥೆಯಲ್ಲಿ ಕಾರ್ಯಸಾಧನೆಗಾಗಿ ರಾಜ್ಯದ ಆಡಳಿತವನ್ನು ಕೇಂದ್ರಬಿಂದುವಾಗಿಟ್ಟುಕೊಂಡು ರಾಜನು ತನ್ನ ಆತ್ಮ ರಕ್ಷಣೆಗಾಗಿ ಹಾಗೂ ದೇಶದ ರಕ್ಷಣೆಗಾಗಿ ಸೈನ್ಯವನ್ನು ಗಟ್ಟಿಗೊಳಿಸುವಲ್ಲಿ ಯಶಸ್ವಿಯಾಗಿದ್ದನು. ಇದರ ಜೊತೆಗೆ ಅಧಿಕಾರಿಗಳು ಇರುತ್ತಿದ್ದು, ಸಮ್ಯಕ್ ಪ್ರಜಾಪರಿಪಾಲನೆಯಲ್ಲಿ ರಾಜ್ಯದ ಆರ್ಥಿಕ ಅಭಿವೃದ್ಧಿ ನಾಯಕತ್ವ ಹಾಗೂ ನ್ಯಾಯನಿಷ್ಠೆಯ ಜೀವನ ಶೈಲಿಗಳನ್ನು ನಿರೂಪಿಸುವುದು, ಪಾಲಿಸುವುದು, ಧರ್ಮರಕ್ಷಣೆಯಲ್ಲಿ ವಿವಿಧ ಜನಸಮುದಾಯಗಳು ತಮ್ಮ ತಮ್ಮ ಧರ್ಮ ಆಚರಣೆಗಳನ್ನು ಕಾಪಾಡಿಕೊಂಡು ಬರುತ್ತಿದ್ದವು. ಇವುಗಳಲ್ಲದೆ ರಾಜನು ಅಧಿಕಾರಯುತ ಆಡಳಿತದಲ್ಲಿ ಜನಪರ ಕೆಲಸ ಕಾರ್ಯಗಳಿಗೆ ನೆರವಾಗುತ್ತಿದ್ದನು.[೪]

ಹೀಗೆ ರಾಜನ ಬಹುಮುಖ ಆಡಳಿತದ ಕಾರ್ಯಯೋಜನೆಗಳನ್ನು ನೆರವೇರಿಸಲು ರಾಜ್ಯಕ್ಕೆ ಉತ್ತಮವಾದ ಆಡಳಿತ ವ್ಯವಸ್ಥೆಯ ಅವಶ್ಯಕತೆಯಿದ್ದು, ರಾಜ್ಯದ ಗಾತ್ರ ಮತ್ತು ವಿಸ್ತಾರಕ್ಕೆ ಅನುಗುಣವಾಗಿ ಅಧಿಕಾರ ಹಂಚಿಕೆ ರೂಪುಗೊಳ್ಳತ್ತಿತ್ತು.[೫] ಇದರಿಂದಾಗಿ ಹಾವೇರಿ ಜಿಲ್ಲೆಯನ್ನು ಒಳಗೊಂಡಂತೆ ಶಾಸನಗಳಲ್ಲಿ ದೊರೆತಿರುವ ಮಾಹಿತಿಯನ್ನು ಆಧರಿಸಿ ಆಡಳಿತಾತ್ಮಕ ವ್ಯವಸ್ಥೆಯ ಚಿತ್ರಣವನ್ನು ಈ ಕೆಳಕಂಡಂತೆ ತಿಳಿಯಬಹುದು.

ಆಡಳಿತವು ಸಾಮಾನ್ಯವಾಗಿ ಕೇಂದ್ರ ಪ್ರಾದೇಶಿಕ ಮತ್ತು ಸ್ಥಳೀಯ ಎಂಬ ಮೂರು ಘಟ್ಟಗಳಲ್ಲಿ ವ್ಯವಸ್ಥಿತವಾಗಿದ್ದಿತು. ಕೇಂದ್ರದಲ್ಲಿ ರಾಜನ ಜೊತೆಗೆ ಆತನ ಕುಟುಂಬದವರು ಆಡಳಿತದಲ್ಲಿ ಭಾಗವಹಿಸುತ್ತಿದ್ದರು. ಬುದ್ಧಿವಂತರು, ಪ್ರಾಮಾಣಿಕರೂ ಆದ ಮಂತ್ರಿಗಳು ಮತ್ತು ಇತರರು ರಾಜನಿಗೆ ಸಲಹೆ ನೀಡುತ್ತಿದ್ದರು. ಸೈನ್ಯ, ಕಂದಾಯ, ಧರ್ಮ, ನ್ಯಾಯಪಾಲನೆ ಇತ್ಯಾದಿಗಳಿಗೆ ಸಂಬಂಧಿಸಿದಂತೆ ಅನೇಕ ಅಧಿಕಾರಿಗಳು ಇರುತ್ತಿದ್ದರು. ರಾಜ್ಯದ ಕೋಶ ದಾಖಲೆಗಳು, ನಾಣ್ಯ ಮುದ್ರಣ, ಅರಮನೆಯ ವ್ಯವಹಾರ ಇವುಗಳನ್ನು ನೋಡಿಕೊಳ್ಳಲು ಬೇರೆ ಬೇರೆ ಅಧಿಕಾರಿಗಳು ಇರುತ್ತಿದ್ದರು.[೬]

ಪ್ರಾಂತೀಯ ವಿಭಾಗದಲ್ಲಿ ಸಾಮಾನ್ಯವಾಗಿ ರಾಜ ಪ್ರತಿನಿಧಿಗಳಿದ್ದು, ಅವರು ಕೇಂದ್ರಾಡಳಿತ ವ್ಯವಸ್ಥೆಯಂತೆ ತಮ್ಮ ಆಡಳಿತ ವ್ಯವಸ್ಥೆಯನ್ನು ರೂಢಿಸಿಕೊಂಡಿರುತ್ತಿದ್ದರು. ಈ ಪ್ರಾಂತ್ಯಾಧಿಕಾರಿಗಳು ಸ್ವಂತ ಸೈನ್ಯವನ್ನು ಇಟ್ಟುಕೊಂಡಿರುತ್ತಿದ್ದರು. ಇವರಲ್ಲಿ ಮಂತ್ರಿ ಮತ್ತು ಇತರ ಅಧಿಕಾರಿಗಳ ಸಿಬ್ಬಂದಿ ಇರುತ್ತಿತ್ತು. ರಾಣಿಯರು, ರಾಜಕುಮಾರರು ಮತ್ತು ಇತರ ರಾಜ ಬಂಧುಗಳು ಇವನಿಗೆ ನಿಷ್ಠಾವಂತರಾಗಿದ್ದ ಸಮರ್ಥ ದಂಡನಾಯಕರು ಪ್ರಾಂತ್ಯದ ಅಧಿಕಾರಿಗಳನ್ನು ವಹಿಸಿಕೊಂಡಿರುತ್ತಿದ್ದರು. ಕೆಲವೆಡೆಗಳಲ್ಲಿ ಕೆಲವು ಮನೆತನಗಳವರು ವಂಶಪಾರಂಪರ್ಯವಾಗಿ ಅಧಿಕಾರವನ್ನು ಹೊಂದಿದ್ದು ಸಾರ್ವಭೌಮನ ಮಾಂಡಳೀಕರಾಗಿ ಆಡಳಿತ ನಿರ್ವಹಿಸುತ್ತಿದ್ದರು. ಇನ್ನೂ ಕೆಳದರ್ಜೆಯಲ್ಲಿ ಗ್ರಾಮ ಕೂಟಗಳಿದ್ದು ಅವುಗಳಿಗೂ ಪ್ರಾಂತ್ಯಾಧಿಕಾರಿಗಳ ಅಧೀನದಲ್ಲಿ ಇತರೆ ಅಧಿಕಾರಿಗಳಿರುತ್ತಿದ್ದರು. ಇವರು ಸ್ಥಳೀಯ ಜನರ ಯೋಗಕ್ಷೇಮವನ್ನು ಪ್ರಾಂತ್ಯ ವ್ಯವಹಾರಗಳನ್ನು ನೋಡಿಕೊಳ್ಳಬೇಕಾಗಿತ್ತಲ್ಲದೆ ಕಾಲಕಾಲಕ್ಕೆ ತಮ್ಮ ಮೇಲಿನ ಪ್ರಾಂತ್ಯಾಧಿಕಾರಿಗಳಿಗೆ ವಸೂಲಿ ಮಾಡಿದ ತೆರಿಗೆ ಸಲ್ಲಿಸುತ್ತಿದ್ದರು.[೭] ಇದರಿಂದಾಗಿ ಆಡಳಿತ ವ್ಯವಸ್ಥೆಯಲ್ಲಿ ರಾಜ, ರಾಣಿ, ಮಂತ್ರಿಗಳು, ದಂಡನಾಯಕರು, ಅಧಿಕಾರಿಗಳು, ಸೇನಾಡಳಿತ, ಪ್ರಾಂತ್ಯಾಡಳಿತ, ಗ್ರಾಮಾಡಳಿತ ಮತ್ತು ನ್ಯಾಯಾಡಳಿತ ಎಂಬ ವಿಷಯಗಳನ್ನು ಕುರಿತು ತುಲನಾತ್ಮಕವಾಗಿ ಅಧ್ಯಯನ ಕೈಗೊಂಡಾಗ ಹಾವೇರಿ ಜಿಲ್ಲೆಯನ್ನೊಳಗೊಂಡ ಕರ್ನಾಟಕದ ಪ್ರಾಚೀನ ಆಡಳಿತ ಕ್ರಮವನ್ನು ಶಾಸನಗಳ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ತಿಳಿಯಬಹುದು.

**ರಾಜ :**

ಪ್ರಾಚೀನ ಕರ್ನಾಟಕದ ರಾಜರು ತಾವು ಮೂಲತಃ ದೈವ ಪುರುಷನೊಬ್ಬನಿಂದ ಇಳಿದು ಬಂದವರೆಂದು ಹೇಳಿಕೊಳ್ಳುತ್ತಿದ್ದರು. ರಾಜರು ದೈವದ ಅವತಾರ ಎಂಬ ಭಾವನೆ ಜನರಲ್ಲೂ ಸಹ ಮೂಡಿಬಂದಿರುವುದು. ಅಂದರೆ ರಾಜನಿಗೆ ಚಕ್ರವರ್ತಿ-ಮನ್ನೆಯ-ಅರಸು ಈ ಮೂರು ಶಬ್ಧಗಳಲ್ಲಿ ಅನೇಕರು ಏಕಾರ್ಥ ಪದವಾಗಿ ಉಪಯೋಗಿಸುತ್ತಾರೆ. ಆದರೆ ಈ ಎರಡೂ ಶಬ್ಧಗಳು ವಿಭಿನ್ನ ಅರ್ಥಗಳನ್ನು ಕೊಡುತ್ತವೆ. ಇಡೀ ಸಾಮ್ರಾಜ್ಯಕ್ಕೆ ಒಡೆಯನಾಗಿದ್ದವನಿಗೆ 'ಚಕ್ರವರ್ತಿ' ಎಂದು ಕರೆಯಲಾಗುತ್ತಿತ್ತು. ಹೀಗಾಗಿ ಮಹಾಮಂಡಳೇಶ್ವರರು ಮಹಾಸಾಮಂತರು ಇವನ ಕೆಳಗಿನ ಅಧಿಕಾರಿಗಳಾಗಿದ್ದಾರೆ. ಮಹಾರಾಜಾಧಿರಾಜನಾದವನು ಇಡೀ ಸಾಮ್ರಾಜ್ಯಕ್ಕೆ ಒಬ್ಬನೇ ಇರುತ್ತಾನೆ. ಅಧಿಕಾರದಲ್ಲಿ ಎಲ್ಲರಿಗಿಂತ ದೊಡ್ಡವನಾಗಿದ್ದಾನೆ. ಹೀಗಾಗಿ ಇವನನ್ನು ಚಕ್ರವರ್ತಿ ಎಂದು ಕರೆಯಲಾಗಿದೆ.[೮] ರಾಜನು ಕೇವಲ ರಾಜಕ್ಕೆ ಒಡೆಯನಾದರೆ ಚಕ್ರವರ್ತಿಯು ಇಂತಹ ಅನೇಕ ರಾಜ್ಯಗಳ ಸಂಗಮವಾದ ಸಾಮ್ರಾಜ್ಯಕ್ಕೆ ಒಡೆಯನಾಗಿದ್ದಾನೆ. ಚಕ್ರವರ್ತಿಯು ಕೇಂದ್ರಾಡಳಿತದಲ್ಲಿ ಸಾರ್ವಭೌಮನಾಗಿದ್ದನು. "ಕೇಂದ್ರಾಡಳಿತದಲ್ಲಿ ಚಕ್ರವರ್ತಿ ಮತ್ತು ಆತನ ಮಂತ್ರಿಮಂಡಲ ಪ್ರಮುಖವಾದರೂ ಚಕ್ರವರ್ತಿಯ ಅಧೀನದಲ್ಲಿಯೇ ರಾಜ್ಯದ ಸಮಸ್ತ ಸೂತ್ರಗಳಿರುತ್ತಿದ್ದವು. ಅವನ ಮನೋಬಲಗಳ ಮೇಲೆ ದೇಶದ ಕಾರ್ಯಗಳು

ರೂಪುತಳೆಯುತ್ತಿದ್ದವು. ಚಕ್ರವರ್ತಿಗಾಗಿ ನಮ್ಮ ನಾಡಿನ ಜನ ತೆತ್ತಬೆಲೆ ಅಪಾರವಾದುದು. ಅದು ಅತ್ಯಂತ ಮಹತ್ವದ್ದಾಗಿರುತ್ತದೆ. ಅಂದರೆ ಮಳೆ ಬೆಳೆಗಳಿಗಿಂತ ದೊಡ್ಡದೆಂದು ಹೇಳಬಹುದು.[೯] ಈತನ ಆಳ್ವಿಕೆಯಲ್ಲಿ ವಿಶಾಲ ರಾಜ್ಯಗಳು ರೂಪುಗೊಂಡವು. ಅವುಗಳ ಸರ್ವತೋಮುಖಿ ಅಭಿವೃದ್ದಿಗಾಗಿ ರಾಜ, ಅಮಾತ್ಯ, ಜನಪದ, ದುರ್ಗಕೋಶ, ಸೈನ್ಯ ಮತ್ತು ಮಿತ್ರ ಎಂಬ ಸಪ್ತಾಂಗ ವ್ಯವಸ್ಥೆಯು ರಚನೆಯಾಗಬೇಕು. ಈ ಸಪ್ತಾಂಗ ವ್ಯವಸ್ಥೆಯಲ್ಲಿ ಪ್ರಬಲರಾದ ರಾಜನು ಸೇನೆ ಹಾಗೂ ನ್ಯಾಯಾಂಗದ ಅಧಿಕಾರಿಗಳನ್ನು ಚಲಾಯಿಸಿ ಪ್ರಜೆಗಳ ಪಾಲಿಗೆ ನ್ಯಾಯ ರಕ್ಷಕನಾಗಿದ್ದನು ಹಾಗೂ ಶತ್ರುಗಳ ಪ್ರಾಬಲ್ಯವನ್ನು ನಿಗ್ರಹಿಸಿ ಶಿಕ್ಷೆಯ ದಂಡವನ್ನು ಚಲಾಯಿಸುವ ದಂಡಾಧಿಪತಿಯಾಗಿದ್ದನು. ಇಂತಹ ಪ್ರಬಲ ರಾಜರ ಕೊರತೆಯುಂಟಾಗಿ ದೇಶ ಮತ್ತು ಜನತೆ ತೊಂದರೆಗೀಡಾದಾಗ ಅದನ್ನು ಅರಾಜಕತೆ ಎಂದು ಕರೆಯಲಾಗುತ್ತಿತ್ತು. ಹೀಗೆ ದೇಶದಲ್ಲಿ ಅರಾಜಕತೆ ಉಂಟಾಗಿ ಮತ್ಸನ್ಯಾಯ ತಾಂಡವವಾಡುವಾಗ ಅದರ ಉಪಟಳಗಳಿಂದ ತಪ್ಪಿಸಿಕೊಳ್ಳಲು ಜನರು ಇಚ್ಚಿಸಿದ ಫಲವಾಗಿ ರಾಜ ಪದವಿಯ ಉಗಮವಾಯಿತು ಎಂದು ಕೌಟಿಲ್ಯನು ಹೇಳಿದನು.[೧೦]

ಹೀಗೆ ಹಾವೇರಿ ಜಿಲ್ಲೆಯ ಶಾಸನಗಳನ್ನು ವಸ್ತುವಿಷಯಕ್ಕೆ ಪೂರಕವಾಗಿ ಗಮನಿಸಿದರೆ ಕದಂಬರು, ಬಾದಾಮಿ ಚಲುಕ್ಯರು, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಕಲಚೂರಿಗಳು, ಹಾನಗಲ್ ಕದಂಬರು, ಸೇವುಣರು, ಹೊಯ್ಸಳರು ಮತ್ತು ವಿಜಯನಗರ ಅರಸರ ಹೆಸರುಗಳು ಕಂಡು ಬರುತ್ತವೆ. ಹೀಗಾಗಿ ರಾಜನನ್ನು ಸರ್ವೋತ್ತಮ ಅಧಿಕಾರಿಯೆಂದೂ, ರಾಜನಿಗೆ ದೈವದತ್ತವಾದ ಅಧಿಕಾರವು ವಂಶಪಾರಂಪರ್ಯವಾಗಿ ದೊರೆಯುತ್ತಿತ್ತು, ಅದೇ ರೀತಿ ಸರ್ವವಿಧದಲ್ಲೂ ರಾಜನನ್ನು ವಿದ್ಯಾವಂತ, ವಿನಯಶೀಲ, ಸರ್ವಗುಣ ಸಂಪನ್ನನೂ ಹಾಗೂ ಎಲ್ಲಾ ವಿಧದಲ್ಲೂ ಶತೃಗಳನ್ನು ಸೆದೆಬಡಿಯುವ ಶೌರ್ಯವನ್ನು ಹೊಂದಿದವನು ಎಂಬ ಬಿರುದುಗಳಿಂದ ಕರೆಯಲಾಗುತ್ತದೆ. ಹೀಗಾಗಿ ಕ್ರಿ.ಶ. ಆರನೇ ಶತಮಾನದ ಅಕ್ಕಿಆಲೂರ ಶಾಸನದಲ್ಲಿ[೧೧] ಧರ್ಮ ಮಹಾರಾಜ ಎರಡನೇ ವಿಷ್ಣುವರ್ಮನು ಸ್ವಾಮಿ ಶರ್ಮನಿಗೆ ಪಾಂತಿಪುರ ವಿಷಯದಲ್ಲಿ ಕಿರುಕುಪ್ಪಟೂರ ಗ್ರಾಮದಾನ ಮಾಡಿದ ಉಲ್ಲೇಖವಿದೆ. ಕ್ರಿ.ಶ. ೯೫೫ರ ನರೇಗಲ್ಲು ಶಾಸನದಲ್ಲಿ ರಾಷ್ಟ್ರಕೂಟ ದೊರೆ ಮೂರನೇ ಕೃಷ್ಣನ ಕಾಲಕ್ಕೆ ಸಂಬಂಧಿಸಿದ ಶಾಸನದಲ್ಲಿ ಅರಸು ಕನ್ನರ ದೇವ ಪೃಥ್ವಿರಾಜನು ಆಳುತ್ತಿರುವ ಪುಣಸೆಯ ಗಂಜ್ಣಾರನ್ನು ಆಳುತ್ತಿರುವ ನರೇಯಂಗಲ್ ಕೂಟ ಚಾರನ ಕೋಟೆಯಮ್ಮನ ಮಗ ತೋಹಿಮ್ಮ ಗೋಗ್ರಹಣದಲ್ಲಿ ಮಡಿದ ವಿಷಯನ ಪ್ರಸ್ತಾಪವಿದೆ.[೧೨] ಕ್ರಿ.ಶ ೧೦೫೩ರ ಕಲಕೇರಿಯ ಶಾಸನದಲ್ಲಿ ಕಲ್ಯಾಣ ಚಾಲುಕ್ಯರ ಚಕ್ರವರ್ತಿ ಒಂದನೇ ಸೋಮೇಶ್ವರನು ತ್ರೈಲೋಕ್ಯಮಲ್ಲನೆಂಬ ಹೆಸರಿನಿಂದ ಕಲ್ಯಾಣ ನಗರವನ್ನು ಆಳುತ್ತಿದ್ದನು. ಈತನನ್ನು ಮಹಾಮಾತ್ಯ ಪದವಿ ಪಡೆದಿದ್ದ ಶ್ರೀಮತ್ ವಡ್ಡರಾವುಳನ ಪೆರ್ಗಡೆ ಸೋಮನಾಥಯ್ಯಂಗಳ ಆಜ್ಞೆಯ ಮೇರೆಗೆ ದಾನಬಿಟ್ಟ ವಿವರ ಈ ಶಾಸನದಲ್ಲಿದೆ.[೧೩] ಕ್ರಿ.ಶ. ೧೦೫೫ರ ಶಾಸನದಲ್ಲಿ ಒಂದನೇ ಸೋಮೇಶ್ವರನು ಚಕ್ರವರ್ತಿಯಾಗಿ ಆಳುತ್ತಿರುವಾಗ ಈತನ

ಪುತ್ರನಾದ ಆರನೇ ವಿಕ್ರಮಾದಿತ್ಯನು ವಂದಲೆ ಮರ್ಯಾದೆಯಿಂದ ಗಂಗವಾಡಿ ತೊಂಭತ್ತಾರು ಸಾವಿರವನ್ನು ಆಳುತ್ತಿದ್ದನು. ಈ ಶಾಸನವು ಆರನೇ ವಿಕ್ರಮಾದಿತ್ಯನು ಗಂಗರ ಪ್ರಶಸ್ತಿಯನ್ನು ಧರಿಸಿರುವುದನ್ನು ತಿಳಿಸುತ್ತದೆ.[೧೪] ಕ್ರಿಶ ೧೦೮೮ರ ಕಲಕೇರಿ ಶಾಸನದಲ್ಲಿ[೧೫] ವಿಕ್ರಮಾದಿತ್ಯನು ಚಕ್ರವರ್ತಿಯಾಗಿ ಆಳುತ್ತಿದ್ದುದನ್ನು ಆತನು ಪಾದಪದ್ಮೋಪಜೀವಿಯಾದ ಮಹಾಸಾಮಂತಾಧಿಪತಿ, ಮಹಾಪ್ರಚಂಡ ದಂಡನಾಯಕ ಶ್ರೀಧರಯ್ಯ, ದಂಡನಾಯಕ ಆಸಪಯ್ಯರು, ಮೇಲ್ಪಟ್ಟ ವಡ್ಡರಾವುಳ ಬಿಲ್ಕೊಡೆಯ ಸುಂಕವನ್ನು ಆಳುತ್ತಿದ್ದನು ಎಂದು ಹೇಳಲಾಗುತ್ತದೆ. ಇನ್ನೊಂದು ಶಾಸನದಲ್ಲಿ ಮಹಾಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕರಾದ ಅನಂತ ಪಾಳಯ್ಯ ಮತ್ತು ಗೋವಿಂದರು ಸುಂಕವನ್ನು ಆಳುತ್ತಿದ್ದನು ಎಂದು ಹೇಳಲಾಗಿದೆ. ಕಲಕೇರಿಯ ಕ್ರಿ.ಶ. ೧೧೪೬ರ ಶಾಸನದಲ್ಲಿ[೧೬] ಚಕ್ರವರ್ತಿ ಜಗದೇಕಮಲ್ಲನಾಗಿದ್ದರೆ ಕ್ರಿ.ಶ.೧೧೮೫ರ ಶಾಸನದಲ್ಲಿ[೧೭] ನಾಲ್ವಡಿ ಸೋಮೇಶ್ವರನದ್ದಾಗಿದೆ. ಕಳಚೂರಿ ವಂಶದ ಬಿಜ್ಜಳನು ಕಲ್ಯಾಣ ಚಾಲುಕ್ಯ ಸಿಂಹಾಸನವನ್ನು ಆಕ್ರಮಿಸಿ ಚಕ್ರವರ್ತಿ ಎಂದೆನಿಸುತ್ತಾನೆ. ಆಗ ಕಲಕೇರಿಯು ಇದರ ಆಳ್ವಿಕೆಗೂ ಒಳಪಡುತ್ತದೆ. ಕ್ರಿ.ಶ.೧೧೮೩ರ ಕಲಕೇರಿ ಶಾಸನದಲ್ಲಿ[೧೮] "ಶ್ರೀಮತ್ಕಳಚೂರಿಯ ಚಕ್ರವರ್ತಿ ವೀರ ನಾರಾಯಣ ಅಹವಮಲ್ಲ" ಎಂದು ಕರೆಯಲಾಗಿದೆ. ಈ ಶಾಸನದಿಂದ ಒಂದು ಅಂಶ ಸ್ಪಷ್ಟವಾಗುತ್ತದೆ. ಅದೇನೆಂದರೆ, ಈ ಭಾಗದವರು ಕಳಚೂರಿ ವಂಶದವರನ್ನು ಚಕ್ರವರ್ತಿಗಳೆಂದು ಮನ್ನಿಸಲ್ಪಟ್ಟಿದ್ದುದು. ಮುಂದೆ ಕಲಚೂರಿ ವಂಶದವರನ್ನು ಮೂಲೆಗೊತ್ತಿ ಉತ್ತರ ಕರ್ನಾಟದಲ್ಲಿ ದೇವಗಿರಿಯ ಯಾದವರು ಪ್ರಬಲರಾಗುತ್ತಾರೆ. ದಕ್ಷಿಣದಲ್ಲಿ ಹೊಯ್ಸಳರು ಪ್ರಬಲರಾಗಿರುತ್ತಾರೆ. ಇವರೀರ್ವರ ಹೊಡೆದಾಟದಲ್ಲಿ ಕಲಕೇರಿಯು ಒಮ್ಮೆ ಹೊಯ್ಸಳರ ವಶದಲ್ಲಿದ್ದರೆ ಮತ್ತೊಮ್ಮೆ ದೇವಗಿರಿ ಯಾದವರ ವಶದಲ್ಲಿರುತ್ತಿತ್ತು. ಹೀಗಾಗಿ ಕಲಕೇರಿಯಲ್ಲಿ ಇವರೀರ್ವರ ಶಾಸನಗಳು ಲಭ್ಯವಾಗಿವೆ. ಕ್ರಿ.ಶ.೧೨೨೪ರ ಶಾಸನದಲ್ಲಿ[೧೯] "ಶ್ರೀಮತ್‌ಯಾದವ ನಾರಾಯಣ ಪ್ರತಾಪ ಚಕ್ರವರ್ತಿ, ಶ್ರೀಮತ್ ಸಿಂಗಣದೇವ" ಎಂಬ ಉಲ್ಲೇಖ ಕಂಡುಬಂದಿದೆ. ಕ್ರಿ.ಶ. ೧೨೬೦ರ ಮತ್ತೊಂದು ಶಾಸನದಲ್ಲಿ[೨೦] ಯಾದವ ನಾರಾಯಣಂ ಭುಜಬಟಿ ಪ್ರತಾಪ ಚಕ್ರವರ್ತಿ ಶ್ರೀವೀರ ಮಹಾದೇವ ರಾಜೋದಯ ಎಂದು ಹೇಳಲಾಗಿದೆ. ಅಲ್ಲದೆ ಕ್ರಿ.ಶ.೧೨೯೯ರ ಕಲಕೇರಿ ಶಾಸನದಲ್ಲಿ[೨೧] ಯಾದವ ವಂಶದ ವೀರರಾಮದೇವ ಆಳುತ್ತಿದ್ದುದನ್ನು ತಿಳಿಸುತ್ತದೆ. ಇದರಿಂದ ಕ್ರಿ.ಶ. ೧೨೯೯ರವರೆಗೆ ಕಲಕೇರಿ ದೇವಗಿರಿಯ ಯಾದವರ ವಶದಲ್ಲಿತ್ತು. ಆದರೆ ಇಮ್ಮಡಿ ಬಲ್ಲಾಳನ ಕಾಲದಲ್ಲಿ ಮಾತ್ರ ಈ ಭಾಗವು ಹೊಯ್ಸಳರ ವಶದಲ್ಲಿತ್ತು. ಹೊಯ್ಸಳ ಇಮ್ಮಡಿ ವೀರ ಬಲ್ಲಾಳನ ಕ್ರಿಶ೧೨೦೭ರ ಶಾಸನವು[೨೨] ಕಲಕೇರಿಯಲ್ಲಿ ದೊರೆತಿದ್ದು, ಮುಂದೆ ವಿಜಯನಗರ ಅರಸರ ಆಳ್ವಿಕೆಗೆ ಕಲಕೇರಿಯೂ ಒಳಪಟ್ಟಿದೆ ಆದರೆ ವಿಜಯನಗರ ಅರಸರ ಕಾಲದ ಶಾಸನಗಳು ಇಲ್ಲಿ ಲಭ್ಯವಿರುವುದಿಲ್ಲ. ತಾಳಿಕೋಟೆ ಯುದ್ದ ನಂತರ ಕ್ರಿ.ಶ ೧೫೬೭ರ ಶಾಸನದಲ್ಲಿ[೨೩] ಶ್ರೀಮ(ಂ)ನ್ಮಹಾಮಂಡಳೇಶ್ವರ ರಾಮರಾಜ ವೆಂಕಟರಾಜಯದೇವ ಮಹಾ ಅರಸುಗಳು ಎಂದು ಉಲ್ಲೇಖವಿದೆ. ಇಲ್ಲಿ ವೆಂಕಟರಾಜಯದೇವ ಎಂಬುವವನು ವಿಜಯನಗರದ

ಅರವೀಡು ಶಾಖೆಯ ವೆಂಕಟಾದ್ರಿಯನ್ನು ಸೂಚಿಸುತ್ತಿರಬಹುದು. ಕ್ರಿ.ಶ ೧೫೬೫ರ ನಂತರ ಕಲಕೇರಿಯ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಶಾಸನಗಳು ಲಭ್ಯವಾಗಿಲ್ಲ. ಹೀಗಾಗಿ ರಾಜರು ಸಾಮ್ರಾಜ್ಯದ ಎಲ್ಲೆಗಳನ್ನು ತಮ್ಮ ಅಧೀನದಲ್ಲಿಟ್ಟುಕೊಂಡು ತಮ್ಮ ಸಾಧನೆಗಳನ್ನು, ಬಿರುದಾವಳಿಗಳನ್ನು ಹೊಂದಿದ್ದು, ಆಡಳಿತದಲ್ಲಿ ತಮ್ಮದೆ ಆದ ಛಾಪನ್ನು ಮೂಡಿಸಿದ್ದಾರೆ. ಜೊತೆಗೆ ಆಡಳಿತದಲ್ಲಿ ಇವರ ರಾಣಿಯರು ಸಹ ಭಾಗಿಯಾಗಿರುವುದನ್ನು ಮುಂದೆ ತಿಳಿಯಲಾಗುವುದು.

**ರಾಣಿಯರು :**

ಕರ್ನಾಟಕದ ರಾಣಿಯರು ಪಾಣಿನಿಯು ಹೇಳುವಂತೆ 'ಅಸೂರ್ಯಂ ಪಶ್ವೆ'[೨೪]ಯರಾಗಿರಲಿಲ್ಲ. ರಾಜ್ಯದ ರಾಜಕೀಯ, ಸಾಮಾಜಿಕ, ಆರ್ಥಿಕ, ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಆಳ್ವಿಕೆ ಮಾಡಿರುವುದನ್ನು ಕಾಣುತ್ತೇವೆ ಅದರಲ್ಲೂ ಕಲ್ಯಾಣಿ ಚಾಲುಕ್ಯರು ಹಾಗೂ ಹೊಯ್ಸಳ ದೊರೆಗಳು ತಮ್ಮ ರಾಣಿ ವರ್ಗಕ್ಕೆ ಆಡಳಿತದ ಸವಿಯುಣಿಸಿದ್ದರು.

ಆಡಳಿತದ ಹೊಣೆ ಹೊತ್ತ ರಾಣಿಯರು ರಾಜಕೀಯ ಚತುರತೆಯರು ಲೋಕಾನುಭವವುಳ್ಳವರು ಆಗಿರುತ್ತಿದ್ದರು. ಯುದ್ಧಕಾಲದ ಕೌಶಲ್ಯ ಹೆಚ್ಚಿನ ಅರ್ಹತೆಯಾಗಿತ್ತು. ಪ್ರಾಚೀನ ಕರ್ನಾಟಕದ ರಾಣಿಯರನೇಕರು ಸ್ವತಂತ್ರ ರಾಜ್ಯಭಾರ ನಡೆಸಿದ್ದರೂ, ಕದಂಬ ಮಯೂರವರ್ಮನ ರಾಣಿ, ಅಕ್ಕಮಹಾದೇವಿರಂತಹವರು ವಿರಳ.[೨೫] ಹೀಗಾಗಿ ಹಾವೇರಿ ಜಿಲ್ಲೆಯ ಶಾಸನಗಳಲ್ಲಿ ಹಲವು ಕಡೆ ಆಳ್ವಿಕೆ ಮಾಡಿರುವುದು ಉಲ್ಲೇಖವಾಗಿರುವುದನ್ನು ಕೆಳಕಂಡಂತೆ ಕಾಣಬಹುದು.

ಕ್ರಿ.ಶ. ೧೦೫೩-೫೪ ರ ಹಾನಗಲ್ ತಾಲೂಕಿನ ತಿಳಿವಳ್ಳಿ ಶಾಸನದಲ್ಲಿ[೨೬] ಚಾಲುಕ್ಯ ಒಂದನೇ ಸೋಮೇಶ್ವರನ ಪಿರಿಯರಸಿ 'ಮೈಳಲಾದೇವಿ' ಬನವಾಸಿ ಪ್ರಾಂತ್ಯ ನೊಡಿಕೊಳ್ಳುತ್ತಿದ್ದುದಾಗಿ ತಿಳಿಸುತ್ತದೆ. ಇದೇ ಚಕ್ರವರ್ತಿಯ ಕ್ರಿ.ಶ. ೧೦೪೮ ರ ಹಿರೇಕೆರೂರು ತಾಲೂಕಿನ ಚಿಕ್ಕೆರೂರು ಶಾಸನದಲ್ಲಿ[೨೭] ರೇವಕಬ್ಬರಸಿಯನ್ನು ಹೆಸರಿಸುತ್ತದೆ ಹಾಗೆಯೇ ಮತ್ತೊಂದು ಕ್ರಿ.ಶ. ೧೦೯೪-೯೫ರ ಶಾಸನದಲ್ಲಿ[೨೮] ಚಾಲುಕ್ಯ ಚಕ್ರವರ್ತಿ ಆರನೇ ವಿಕ್ರಮಾದಿತ್ಯನ ಪಿರಿಯರಸಿ ಪಟ್ಟಮಹಾದೇವಿ ಮಲಯವತಿ ಮಹಾದೇವಿ ಅಗ್ರಹಾರ ಪಿರಿಯಕೆರೆಯನ್ನು ಆಳುತ್ತಿದ್ದುದ್ದಾಗಿ ತಿಳಿಸುತ್ತದೆ. ಇವಳ ವಿಷಯವಾಗಿ ಶಾಸನಗಳಲ್ಲಿ ಉಲ್ಲೇಖವಾಗಿರುವುದು. ಇದೇ ಮೊದಲನೆಯದ್ದಾಗಿದೆ[೨೯] ಕ್ರಿ.ಶ.೧೨೦೪ರ ಸಾತೇನಹಳ್ಳಿ ಶಾಸನದಲ್ಲಿ[೩೦] ಕೊಣವತ್ತಿ ಸಾಮಂತ ಕಾಮಿಸೆಟ್ಟಿಯ ಪತ್ನಿ ವೆಣ್ಣಿಲೆಸೆಟ್ಟಿ.ಕವ್ವೆ ಅವನ ಮರಣಾನಂತರ[೩೧] ಕೊಣವತ್ತಿಯನ್ನು ಸಮರ್ಥವಾಗಿ ಆಳಿದ ಉಲ್ಲೇಖವಿದೆ.

ಕ್ರಿ.ಶ.೧೧೮೭ರ ರಾಣಿಬೆನ್ನೂರು ತಾಲೂಕಿನ ಹುಲ್ಲತ್ತಿ ಶಾಸನದಲ್ಲಿ[೩೨] ಮಹಾಮಂಡಳೇಶ್ವರ ವಿಕ್ರಮಾದಿತ್ಯ ದೇವರಸ ಮತ್ತು ಆತನ ರಾಣಿ ಸೋಮಲದೇವಿಯರಿಂದ ಕಲಿದೇವರಸ್ವಾಮಿ ದೇವಾಲಯಕ್ಕೆ ಭೂದಾನ ನೀಡಿದ ಮಾಹಿತಿ ಶಾಸನದಲ್ಲಿ ಲಭ್ಯವಾಗಿದೆ.

ಕ್ರಿ.ಶ. ಸುಮಾರು ೧೧ ನೇ ಶತಮಾನದ ಹಾನಗಲ್ಲು ತಾಲೂಕಿನ ಬೆಳವತ್ತಿ ಶಾಸನದಲ್ಲಿ[೩೩] ಅರಿಕೇಸರಿದೇವನು ಬನವಾಸಿ-೧೨೦೦೦, ಹಾನಗಲ್ಲು - ೫೦೦ ಆಳುತ್ತಿರುವಾಗ ಲಚ್ಚಲಾಮಹಾದೇವಿ ಬೆಳವತ್ತಿಯನ್ನು ಆಳುತ್ತಿದ್ದ ವಿಷಯದ ಪ್ರಸ್ತಾಪವಿದೆ. ಕ್ರಿ.ಶ. ೧೧ - ೧೨ನೇ ಶತಮಾನದ ಹಾನಗಲ್ಲು ತಾಲೂಕಿನ ನರೇಗಲ್ಲ ಶಾಸನದಲ್ಲಿ[೩೪] ಮಹಾಮಂಡಳೇಶ್ವರ ತೈಲಪನು ಬನವಾಸಿ-೧೨೦೦೦, ಹಾನಗಲ್ಲು-೫೦೦ ಪ್ರದೇಶವನ್ನು ಹಾಗೂ ಜೋಗಮರಾಯಣ್ಣನ ಮಗಳು ಸಾವಳದೇವಿ ನರೇಗೆಲ್ಲ ಆಳುವಾಗ ಮಹಾಪ್ರಭು ಕಪ್ಪಿಮಯ್ಯನಿಂದ ನರೇಗಲ್ಲದಲ್ಲಿ ಈಶ್ವರದೇವಾಲಯ ನಿರ್ಮಾಣ ಮಾಡಿದ ಉಲ್ಲೇಖವಿದೆ. ಕ್ರಿ.ಶ. ೧೧-೧೨ ನೇ ಶತಮಾನದ ನಿಡಸಿಂಗಿ ಶಾಸನದಲ್ಲಿ[೩೫] ಪಿರಿಯರಸಿ ಲಕ್ಷ್ಮಿದೇವಿ, ನಿಡಸಿಂಗಿಯನ್ನಾಳುವಾಗ ಉಗುರುಮೂನ್ನೂರ್ವರು ಕೊಯ್ಲಳೇಶ್ವರ ದೇವರಿಗಾಗಿ ಸ್ಥಾನಚಾರ್ಯ ಸೋಮೇಶ್ವರ ಪಂಡಿತರಿಗೆ ನೀಡಿದ ಭೂದಾನದ ಉಲ್ಲೇಖವಿದೆ.

ಹೀಗೆ ರಾಣಿಯರು, ರಾಜಕೀಯ, ಧಾರ್ಮಿಕ, ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಆಡಳಿತಾತ್ಮಕವಾಗಿ ಆಳ್ವಿಕೆಯನ್ನು ಮಾಡಿ ತಮ್ಮದೇ ಛಾಪನ್ನು ಮೂಡಿಸಿದ್ದಾರೆ ಎಂದರೆ ತಪ್ಪಾಗಲಾರದು. ಈ ದೃಷ್ಟಿಯಿಂದ ಹಾವೇರಿ ಜಿಲ್ಲೆಯ ಶಾಸನಗಳನ್ನು ಅವಲೋಕಿಸಿದಾಗ ದೇವಾಲಯಕ್ಕೆ ಗ್ರಾಮದ ಅಭಿವೃದ್ಧಿಗೆ ದಾನ-ದತ್ತಿಗಳನ್ನು ನೀಡಿರುವುದು ಶಾಸನಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ.

**ಮಂತ್ರಿಮಂಡಲ/ಮಂತ್ರಿಪರಿಷತ್ತು:**

ರಾಜನು ಜನರ ಏಕೈಕ ಸಾರ್ವಭೌಮನಾಗಿದ್ದು ತನ್ನ ರಾಜ್ಯದ ವಿಸ್ತಾರದ ಭದ್ರತೆಗಾಗಿ ದೊಡ್ಡ ಸೈನ್ಯವನ್ನು ಹೊಂದಿದ್ದು, ಅದರಲ್ಲಿ ನ್ಯಾಯಾಂಗದ ಅಧಿಕಾರಗಳನ್ನು ಚಲಾಯಿಸಿ, ಶತ್ರುಗಳ ಪ್ರಾಬಲ್ಯವನ್ನು ನಿಗ್ರಹಿಸಿ ಶಿಕ್ಷೆಯ ದಂಡವನ್ನು ಚಲಾಯಿಸುವ ದಂಡಾಧರನಾಗಿದ್ದರೂ ಸಾಮ್ರಾಜ್ಯದ ಸಂಕೀರ್ಣ ಕೆಲಸ ಕಾರ್ಯಗಳನ್ನು ನಿರ್ವಹಿಸಲು ಮಂತ್ರಿಗಳನ್ನು ನೇಮಿಸುವುದು ಅತ್ಯಗತ್ಯವಾಗಿದ್ದಿತ್ತು. ಆದ್ದರಿಂದಲೇ ಕೌಟಿಲ್ಯನು ರಾಜನನ್ನು ಕೇವಲ ರಥದ ಒಂದು ಚಕ್ರಮಾತ್ರ ಎಂದು ತಿಳಿಸಿದ್ದಾನೆ. ಅಂದರೆ ರಾಜ ತನ್ನ ಕಷ್ಟಕಾಲದಲ್ಲಿ ಸಂರಕ್ಷಿಸಿದ ಮತ್ತು ಪ್ರಾಮಾಣಿಕರಾದ ನಿಷ್ಠಾವಂತರಾದ ಸಹಪಾಠಿಗಳನ್ನು ಮಂತ್ರಿಗಳನ್ನಾಗಿ ನೇಮಿಸಿಕೊಳ್ಳಬೇಕೆಂದು "ಪರಾಶರ"ನು ತಿಳಿಸಿದ್ದಾನೆ.

ವ್ಯಕ್ತಿಗಳು ಯಾರೇ ಆಗಿರಲಿ ಉತ್ತಮ ದೈವಾಂಶ ಸಂಭೂತರು, ವಿವೇಕಿಗಳೂ, ಧೀರರೂ, ಪ್ರಾಮಾಣಿಕರೂ ಆಗಿದ್ದರೆ ಅಂತಹವರನ್ನು ಮಂತ್ರಿಗಳನ್ನಾಗಿ ನೇಮಿಸಿಕೊಳ್ಳಬೇಕೆಂದು 'ಬಾಹುದಂತಿ' ಎಂಬುವವಳು ತಿಳಿಸಿದ್ದಾಳೆ.[೩೬] ಆದರೆ, ಅರಸನ ಮಂತ್ರಿಮಂಡಲದ ಸದಸ್ಯರ ಸಂಖ್ಯೆ ಎಷ್ಟು ಇರಬೇಕೆಂಬುದರ ಬಗ್ಗೆ ಏಕಾಭಿಪ್ರಾಯವಿಲ್ಲ, ಆದರೆ ಅವಶ್ಯಕತೆಗೆ ಅನುಗುಣವಾಗಿರಬೇಕೆಂದು ಅರ್ಥಶಾಸ್ತ್ರ ಸೂಚಿಸುತ್ತದೆ.[೩೭] ಸೋಮದೇವನು ತನ್ನ ನೀತಿಕಾವ್ಯಾಮೃತದಲ್ಲಿ ಮೂವರು, ಐವರು, ಏಳುಜನರನ್ನು ಸೂಚಿಸಿದ್ದಾನೆ. ಹೀಗೆ ಮಂತ್ರಿ ಪದವಿಯು ವಂಶಪಾರಂಪರ್ಯವಾಗಿದ್ದರೂ ಆಯ್ಕೆಯು ಪೂರ್ಣವಾಗಿ ಯೋಗ್ಯತೆಯ ಆಧಾರದ ಮೇಲೆ ನಡೆಯುತ್ತಿತ್ತು ಎಂಬುದು ಮೇಲೆ ತಿಳಿಸಿರುವ ಪ್ರಾಚೀನ ಭಾರತದ ನೀತಿಜ್ಞರ ಅಭಿಪ್ರಾಯಗಳಿಂದ ತಿಳಿಯುತ್ತದೆ.

ಹಾವೇರಿ ಜಿಲ್ಲೆಯ ಶಾಸನಗಳನ್ನು ಅವಲೋಕಿಸಿದಾಗ ಮಂತ್ರಿಪರಿಷತ್ತಿನ ಬಗ್ಗೆ ಮಹಾಪ್ರಾಧಾನ[೩೮] ದಂಡನಾಯಕ[೩೯] ಹೇರಿಲಾಳ. ಕನ್ನಡಸಂಧಿವಿಗ್ರಹ,[೪೦] ಹಿರಿಯ ಸಂಧಿವಿಗ್ರಹಿ[೪೧] ಕನ್ನಡಸಂಧಿವಿಗ್ರಹಿ[೪೨] ಮನೆವೆರ್ಗಡೆ[೪೩] ಹೀಗೆ ಮಂತ್ರಿಗಳನ್ನು ಶಾಸನಗಳಲ್ಲಿ ಉಲ್ಲೇಖಿಸುತ್ತದೆ.

ಅರಸನಿಂದ ನಿಯುಕ್ತಿಗೊಂಡ ಮಂತ್ರಿಗಳೆಲ್ಲರೂ ರಾಜಧಾನಿಯಲ್ಲಿ ಅರಸನೊಂದಿಗೆ ಇರುತ್ತಿರಲಿಲ್ಲ. ಆಗಾಗ ರಾಜ್ಯದ ಬೇರೆ ಬೇರೆ ಭಾಗಗಳಿಗೆ ಇವರಲ್ಲಿ ಹಲವರನ್ನು ಅಧಿಕಾರಿಗಳನ್ನಾಗಿ ನೇಮಿಸಿದ್ದರಿಂದ ಇವರು ರಾಜಧಾನಿಯಿಂದ ಹೊರಗೆ ರಾಜಪ್ರತಿನಿಧಿಗಳಾಗಿ ಹೋಗಬೇಕಾಗುತಿತ್ತು. ಆಡಳಿತದ ಅಷ್ಟು ಶಾಖೆಗಳನ್ನು ಒಬ್ಬೊಬ್ಬ ಮಂತ್ರಿ ನಿರ್ವಹಿಸುತ್ತಿದ್ದನೆಂದು ಹೇಳುವುದು ಕಷ್ಟ ಏಕೆಂದರೆ ಒಬ್ಬನೇ ಮಂತ್ರಿ ಅನೇಕ ಶಾಖೆಗಳನ್ನು ವಹಿಸಿಕೊಂಡಂತೆ ಅವರು ಧರಿಸುವ ಅಧಿಕಾರ ಸೂಚಕ ಪದವಿಗಳ ಮೇಲಿಂದ ತಿಳಿದುಬರುತ್ತದೆ. ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸಂಬಂಧಪಟ್ಟಂತೆ ಕ್ರಿ.ಶ.೧೦೩೮ರ ಹಾನಗಲ್ಲು ತಾಲೂಕಿನ ಗುಡಗುಡಿಯ ಶಾಸನದಲ್ಲಿ[೪೪] ಮಯೂರವರ್ಮನು ಹಾನಗಲ್ಲು-೫೦೦, ಆಳುವಾಗ ಅಂಗಲಿಕೆಯ ಸೋವರಾಶಿಜೀಯನಿಗೆ ಕೇತಗಾವುಂಡನಿಂದ ದಾನ ನೀಡಿದ ಉಲ್ಲೇಖವಿದೆ. ಕ್ರಿ.ಶ, ೧೦೪೪-೪೫ ಆಡೂರು ಶಾಸನದಲ್ಲಿ[೪೫] ದಂಡನಾಯಕ ಏಚಯ್ಯ, ವೀಚಯ್ಯ ಹಾಗೂ ಕದಂಬ ಮಹಾಮಂಡಳೇಶ ಮಯೂರವರ್ಮನ ಉಲ್ಲೇಖವಿದೆ. ಕ್ರಿ.ಶ. ೧೦೫೩ರ ನೀಲರಗಿ ಶಾಸನದಲ್ಲಿ[೪೬] ಮಹಾಮಂಡಳೇಶ್ವರರ ಅರಿಕೇಸರಿಯಿಂದ ಪಿರಿಯಕೆರೆ ಮತ್ತು ಕಲಿದೇವರ ಸಲುವಾಗಿ ನೀಲರಗಿ ಮುನ್ನೂರ್ರವರಿಗೆ ದತ್ತಿ ನೀಡಲಾಗಿದೆ. ಕ್ರಿ.ಶ. ೧೦೬೦ರ ಬ್ಯಾಡಗಿ ತಾಲೂಕಿನ ಮಲ್ಲೂರ ಶಾಸನದಲ್ಲಿ[೪೭] ನಾರ್ಗಾವುಂಡ ರಾಜಾದಿತ್ಯರಸ, ಆತನ ಸತಿ ಪಂಪಾದೇವಿ ಮತ್ತು ದಂಡನಾಯಕ ಗುಂಡಮರ ಉಲ್ಲೇಖವಿದೆ. ಕ್ರಿ.ಶ.೧೦೬೬ರ ಹಾವೇರಿ ತಾಲೂಕಿನ ದೇವಗೇರಿ ಶಾಸನದಲ್ಲಿ[೪೮]

ಖಚರವಂಶದ ಮಹಾಸಾಮಂತ ರಾಜಾಧಿತ್ಯ ಅರಸನ ಬಾಸೂರು-೧೪ ...ತ್ತಿದ್ದ ಗೋಯಿಂದೇಶ್ವರ ಮತ್ತು ಚಟ್ಟೇಶ್ವರ ದೇವಾಲಯಗಳಿಗೆ ನೀಡಿದ ಭೂದಾ...

ಕ್ರಿ.ಶ.೧೦೬೨ ರ ಹುಲಗೂರಿನ ಶಾಸನದಲ್ಲಿ[೪೯] ಮಹಾಸಾಮಂತ ಅಧಿಪತಿ ... ದಂಡನಾಯಕ ದೇವಪಾಲ ಅರಸನ ಉಲ್ಲೇಖವಿದೆ. ಕ್ರಿ.ಶ.೧೦೪೮ ಚಿಕ್ಕೆರೂರ ಶಾಸನದಲ್ಲಿ[೫೦] ೧ನೇ ಸೊಮೇಶ್ವರನ ಮಂತ್ರಿ ಕಾಳಿದಾಸಯ್ಯನ ಪ್ರಸ್ತಾಪವಿದೆ ಹಾಗೂ ಕ್ರಿ.ಶ.೧೦೭೨ರ ಹಾನಗಲ್ಲು ತಾಲೂಕಿನ ತಿಳುವಳ್ಳಿ ಶಾಸನದಲ್ಲಿ[೫೧] ದೊಡ್ಡಕೆರೆಯ ಏರಿಯ ರಚನೆಗಾಗಿ ಬಂಟರಿಂದ ದಾನ ಹಾಗೂ ಯಳವತ್ತಿಯ ದಂಡನಾಯಕ ಚರೋಜನ ಆದೇಶದಂತೆ ಕುಪ್ಪಟೂರು ಗ್ರಾಮದ ಭೂದಾನ ಬನವಾಸಿ-೧೨,೦೦೦ ಪೆರ್ಗಡೆ ಮಾದಿರಾಜನ ಆದೇಶದಂತೆ ತಿಳುವಳ್ಳಿಯಲ್ಲಿ ಮಾಳಪಯ್ಯ ಬಿಟ್ಟದತ್ತಿಯ ಉಲ್ಲೇಖವಿದೆ. ಕ್ರಿ.ಶ.೧೦೭೪ರ ನೀರಲಗಿ ಶಾಸನದಲ್ಲಿ[೫೨] ಭುವನೈಕ್ಯಮಲ್ಲ ಪಲ್ಲವಪೆರ್ಮಾನಡಿ ನೀಲರಿಗೆಯ ಮುನ್ನೂರ್ವರಿಗೆ ಪಾನುಂಗಲ್ಲ-೫೦೦, ಕಂಪಣ, ಎಳೆಂಬೆ-೭೦ರ ಬಸಲೂರು ಗ್ರಾಮದ ಮೇಲಾಕ್ಕೆ ಕೊಟ್ಟ ಉಲ್ಲೇಖವಿದೆ.

೨ನೇ ಸೋಮೇಶ್ವರನ ಕಾಲಕ್ಕೆ ಸಂಬಂಧಿಸಿದಂತೆ ಹಾವೇರಿ ತಾಲೂಕಿನ ದೇವಗೇರಿಯ ಕ್ರಿ.ಶ. ೧೦೭೫ರ ಶಾಸನದಲ್ಲಿ[೫೩] ದಂಡನಾಯಕ ವೆಣ್ಣಮೈಯ್ಯನಿಂದ ದೇವಿಗೇರಿಯ ಕಂಕಳೇಶ್ವರ ದೇವರಿಗೆ ಸುಂಕಗಳ ದಾನ ಪಡೆದ ಉಲ್ಲೇಖವಿದೆ. ಹಿರೇಕೆರೂರು ತಾಲೂಕಿನ ಬಾಳಂಬೀಡು ಶಾಸನದಲ್ಲಿ[೫೪] ಪೆರ್ಗಡೆ ಬಲದೇವಯ್ಯನ ಪ್ರಸ್ತಾಪವಿದೆ. ೬ನೇ ವಿಕ್ರಮಾದಿತ್ಯನ ಕಾಲಕ್ಕೆ ಸಂಬಂಧಿಸಿದಂತೆ ಮಹಾಮಂಡಳೇಶ್ವರ ವೀರಗಂಗೇಯರಾಯನ ಉಲ್ಲೇಖವಿದೆ.[೫೫] ಕ್ರಿ.ಶ. ೧೧೦೧ರ ಅಬಲೂರಿನ ಶಾಸನದಲ್ಲಿ ದಂಡನಾಯಕ ಗೋವಿಂದ ಅರಸನ ಉಲ್ಲೇಖವಿದೆ.[೫೬] ಕ್ರಿ.ಶ.೧೧೦೩ರ ಗೆಜ್ಜೆಹಳ್ಳಿಯ ಶಾಸನದಲ್ಲಿ[೫೭] ತೈಲಪನಿಂದ ಬೊಪ್ಪಗಾವುಂಡನಿಗೆ ಎಡರವಳ-೭೦, ಗೆಜ್ಜೆಹಳ್ಳಿ ಇನಾಮ ಗೊಪ್ಪ ಗಾವುಂಡನಿಂದ ಮೂಲಸ್ಥಾನಕ್ಕೆ ದಾನ ನೀಡಿರುವ ಉಲ್ಲೇಖವಿದೆ ಹಾಗೂ ಇದೇ ರೀತಿ ಕ್ರಿ.ಶ ೧೦೬೪ರ ಶಿಗ್ಗಾಂವಿ ತಾಲೂಕಿನ ಹೊಟ್ಟೂರು ಶಾಸನದಲ್ಲಿ[೫೮] ಮಹಾಮಂಡಳೇಶ್ವರ ಜೇಮರಸನು ಪೊಟ್ಟಿಯೂರ, ಹಳವಟ್ಟಿ, ನಿಟ್ಟಸಿಂಗಿ, ಅಣ್ಣಿಯೂರ, ಮೊದಲಾದ ಬಾಣಗಳನ್ನು ಕಟ್ಟುಂಬಿಟ್ಟಿಯನಣುಗು ಜೀವಿತದಿಂದ ಆಳುತ್ತಿದ್ದನು. ಕ್ರಿ.ಶ.೧೦೫೫ ರ ಶಿಗ್ಗಾಂವಿ ಶಾಸನದಲ್ಲಿ ಮಹಾಮಂಡಳೇಶ್ವರ ಹರಿಕೇಸರಿದೇವನ ಉಲ್ಲೇಖವಿದೆ.[೫೯] ಕ್ರಿ.ಶ ೧೧೩೧ರ ಬನ್ನಿಕೊಪ್ಪದ ಶಾಸನದಲ್ಲಿ ದಂಡನಾಯಕ ಹೊಲಕೇಶಿದೇವನ ಉಲ್ಲೇಖವಿದೆ.[೬೦] ಕ್ರಿ.ಶ.೧೧೨೧ರ ಬ್ಯಾಡಗಿ ತಾಲೂಕಿನ ಹಿರೇಹಳ್ಳಿ ಶಾಸನದಲ್ಲಿ[೬೧] ಸೋಮನಶೆಟ್ಟಿಯ ಉಲ್ಲೇಖವಿದೆ. ಕ್ರಿ.ಶ.೧೦೭೩ರ ಮತ್ತಿಹಳ್ಳಿ ಶಾಸನದಲ್ಲಿ[೬೨] ೨ನೇ ಸೊಮೇಶ್ವರನ ಉದಯಾದಿತ್ಯ ಹಿರಿಯ ಸಂಧಿವಿಗ್ರಹಿಯಾಗಿದ್ದು, ಕ್ರಿ.ಶ.೧೦೭೯ರ ಮತ್ತಿಹಳ್ಳಿ ಶಾಸನದಲ್ಲಿ[೬೩] ೬ನೇ ವಿಕ್ರಮಾದಿತ್ಯ ಮಹಾಸಾಮಂತಾಧಿಪತಿ ಕಾವರಸನನ್ನು ಹೇರಿಲಾಳ, ಕನ್ನಡಸಂಧಿ ವಿಗ್ರಹಿ ಎಂದು ಕರೆದಿದೆ.

ಬಹುಶಃ ಲಾಟ ಮತ್ತು ಕರ್ನಾಟಕ ದೇಶಗಳ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದ ಸಂಧಿವಿಗ್ರಹಿಯನ್ನು ಹೆಸರಿಸಲಾಗುತ್ತಿತ್ತೆಂದು ಅಭಿಪ್ರಾಯಪಡಲಾಗಿದೆ.

ಚಿನ್ನಮುಳಗುಂದದ ಕ್ರಿಶ ೧೧೨೩ ರ ಶಾಸನದಲ್ಲಿ[೧೪] ದಂಡನಾಯಕ ಮಲ್ಲರಸ ಮತ್ತು ಮಹದೇವರಸನ ಉಲ್ಲೇಖವಿದೆ. ಇವರೆಲ್ಲರೂ ೬ನೇ ವಿಕ್ರಮಾದಿತ್ಯನ ರಾಜ್ಯ ಆಡಳಿತದಲ್ಲಿ ಭಾಗವಹಿಸಿ ತಮ್ಮದೇ ಆದ ಆಡಳಿತವನ್ನು ನಡೆಸಿದ್ದಾರೆ.

೩ನೇ ಸೋಮೇಶ್ವರನ ಕಾಲಕ್ಕೆ ಸಂಬಂಧಿಸಿದಂತೆ ಕ್ರಿ.ಶ.೧೧೩೦-೪೪ರ ಶಾಸನದಲ್ಲಿ[೧೫] ಬರ್ಮಗಾವುಂಡ ಮತ್ತು ದಂಡನಾಯಕ ಮಲ್ಲಭಾವ ಅರಸರ ಉಲ್ಲೇಖವಿದೆ. ಕ್ರಿ.ಶ.೧೧೩೬ ಬೆಳವತ್ತಿ ಶಾಸನದಲ್ಲಿ[೧೬] ದಂಡನಾಯಕ ಪದ್ಮನಾಭಯ್ಯನ ಅಧಿಕಾರಿಗಳಾದ ಸುಂಕವೆರ್ಗಡೆ ನಾರಾಣಯ್ಯ ನಾಯಕಾದಿಗಳಿಂದ ಗೋಕುಳೇಶ್ವರನಿಗೆ ದಾನವನ್ನು ಉಲ್ಲೇಖಿಸಲಾಗಿದೆ. ೨ನೇ ಜಗದೇಕಮಲ್ಲನ ಕಾಲದ ಶಾಸನಗಳಲ್ಲಿ, ಕ್ರಿ.ಶ.೧೧೪೨ರ ಚಿನ್ನಮುಳಗುಂದ ಶಾಸನದಲ್ಲಿ[೧೭] ದಂಡನಾಯಕ ದೇವಧರಸಿಂಹ ಸೋಮೇಶ್ವರ ದೇವರಿಗೆ ಮುಗದ ಗ್ರಾಮದಲ್ಲಿ ಪನ್ನಾಯ ಮತ್ತು ಬೀರವಣ ಸುಂಕಗಳ ದಾನ ನೀಡಿದ ಉಲ್ಲೇಖಿಸಿದೆ. ಕ್ರಿ.ಶ.೧೧೪೮ ಯಳವಟ್ಟಿ ಶಾಸನದಲ್ಲಿ[೧೮] ದಂಡನಾಯಕ ಸೋವಿದೇವರಸನಿಂದ ಯಲವಟ್ಟಿಯ ರಾಮೇಶ್ವರ ದೇವರಿಗೆ ಭೂದಾನ ನೀಡಿದ ವಿಷಯವನ್ನು ದಾಖಲಿಸುತ್ತದೆ. ಕ್ರಿ.ಶ.೧೦೪೪ ಅಸುಂಡಿ ಶಾಸನದಲ್ಲಿ[೧೯] ವಡ್ಡರಾವುಳ ಮತ್ತು ಹೆರ್ಜುಂಕದ ದಂಡನಾಯಕ ಮಹಾಪ್ರಧಾನನ್ನು ಉಲ್ಲೇಖಿಸುತ್ತದೆ ಹಾಗೂ ದಂಡನಾಯಕ ಸೋವಿದೇವರಸನ ಪ್ರಸ್ತಾಪವಿದೆ. ಹೀಗೆ ಕಲ್ಯಾಣ ಚಾಲುಕ್ಯ ಮನೆತನದ ಮಂತ್ರಿಗಳು ತಮ್ಮದೇ ಆದ ರೀತಿಯಲ್ಲಿ ಆಡಳಿತ ನಡೆಸಿರುವುದು ಕಂಡುಬರುತ್ತದೆ. ರಾಷ್ಟ್ರಕೂಟರ ಕಾಲಕ್ಕೆ ಸಂಬಂಧಿಸಿದ ಹಿರೇಕೆರೂರು ತಾಲೂಕಿನ ಬೆಟ್ಟಕೆರೂರು ಕ್ರಿ.ಶ. ೧೨೫೦ ಶಾಸನದಲ್ಲಿ[೨೦] ಮಹಾಪ್ರಧಾನ ಇಮ್ಮಡಿ ಧೋರ ದಣ್ಣಾಯಕನಿಂದ ಕೆರೆವೂರ ಚಂದ್ರೇಶ್ವರಗೆ ಭೂದಾನ ನೀಡಿದ ಉಲ್ಲೇಖವಿದೆ. ಯಾದವ ವಂಶಕ್ಕೆ ಸಂಬಂಧಿಸಿದ ಶಾಸನಗಳನ್ನು ಅವಲೋಕಿಸಿದಾಗ ಕ್ರಿ.ಶ. ೧೨೯೨ರ ರಾಮಚಂದ್ರನ ಆಳ್ವಿಕೆಯ ರಾಣಿಬೆನ್ನೂರು ತಾಲೂಕಿನ ಚೌಡದಾನಪುರ ಶಾಸನದಲ್ಲಿ[೨೧] ಮಹಾಪ್ರಧಾನ ಸರ್ವಾಧಿಕಾರಿ ಪರುಶುರಾಮದೇವನ ಉಲ್ಲೇಖವಿದೆ. ಕ್ರಿ.ಶ. ೧೨೮೮ರ ಕಿತ್ತೂರು ಶಾಸನದಲ್ಲಿ[೨೨] ಮಹಾಮಂಡಳೇಶ್ವರ ಚಾವುಗೆದೇವರಾಣೆಯ ಉಲ್ಲೇಖವಿದೆ. ಕ್ರಿಶ ೧೨೬೧ರ ಕರೂರು ಶಾಸನದಲ್ಲಿ[೨೩] ಮಹಾಪ್ರಧಾನ ವೇದಶೆಟ್ಟಿಯ ಕಲಿದೇವ ವಿಘ್ನೇಶ್ವರ ನಾರಾಯಣ ಹಾಗೂ ಕ್ಷೇತ್ರಪಾಳ ದೇವಾಲಯಗಳಿಗೆ ಭೂದಾನ ನೀಡಿದ ಉಲ್ಲೇಖವಿದೆ. ಹೀಗೆ ದೇವಗಿರಿಯ ಯಾದವರು ರಾಜರ ಅಧೀನದಲ್ಲಿದ್ದುಕೊಂಡು ಆಳ್ವಿಕೆ ನಡೆಸಿದರು.

ನಂತರ ಹೊಯ್ಸಳ ಕಾಲಕ್ಕೆ ಸಂಬಂಧಪಟ್ಟಂತೆ 'ದುಷ್ಟ ಶಿಕ್ಷೆ ಶಿಷ್ಟರಕ್ಷೆ'ಯೇ ಕರ್ತವ್ಯವೆಂದು ಹೊಯ್ಸಳ ಅರಸರು ಭಾವಿಸಿದ್ದು ಶಾಸನಗಳಲ್ಲಿ ವ್ಯಕ್ತವಾಗಿದೆ. ರಾಜನ ಮಂತ್ರಿಗಳ ಸಂಖ್ಯೆ – ಐದು ಎಂದು ಪ್ರೊ. ಕೊಯ್ಹಿಲೋ ಹೇಳಿದ್ದಾರೆ. ಇವರಲ್ಲಿ ಪ್ರಧಾನ, ಮಹಾಪ್ರಧಾನ, ಮಹಾವಡ್ಡಾಧಿಕಾರಿ, ಸಂಧಿವಿಗ್ರಹಿ, ಸರ್ವಾಧಿಕಾರಿ ಎಂಬ ಮಂತ್ರಿಗಳು ಆಳ್ವಿಕೆ ನಡೆಸಿದ್ದು, ಅವರ ಶಾಸನಗಳಲ್ಲಿ ಉಲ್ಲೇಖವಾಗಿದೆ.[೭೪] ಕ್ರಿ.ಶ.೧೨೦೩ರ ರಾಣಿಬೆನ್ನೂರು ತಾಲೂಕಿನ ಬೆನಕನಕೊಂಡ ಶಾಸನದಲ್ಲಿ[೭೫] ಮಹಾಮಂಡಳೇಶ್ವರರ ಉಲ್ಲೇಖವಿದೆ. ನಂತರ ಕಲಚೂರಿಗಳಿಗೆ ಸಂಬಂಧಿಸಿದಂತೆ ಶಿಗ್ಗಾಂವಿ ತಾಲೂಕಿನ ಮಣಗಟ್ಟಿಯ ಕ್ರಿ.ಶ. ೧೧೬೫ರ ಶಾಸನದಲ್ಲಿ[೭೬] ಮಹಾಪ್ರಧಾನ ದಂಡನಾಯಕ ಕೇಶಿರಾಜಯ್ಯನ ಉಲ್ಲೇಖವಿದೆ[೭೪] ಕ್ರಿ.ಶ.೧೧೫೪ ರ ತಿಳುವಳ್ಳಿ ಶಾಸನದಲ್ಲಿ[೭೭] ದಂಡನಾಯಕ ಬೊಮ್ಮರಸನ ಉಲ್ಲೇಖವಿದೆ. ಕ್ರಿ.ಶ.೧೧೭೨ ಮುತ್ತೂರು ಶಾಸನದಲ್ಲಿ[೭೮] ದಂಡನಾಯಕ ಕೇಶಿಮಯ್ಯನ ಪ್ರಸ್ತಾಪವಿದ್ದು ಕ್ರಿ.ಶ.೧೧೬೩ರ ಬಾಳೂರು ಶಾಸನದಲ್ಲಿ[೭೯] ಗುತ್ತಿಯ ಮಂಡಳಿಕಬೊಮ್ಮಣ್ಣನ ಉಲ್ಲೇಖವಿದೆ ೧೨ನೇ ಶತಮಾನದ ಹಿರೇಬಾಸೂರಿನ ಶಾಸನದಲ್ಲಿ[೮೦] ಬೊಮ್ಮಣಯ್ಯ ದಂಡನಾಯಕ ಬನವಾಸಿಯನ್ನಾಳುವಾಗ ಅತ್ತಿರಾಜನು ವ್ಯಾಸಪುರದಲ್ಲಿ ವ್ಯಾಸೇಶ್ವರ ದೇವಾಲಯ ಕಟ್ಟಿಸಿ ದಾನ ನೀಡಿದ ಉಲ್ಲೇಖವಿದೆ. ನಂತರ ವಿಜಯನಗರದ ಕಾಲಕ್ಕೆ ಸಂಬಂಧಿಸಿದ ಹಾವೇರಿ ಜಿಲ್ಲೆಯ ಶಾಸನದಲ್ಲಿ ಮಂತ್ರಿಪರಿಷತ್ತಿನ ಬಗ್ಗೆ ಯಾವುದೇ ಮಾಹಿತಿ ಕಂಡು ಬರುವುದಿಲ್ಲ, ತದನಂತರ ಹಾನಗಲ್ಲು ಕದಂಬರು, ಗೋವೆಯಕದಂಬರು, ಗುತ್ತಿಯಗುತ್ತರು ಇವರುಗಳ ಬಗ್ಗೆ ಯಾವುದೇ ಶಾಸನಗಳಲ್ಲಿ ಮಂತ್ರಿಪರಿಷತ್ತಿನ ಉಲ್ಲೇಖ ಇಲ್ಲದಿರುವುದು ದುರ್ದೈವದ ಸಂಗತಿಯಾಗಿದೆ.

## ಇತರ ಅಧಿಕಾರ ವರ್ಗ:

ಆಡಳಿತ ವ್ಯವಸ್ಥೆ ಸುಸೂತ್ರವಾಗಿ ನಡೆಯಬೇಕಾದರೆ ಪ್ರಭುವರ್ಗದವರ ಆದೇಶದ ಮೇರೆಗೆ ಆಡಳಿತ ಕಾರ್ಯವನ್ನು ನಿರ್ವಹಿಸುವ 'ಅಧಿಕಾರಿವರ್ಗ' ಅತ್ಯವಶ್ಯಕ ಪ್ರಾಚೀನ ಕಾಲದಿಂದಲೂ ಆಡಳಿತ ನಿರ್ವಹಣೆಯ ಹಿತದೃಷ್ಟಿಯಿಂದ ಕೇಂದ್ರಾಡಳಿತ ಮತ್ತು ಗ್ರಾಮಾಡಳಿತಗಳು ಎಂಬ ಎರಡು ರೀತಿಯ ಆಡಳಿತ ಪದ್ಧತಿ ರೂಢಿಯಲ್ಲಿತ್ತು. ಕೇಂದ್ರಾಡಳಿತದಲ್ಲಿ ರಾಜನು ವಿವಿಧ ಇಲಾಖೆಗಳಿಗೆ ಅಧಿಕಾರಿಗಳನ್ನು ನೇಮಿಸುತ್ತಿದ್ದರು ಈ ರೀತಿ ನೇಮಿಸುವಾಗ ಅವರ ವಿದ್ಯೆ, ಪ್ರತಿಭೆ, ಚಾಣಾಕ್ಷತನ ಮತ್ತು ಬುದ್ಧಿವಂತಿಕೆಯನ್ನು ಗಮನದಲ್ಲಿಟ್ಟುಕೊಂಡು ನೇಮಿಸುತ್ತಿದ್ದರು ಇವರು ಒಳ್ಳೆಯ ಗುಣ, ನಡತೆ ಪ್ರಾಮಾಣಿಕತೆ, ದಕ್ಷತೆ, ನಿಸ್ವಾರ್ಥ ಸೇವೆಯಿಂದ ಅಧಿಕಾರ ವರ್ಗದಲ್ಲಿ ಕಾರ್ಯ ನಿರ್ವಹಿಸಬೇಕಾಗಿತ್ತು. ಇದರಿಂದ ಶಾಸನಗಳಲ್ಲಿ ಅಧಿಕಾರಿಗಳಿಗೆ ಸಂಬಂಧಪಟ್ಟಂತೆ ಮಹಾಮಾತ್ಯ, ಮಹಾಪ್ರಧಾನ, ಮಹಾಸಾಮಂತಾಧಿಪತಿ, ಮಹಾಪ್ರಚಂಡ, ದಂಡನಾಯಕ, ಸೇನಭೋವ, ಕುಲಕರ್ಣಿ, ತಳವಾರ ಎಂಬ ಹುದ್ದೆಗಳನ್ನು ಸೂಚಿಸುತ್ತವೆ.[೮೧]

ಹಾವೇರಿ ಜಿಲ್ಲೆಯ ಶಾಸನಗಳನ್ನು ಅವಲೋಕಿಸಿದಾಗ ಅಧಿಕಾರಿ ವರ್ಗಕ್ಕೆ ಸಂಬಂಧಪಟ್ಟಂತೆ ಕ್ರಿ.ಶ. ೯೪೪ರ ಬಂಕಾಪುರ ಶಾಸನದಲ್ಲಿ[೮೨] ಬನವಾಸಿ ಅಧಿಕಾರಿ ಶೋಭನರಸನ ಉಲ್ಲೇಖವಿದೆ. ಕ್ರಿ.ಶ ೧೦೩೭ರ ಹುಟ್ಟೂರು ಶಾಸನದಲ್ಲಿ[೮೩] ಅಕ್ಕದೇವಿ ಮತ್ತು ಮಯೂರವರ್ಮನು ಬನವಾಸಿ ನಾಡನ್ನು ಆಳುವಾಗ ಪೊಟ್ಟೆಯೂರ ಕಂಗೆರೆಗೆ ಸುಂಕಾಧಿಕಾರಿಗಳಿಂದ ಸುಂಕದಾನ ಮಾಡಿದ ವಿಷಯದ ಪ್ರಸ್ತಾಪವಿದೆ. ಕ್ರಿ.ಶ ೧೦೬೩ರ ಬಂಕಾಪುರದ ಶಾಸನದಲ್ಲಿ[೮೪] ಪೆಡೆವಾಳ ಬೀರಯ್ಯ, ಹಾಲಿಮಯ್ಯ ಹಾಗೂ ಶ್ರೀಧರಮಯ್ಯ ಪೆರ್ಗಡೆಗಳಿಂದ ಬಂಕಾಪುರದ ಇಂದ್ರೇಶ್ವರ ದೇವಾಲಯಕ್ಕೆ ಸುಂಕದಾನದ ಉಲ್ಲೇಖವಿದೆ. ಕ್ರಿ.ಶ.೧೦೬೨ರ ಹುಲಗೂರು ಶಾಸನದಲ್ಲಿ[೮೫] ಮಹಾಸಾಮಂತಾಧಿಪತಿ, ಮಹಾಪ್ರಚಂಡ ದಂಡನಾಯಕ, ದೇವಪಾಲ ಅರಸನು ಪುಲ್ಲಂಗೂರನ್ನು ಆಳುತ್ತಿರುವಾಗ ಕೆರೆಗಳಿಗೆ ನೀಡಿದ ಭೂದಾನದ ಉಲ್ಲೇಖವಿದೆ. ಕ್ರಿ.ಶ.೧೦೭೨ರ ತಿಳುವಳ್ಳಿ ಶಾಸನದಲ್ಲಿ[೮೬] ಮನೆವೆರ್ಗಡೆ ದಂಡನಾಯಕ ತನ್ನ ಅಧಿಕಾರಿಯಿಂದ ತಿಳುವಳ್ಳಿಯ ಆಗ್ರಹಾರದ ಮಹಾಜನರಿಗೆ ಪೆರ್ಜುಂಕಾಧಿ ಸುಂಕಗಳ ದಾನ ನೀಡಿದ ಉಲ್ಲೇಖವಿದೆ. ಕ್ರಿ.ಶ.೧೦೭೭ರ ಶಾಸನದಲ್ಲಿ[೮೭] ಮಣಲೆಯ ಜಯಕೇಶಿ ಅರಸನಾಳ್ಗಾಂವುಂಡನಿದ್ದಾಗ ಅಧಿಕಾರಿಗಳಿಂದ ಕೋಹಿಲೇಶ್ವರ ದೇವರಿಗೆ ಅನ್ನದಾನ ಮಾಡಿಸಿದ ಮಾಹಿತಿ ಲಭ್ಯವಾಗಿದೆ. ಕ್ರಿ.ಶ ೧೦೮೮ರ ತೇದಿ ರಹಿತ ಕಲಕೇರಿ ಶಾಸನದಲ್ಲಿ[೮೮] ದಂಡನಾಯಕ ಗೋವಿಂದ ಅರಸನ ಅಧಿಕಾರಿ ಕಲಕೇರಿಯ ಜಯಸಿಂಹದೇವನು ಸೊಮೇಶ್ವರದೇವರಿಗೆ ದಾನ ನೀಡಿದ ಉಲ್ಲೇಖವಿದೆ.

ಕ್ರಿ.ಶ.೧೧೦೯ರ ನೂಲಗೇರಿ ಶಾಸನದಲ್ಲಿ[೮೯] ವಡ್ಡರಾವುಳ ಮಹಾದೇವ ದಂಡನಾಯಕರು ಲಕ್ಕದಡಕೆಯ ಸುಂಕವನ್ನು ದವಸದ ಹೇರಿಗೆ ೧೧ಕ್ಕೆ ೧ ಹೇರನ್ನು ಶ್ರೀ ಮದುಗಜೇಶ್ವರ, ರಂಗಭೋಗ, ಅಂಗಭೋಗ, ದೀಪ ನೈವೇದ್ಯ ಮೊದಲಾದವುಗಳಿಗೆ ಬಿಟ್ಟ ಉಲ್ಲೇಖವಿದೆ. ಕ್ರಿ.ಶ.೧೧೪೮ರ ಯಳವಟ್ಟಿಯ ಶಾಸನದಲ್ಲಿ[೯೦] ಮಹಾಪ್ರಧಾನ ದಣ್ಣಾನಾಯಕನು ಸೋವಿದೇವರಸನ ಉಲ್ಲೇಖವಿದೆ. ಕ್ರಿ.ಶ.೧೧೬೪ರ ಮೇದೂರು ಶಾಸನದಲ್ಲಿ[೯೧] ಸಿಂಗೆಯ ದಣ್ಣನಾಯಕನು ಹಣಜಿಯ ಮೇಲೆ ಧಾಳಿಮಾಡಿದಾಗ ಮೇದೂರು ನಾಳ್ಪ್ರಭು ಸಾಮಂತ ಕಾಳಗೌಡ ಬಿಡಗೂರನ್ನಾಳಿದ ಸೀಮೆಯಲ್ಲೆ ಹೋರಾಡಿದ ಉಲ್ಲೇಖವಿದೆ. ಕ್ರಿ.ಶ.೧೧೮೮ರ ಹರಳಹಳ್ಳಿ ಶಾಸನದಲ್ಲಿ[೯೨] ಮಹಾಪ್ರಧಾನ ದಂಡನಾಯಕ ದೇಸಿರಾಜನಿಂದ ದಾಸೇಶ್ವರ ದೇವಾಲಯದ ನಿರ್ಮಾಣ ಹಾಗೂ ಭೂದಾನದ ಉಲ್ಲೇಖವಿದೆ. ೧೧-೧೨ನೇ ಶತಮಾನದ[೯೩] ಪೆರ್ಗಡೆ ಪರಶುರಾಮಯ್ಯ ಸೇನಭೋವ ಚಂಡಿಮಯ್ಯಾಧಿಗಳು ಶಂಕರನಾರಾಯಣ ದೇವರಿಗೆ ಬಿಟ್ಟ ಶುಲ್ಕದ ಉಲ್ಲೇಖವಿದೆ. ಕ್ರಿ.ಶ ೧೧-೧೨ನೇ ಶತಮಾನದ ಕಣವಿಸಿದ್ದಗೇರಿ ಶಾಸನದಲ್ಲಿ[೯೪] ಮಹಾಮಂಡಳೇಶ್ವರ ಪಾಂಡ್ಯದೇವ ಅರಸ ಮತ್ತು ಆತನ ಅಧಿಕಾರಿ ಕುಮಾರಚಾವುಂಡರಿಂದ ಭಗವತಿಘಟ್ಟದ ಜಮದಗ್ನಿ ರಾಮೇಶ್ವರದೇವರಿಗೆ ದಾನ ನೀಡಿದ ಉಲ್ಲೇಖವಿದೆ. ತೇದಿರಹಿತ

ಇಟಗಿ ಶಾಸನದಲ್ಲಿ[೫] ಮಹಾಪ್ರಧಾನ ಹೆಗ್ಗಡೆ ಕೇಶಿರಾಜನಿಂದ ಗಂಗಸಮುದ್ರ ಕೆರೆಗೆ ಭೂದಾನ ನೀಡಿದ ಉಲ್ಲೇಖವಿದೆ.

ಕ್ರಿ.ಶ.೮೫೯ರ ಅರಿಷಿನಗುಪ್ಪೆಯ ಶಾಸನದಲ್ಲಿ[೬] ಬನವಾಸಿ-೧೨೦೦೦ದ ಅಧಿಕಾರಿ ಬಂಕೆಯನಿಂದ ಕಂಕಾಳಗೋರವನಿಗೆ ಕಿರುಗುಪ್ಪದೂರ ಗ್ರಾಮದಾನ ನೀಡಿದ ಉಲ್ಲೇಖವಿದೆ. ರಾಷ್ಟ್ರಕೂಟರ ಕಾಲಕ್ಕೆ ಸಂಬಂಧಿಸಿದಂತೆ ಕ್ರಿ.ಶ.೯೪೩ರ ೩ನೇ ಕೃಷ್ಣನ ಶಾಸನದಲ್ಲಿ[೭] ಅರಸನ ಅಧಿಕಾರಿಯಾದ ಭೀಮಪ್ಪರಸನ ಉಲ್ಲೇಖವಿದೆ.

ಯಾದವ ಕನ್ನರನ ಕ್ರಿ.ಶ.೧೨೫೪ರ ಬುಡಮಳ್ಳಿ ಶಾಸನದಲ್ಲಿ[೮] ಅರಸನು ಅಧಿಕಾರಿಗಳಾದ ಬೊಮ್ಮದೇವ ಮತ್ತು ಪಟ್ಟಮದೇವರು ತಳಗವಳ್ಳಿಗೌಡಿಕೆಯನ್ನು ಲಕುಮಗಾವುಂಡನಿಗೆ ಕೊಟ್ಟ ವಿಷಯದ ಪ್ರಸ್ತಾಪವಿದೆ. ಕ್ರಿ.ಶ.೧೨೩೫ ರಾಣಿಬೆನ್ನೂರಿನ ಶಾಸನದಲ್ಲಿ[೯] ಸರ್ವಾಧಿಕಾರಿ ಅಚರಸನು ಭಿನ್ನವೂರ ಮೂಲಸ್ಥಾನ ಕಲಿದೇವರ ದೇವಸ್ಥಾನಕ್ಕೆ ನೀಡಿದ ದಾನದ ಉಲ್ಲೇಖವಿದೆ. ಹೀಗೆ ಅಧಿಕಾರಿ ವರ್ಗವು ರಾಜ, ರಾಣಿ ಮತ್ತು ಮಂತ್ರಿಮಂಡಲ ಮುಂದುವರೆದ ಭಾಗವಾಗಿದ್ದು ಶಾಸನದಲ್ಲಿ ಉಲ್ಲೇಖಿತ ಅಧಿಕಾರಿಗಳ ಮಾಹಿತಿಯನ್ನು ಇಲ್ಲಿ ನೀಡಲಾಗಿದೆ, ಹೀಗಾಗಿ ಆಡಳಿತಕ್ಕೆ ಒಳಪಟ್ಟ ಸಾಮಂತ ಅಧಿಕಾರಿಗಳು ದಂಡನಾಯಕರು ಸೇನಭೋವ, ಮಹಾಪ್ರಧಾನಿ, ದಂಡನಾಯಕ ಮತ್ತು ಇತರ ಹೆಸರುಗಳನ್ನು ಹೊಂದಿದ್ದು, ಇವರು ಆಡಳಿತದಲ್ಲಿ ತಮ್ಮದೇ ಆದ ಕಾರ್ಯವನ್ನು ನಿರ್ವಹಿಸಿರುವುದು ಕಂಡುಬರುತ್ತದೆ.

**ಸೈನ್ಯಾಡಳಿತ:**

ಅರಸರಲ್ಲಿ ಇದ್ದ ಸ್ವ-ಸಾಧನ ಆಕಾಂಕ್ಷೆ ಮತ್ತು ಬಲಸಂಮೃದ್ಧಿ ಮುಂತಾದ ಕಾರಣಗಳಿಂದಾಗಿ ನೆರೆವರೆಯ ರಾಜ್ಯಗಳ ಅರಸರಲ್ಲಿ ಪರಸ್ಪರ ತಿಕ್ಕಾಟಗಳು ಅಥವಾ ಕಾದಾಟಗಳು ಆಗಾಗ್ಗೆ ಸಂಭವಿಸುತ್ತಿದ್ದವು. ಆದ್ದರಿಂದ ಸಪ್ತಾಂಗ ವ್ಯವಸ್ಥೆಯಲ್ಲಿ ಒಂದಾದ ಸೈನ್ಯಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದ್ದು **"ಸೈನಾತ್ ವಿನಾ ನೈವ ರಾಜ್ಯಂ ನ ಧನಂ ನ ಪರಾಕ್ರಮ"** ಸೈನ್ಯವಿಲ್ಲದೆ ರಾಜ್ಯವಿಲ್ಲ, ಧನವಿಲ್ಲದೆ ಪರಾಕ್ರಮವಿಲ್ಲ ಎಂದು ನಂಬಲಾಗಿತ್ತು.[೧೦೦] ಈ ದೃಷ್ಟಿಯಿಂದ ಸೈನ್ಯಾಡಳಿತದಲ್ಲಿ ಸಾಮ, ದಾನ, ದಂಡ, ಭೇದಗಳೆಂಬ ಉಪಾಯಗಳನ್ನು ಕೈಗೊಂಡು ಅವು ಫಲಿಸದಿದ್ದಾಗ ದಂಡೋಪಾಯವನ್ನು ಅನುಸರಿಸಬೇಕೆಂದು ನೀತಿ ಗ್ರಂಥಗಳಲ್ಲಿ ಉಲ್ಲೇಖವಾಗಿರುವುದನ್ನು ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ಹಾವೇರಿ ಜಿಲ್ಲೆಯ ಶಾಸನಗಳಲ್ಲಿ ಉಕ್ತವಾಗಿರುವಂತೆ ಕ್ರಿ.ಶ.೧೧೧೫ರ ಹಾವೇರಿ ತಾಲೂಕು ಹತ್ತಿಮತ್ತೂರಿನ ಶಾಸನದಲ್ಲಿ[೧೦೧] ಮಹಾಪ್ರಧಾನನಾದ ಅನಂತಮಯ್ಯ ದಂಡಾಧೀಶನ ಉಲ್ಲೇಖವಿದೆ. ಇದರಲ್ಲಿ ಶ್ರೀಪತಿ ದಂಡನಾಯಕನ ಪಾದಪದ್ಮೋಪ ಜೀವಿಯಾಗಿ ಕೆಲಸ ನಿರ್ವಹಿಸಿರುವುದು ಕಂಡುಬರುತ್ತದೆ ಹಾಗೂ ಕ್ರಿ.ಶ. ತೇದಿ ರಹಿತ ಮತ್ತೊಂದು ಶಾಸನದಲ್ಲಿ[೧೦೨] ಈಶ್ವರ ದಂಡನಾಯಕನ

ಪ್ರಸ್ತಾಪವಿದ್ದು ಕ್ರಿ.ಶ.೧೦೮೮-೮೯ರ ಶಾಸನದಲ್ಲಿ[೧೦೩] ದಂಡನಾಯಕನಾದ ಚಾವುಂಡಯ್ಯನ ಉಲ್ಲೇಖಿಸುತ್ತದೆ. ಚಕ್ರವರ್ತಿಯ ಪಾದಪದ್ಮೋಪ ಜೀವಿಯಾದ ಈತನನ್ನು ಕುರಿತು 'ಶ್ರೀಮತ್ಪಟಸಾಹಣಿ -' ದಣ್ಣನಾಯಕಂಚಾವುಂಡಮಯಂಗಳ - ಅಗ್ರಹಾರಂಪತ್ತಿಯ ಮರ್ತ್ತವೂರ ಮನಣೂಗ - ಜೀವಿತಂಆಗಿ ಸೂ-ಖ-ದೀನಳೊತ್ತಮರೇ' ಎಂದು ಹೇಳಲಾಗಿದೆ.

ಹೀಗೆ ಸೈನಿಕ ವ್ಯವಸ್ಥೆಯಲ್ಲಿ ದಂಡನಾಯಕ, ಸಂಧಿವಿಗ್ರಹಿ, ಮಹಾಪ್ರಧಾನ, ದಂಡನಾಯಕ ಹೆರಿಲಾಳ, ಕನ್ನಡ ಸಂಧಿವಿಗ್ರಹಿ, ಹಿರಿಯಸಂಧಿವಿಗ್ರಹಿ ಮನೆವೆರ್ಗಡೆ ಹೀಗೆ ಇದ್ದ ಸಂದರ್ಭದಲ್ಲಿ ಅನೇಕ ಸೈನ್ಯಗಳನ್ನು ವಿಭಾಗಿಸಲಾಗಿ ಒಂದೊಂದು ವಿಭಾಗಕ್ಕೆ ಸೇನಾಧಿಪತಿಗಳು ಮೊದಲಾದ ಅಧಿಕಾರಿಗಳು ಇರುತ್ತಿದ್ದರು. ಇದರಿಂದ ರಾಜನೇ ಮುಂದೆ ನಿಂತು ಸೈನ್ಯವನ್ನು ಸಜ್ಜುಗೊಳಿಸಿ ಶತೃಗಳನ್ನು ಸೆದೆಬಡಿಯುತ್ತಿದ್ದನು. ಸೈನ್ಯ ಯುದ್ಧಕ್ಕೆ ಹೊರಟಾಗ ಅದರ ಅವಶ್ಯಕತೆಯನ್ನು ನಿರ್ವಹಿಸಲು ದೊಡ್ಡವ್ಯವಸ್ಥೆ ಸಿದ್ಧವಾಗುತ್ತಿತ್ತು. ಒಟ್ಟಿನಲ್ಲಿ ಸೈನ್ಯದ ಬಲವೆ ರಾಜ್ಯದ ಬಲವಾಗಿದ್ದು, ಅದನ್ನು ಅತ್ಯುನ್ನತ ಮಟ್ಟದಲ್ಲಿ ಶ್ರಮಿಸುತ್ತಿದ್ದರು. ಮತ್ತು ತಮ್ಮ ರಾಜ್ಯದ ಉತ್ಪಾದನೆಯ ಬಹುಭಾಗವಾಗಿ ಉಪಯೋಗಿಸುತ್ತಿದ್ದರು.

**ಪ್ರಾಂತ್ಯಾಡಳಿತ:**

ಭೌಗೋಳಿಕವಾಗಿ ವಿಸ್ತಾರವಾಗಿದ್ದ ರಾಜ್ಯವನ್ನು ಆಡಳಿತದ ಸೌಕರ್ಯಕ್ಕಾಗಿ ವಿಂಗಡಿಸುವುದು ಪ್ರಾಚೀನ ಕಾಲದಿಂದಲೂ ನಡೆದುಬಂದ ಪದ್ಧತಿ ಸಾಮ್ರಾಜ್ಯವನ್ನು ವಿಭಾಗಗಳಾಗಿ ವಿಂಗಡಿಸಿಕೊಂಡು ಆಳುವುದು ಕದಂಬರ ಕಾಲಕ್ಕಾಗಲೇ ಪ್ರಾರಂಭವಾಗಿತ್ತು ಎಂದು ವಿದ್ವಾಂಸರಾದ ಮೋರೆಸ್ ಹೇಳಿದ್ದಾರೆ[೧೦೪] ಹಾಗೂ ಪ್ರಾಚೀನ ಕಾಲದಲ್ಲಿ ಆಹಾರ, ಮಂಡಳ, ಭುಕ್ತಿ, ವಿಷಯ (ನಾಡು), ದೇಶ ಎಂಬುದಾಗಿ ವಿಭಾಗಗಳನ್ನಾಗಿ ಮಾಡಿಕೊಳ್ಳಲಾಗಿತ್ತು. ರಾಷ್ಟ್ರಕೂಟರ ಕಾಲದಲ್ಲಿ ರಾಷ್ಟ್ರ ವಿಷಯ (ನಾಡು) ಗ್ರಾಮಗಳೆಂಬ ವಿಭಾಗಗಳು ರೂಢಿಯಲ್ಲಿದ್ದವು.[೧೦೫] ಹಾವೇರಿ ಜಿಲ್ಲೆಯ ಪ್ರದೇಶವು ಹಲವು ವಿಭಾಗ, ಉಪವಿಭಾಗಗಳ ಪ್ರಾಂತ್ಯಗಳ ಆಡಳಿತ ವ್ಯಾಪ್ತಿಗೆ ಒಳಪಟ್ಟಿದ್ದ ಸಂಗತಿಯು ಇಲ್ಲಿ ದೊರೆಯುವ ಶಾಸನಾಧಾರಗಳಿಂದ ತಿಳಿಯಲ್ಪಡುತ್ತದೆ. ಅಂದರೆ ಬನವಾಸಿ-೧೨೦೦೦, ಎಡವಟ್ಟ-೭೦, ರಟ್ಟಪಳ್ಳಿ-೧೦೦, ಪಾನುಂಗಲ್ಲು-೫೦೦, ನಾಗರಖಂಡ-೭೦, ಮಾಸೂರು-೧೨, ಮೂಗುಂದ-೧೨, ಸಾಂತಳಿಗೆ-೧೦೦೦, ಎಡವಲ-೭೦, ಪುಲಿಗೆರೆ-೩೦೦, ಬೆಳ್ವಲ-೩೦೦, ಮಾಸವೂರ-೧೪೦ ಹೀಗೆ ಪ್ರಾಂತೀಯ ಆಡಳಿತ ವಿಭಾಗ ಮತ್ತು ಉಪವಿಭಾಗಗಳಾಗಿವೆ. ಈ ಪ್ರದೇಶಗಳನ್ನು ಒಳಗೊಂಡಿದ್ದು, ಜೊತೆಗೆ ಭೂಮಿಯ ಇಲ್ಲವೇ ಗ್ರಾಮಗಳ ದಾನಗಳನ್ನು ಹೇಳುವಾಗ ಅವು ಯಾವ ಆಡಳಿತ ಪ್ರಾಂತ್ಯಗಳಾಗಿದ್ದವು ಎಂದು ತಿಳಿಸುತ್ತವೆ. ಈ ಪ್ರಾಂತ್ಯಗಳು ಹಾವೇರಿ ಜಿಲ್ಲೆಯ ಹಾವೇರಿ ಶಿಗ್ಗಾಂವ್, ಹಾನಗಲ್, ಬ್ಯಾಡಗಿ, ರಾಣೆಬೆನ್ನೂರು, ಹಿರೇಕೆರೂರು, ಸವಣೂರು ಈ ಪ್ರಾಂತ್ಯಗಳಲ್ಲಿ ಕಂಡುಬರುತ್ತವೆ. ಕ್ರಿ.ಶ ೮ನೇ ಶತಮಾನದ ಹಿರೇಕೆರೂರು

ತಾಲ್ಲೂಕಿನ ಕಚವಿಯ ಶಾಸನದಲ್ಲಿ[೧೦೭] ಮದೆಯೂರು ಮಾರನು ಬನವಾಸಿ-೧೨೦೦೦ ಮಳೆಹರನಿಂದ ಕಚವಿಯ ಮಾರಬ್ಬೆದೇವಿಗೆ ತುಪ್ಪೆದುರೆಯ ದಾನ ನೀಡಿದ ಉಲ್ಲೇಖವಿದೆ. ೯ನೇ ಶತಮಾನದ ಹಲಸೂರು ಶಾಸನದಲ್ಲಿ[೧೦೭] ಲೋಕಟೆ ಬನವಾಸಿ-೧೨೦೦೦ ಆಳುವಾಗ ಅಣ್ಣಿಗ ನಾಳ್ಗಾವುಂಡನಾಗಿದ್ದ ಮಾರವಯ್ಯ ಪೇರ್ಗಡೆಯಾಗಿದ್ದ ಉಲ್ಲೇಖವಿದೆ. ಕ್ರಿ.ಶ ೧೯೭೫ರ ಹಾನಗಲ್ಲು ತಾಲ್ಲೂಕಿನ ಕಾಸನೂರು ಶಾಸನದಲ್ಲಿ[೧೦೮] ಬನವಾಸಿ ನಾಡನ್ನು ಆಳುವಾಗ ಕಣ್ಣಯ್ಯ ಎಡವಳು-೭೦ ಆಗುವ ಪೊಲೆಗ ಮತ್ತು ಸಿಂಘನನ ಉಲ್ಲೆಖವಿದೆ. ಕ್ರಿ.ಶ ೯೭೦ರ ಹುಲಗೂರು ಶಾಸನದಲ್ಲಿ[೧೦೯] ಗುತ್ತಿಗೆಯ ಗಂಗ ಪುಲಿಗೆರೆ-೩೦೦ ಆಳುವಾಗ ಆತನ ಹೆಂಡತಿ ಅಂಕಬ್ಬರಸಿಯಳಿಂದ ಪುಲ್ಲುಂಗೂರಬ್ಬೆ ದೇವತೆಗೆ ಭೂಮಿ ಮತ್ತು ಸುಂಕದಾನ ಮಾಡಿದ ಉಲ್ಲೆಖವಿದೆ. ಕ್ರಿ.ಶ ೯೧೬ರ ಇಟಗಿ ಶಾಸನದಲ್ಲಿ[೧೧೦] ಬನವಾಸಿ ನಾಡನ್ನಾಳುವ ಧೋರ ಹಾಗೂ ಕುಡುವಣ್ಣ ಗಂಡ-೭೦, ಇಟ್ಟಗಿ-೩೦ರ ನಾಳ್ಗವುಂಡ ಅಟ್ಟೂಗ್ಗಣ್ಣರ ಉಲ್ಲೇಖವಿದೆ. ೧೧ನೇ ಶತಮಾನದ ರಾಣಿಬೆನ್ನೂರಿನ ಹೊನ್ನತಿ ಶಾಸನದಲ್ಲಿ[೧೧೧] ಲೋಕಟೆ ಬನವಾಸಿಯನ್ನು ಆತನ ಮಗ ಕಲಿವಿಟ್ಟನು ಪುನ್ನವಂತಿ-೧೨ ಆಳುವಾಗ, ನಾಟ್ಗಾವುಂಡ ಆಯಚಣ್ಣಾದಿಗಳಿಂದ ಭೂದಾನ ಮಾಡಿದ ಉಲ್ಲೇಖವಿದೆ. ಹೀಗೆ ರಾಷ್ಟ್ರಕೂಟರ ಮೂರನೇ ಗೋವಿಂದನ ಕಾಲದಿಂದ ಹಿಡಿದು ವರ್ಷನವರೆಗೆ ಅಕಾಲ ಆಳ್ವಿಕೆಯನ್ನು ಮಾಡಿದ್ದು, ಗಮನಾರ್ಹವಾದ ಸಂಗತಿಯಾಗಿದೆ. ನಂತರ ಕಲ್ಯಾಣ ಚಾಲುಕ್ಯರ ಒಂದನೇ ಸೋಮೇಶ್ವರನ ಕಾಲದ ಕ್ರಿ.ಶ ೮೬೬ರ ಶಿಗ್ಗಾಂವಿ ಶಾಸನದಲ್ಲಿ[೧೧೨] ಪುಲಿಗೆರೆ-೩೦೦ ಆಡಳಿತ ಕೇಂದ್ರವಾಗಿತ್ತು. ಕ್ರಿ.ಶ ೧೦೨೬ರ ಕಬ್ಬೂರ ಶಾಸನದಲ್ಲಿ[೧೧೩] ಬಾಸೂರ-೧೪೦ರ ಪ್ರಸ್ತಾಪವಿದೆ. ಕ್ರಿ.ಶ ೧೦೩೮ರ ಜಯಸಿಂಹನ ಆಳ್ವಿಕೆಯ ಕಾಲದ ಗುಡಗುಡಿ ಶಾಸನದಲ್ಲಿ[೧೧೪] ಪಾನಂಗಲ್ಲು-೫೦೦ ಆಡಳಿತ ವಿಭಾಗದ ಪ್ರಸ್ತಾಪವಿದೆ. ಕ್ರಿ.ಶ ೧೦೪೫ರ ಸೋಮೇಶ್ವರ ಆಳ್ವಿಕೆಯ ಕೋಳೂರ ಶಾಸನದಲ್ಲಿ[೧೧೫] ಬಾಸೂರು-೧೪೦ರ ಪ್ರಸ್ತಾಪವಿದೆ. ಕ್ರಿ.ಶ ೧೦೪೭ರ ಬೆಳವತ್ತಿಯ ಶಾಸನದಲ್ಲಿ[೧೧೬] ಬನವಾಸಿ-೧೨೦೦೦, ಹಾನುಗಲ್ಲು-೫೦೦ ಎಂಬ ಆಡಳಿತ ಪ್ರಾಂತ್ಯಗಳ ಉಲ್ಲೇಖವಿದೆ. ಕ್ರಿ.ಶ ೧೧೦೩ರ ಗೆಜ್ಜೆಹಳ್ಳಿಯ ಶಾಸನವು[೧೧೭] ಆರನೇ ವಿಕ್ರಮಾದಿತ್ಯನ ಕಾಲಕ್ಕೆ ಸಂಬಂಧಿಸಿದ್ದು ಎಡವಳ-೭೦ರ ಪ್ರಸ್ತಾಪವಿದೆ. ಕ್ರಿ.ಶ ೧೧೧೧ ಮೇದೂರು ಶಾಸನವು[೧೧೮] ವಿಕ್ರಮಾದಿತ್ಯನ ದಂಡನಾಯಕನಾದ ಗೋವಿಂದ ಅರಸನು ಬನವಾಸಿ-೧೨೦೦೦ ಮತ್ತು ಸಾಂತಳಿಗೆ-೧೦೦೦ ಆಳುತ್ತಿದ್ದ ಪ್ರದೇಶದ ಪ್ರಸ್ತಾಪವಿದೆ. ಹೀಗೆ ಕಲ್ಯಾಣದ ಚಾಲುಕ್ಯ ಒಂದನೇ ಸೋಮೇಶ್ವರನ ಕಾಲದಿಂದ ಆರನೇ ವಿಕ್ರಮಾದಿತ್ಯನ ಕಾಲದವರೆಗೆ ತಿಳಿಸಲಾಗಿರುವ ಶಾಸನಗಳಲ್ಲಿ ಆಡಳಿತ ಪ್ರಾಂತ್ಯಗಳಲ್ಲಿ ರಾಜರುಗಳು ತಮ್ಮದೆ ಆದ ಪ್ರಾಬಲ್ಯವುಳ್ಳ ಆಡಳಿತವನ್ನು ನಡೆಸುವುದರ ಬಗ್ಗೆ ಸ್ಪಷ್ಟ ಮಾಹಿತಿಯನ್ನು ತಿಳಿಸಲಾಗಿದೆ.

ದೇವಗಿರಿ ಯಾದವ ವಂಶಕ್ಕೆ ಸಂಬಂಧಪಟ್ಟಂತೆ ಕ್ರಿ.ಶ ೧೨೭೮ರ ಬ್ಯಾಡಗಿ ತಾಲ್ಲೂಕಿನ ಹಿರೇಅಣಜಿಯ ಶಾಸನವು[೧೧೯] ಸಿಂಗಣ್ಣನ ಕಾಲಕ್ಕೆ ಸೇರಿದ್ದು. ಈತನ ಆಳ್ವಿಕೆ ಕಾಲದ ದೇವಗಿರಿ-೧೪೦ ಒಂದು ಆಡಳಿತ ವರ್ಗವಾಗಿತ್ತು. ಕ್ರಿ.ಶ ೧೨ನೇ ಶತಮಾನದ ಅಣಜಿ

ಶಾಸನದಲ್ಲಿ[೧೨೦] ಅತ್ತಿಗೇರಿ-೧೨, ಎಳಂಬಾರು-೧೨, ರಟ್ಟಪಳ್ಳಿ - ೭೦, ಇಟಗಿ - ೩೦, ರಾಣಿಬೆನ್ನೂರು - ೧೨ ಉಲ್ಲೇಖವಿದೆ. ಆಡಳಿತ ಉಪಭಾಗಗಳ ಉಲ್ಲೇಖ ಕಂಡು ಬರುತ್ತದೆ. ಹೀಗೆ ಪ್ರಾಂತ್ಯಾಡಳಿತದ ಉಲ್ಲೇಖಗಳು ಶಾಸನಗಳಲ್ಲಿ ಕಂಡುಬಂದಿದ್ದು ಅವುಗಳಲ್ಲಿ ರಾಷ್ಟ್ರಕೂಟ, ಕಲ್ಯಾಣಿ ಚಾಲುಕ್ಯ ದೇವಗಿರಿ ಯಾದವರು ಈ ರಾಜಮನೆತನಗಳಿಗೆ ಸಂಬಂಧಿಸಿದ್ದು. ಬಾದಾಮಿ ಚಾಲುಕ್ಯ, ಹಾನಗಲ್ಲು ಕದಂಬರು, ಹೊಯ್ಸಳ, ವಿಜಯನಗರ ಅರಸರು ಮತ್ತು ಸಾಮಂತ ಮನೆತನದ ಪ್ರಾಂತ್ಯಾಡಳಿತದ ವಿಷಯಗಳು ಶಾಸನಗಳಲ್ಲಿ ಕಂಡುಬರದೇ ಇರುವುದು ದುರ್ದೈವದ ಸಂಗತಿಯಾಗಿದೆ. ಆಯಾ ಪ್ರಾಂತ್ಯಗಳಲ್ಲಿನ ಆಳ್ವಿಕೆ ಆ ರಾಜ್ಯದ ಆಡಳಿತಕ್ಕೆ ಅನುಗುಣವಾಗಿ ರಾಜರುಗಳು ತಮ್ಮದೇ ಆದ ಪ್ರಾಬಲ್ಯವುಳ್ಳ ಆಡಳಿತವನ್ನು ನಡೆಸುವುದರ ಬಗ್ಗೆ ಸ್ಪಷ್ಟವಾದ ಮಾಹಿತಿಯನ್ನು ಕಲೆಹಾಕಲಾಗಿದೆ.

**ಗ್ರಾಮಾಡಳಿತ :**

ಪ್ರಾಚೀನ ಕಾಲದಿಂದಲೂ ಗ್ರಾಮ ಎಂಬುದು ಆಡಳಿತ ವಿಭಾಗದ ಅತೀ ಚಿಕ್ಕ ಘಟಕವಾಗಿತ್ತು. ಗ್ರಾಮಗಳ ಅಡಿಗಲ್ಲುಗಳ ಮೇಲೆ ನಾಡು, ಮಂಡಲ, ದೇಶಗಳು ನಿಲ್ಲುತ್ತಾ ಬಂದಿದ್ದು, ಒಂದೊಂದು ಹಳ್ಳಿಯು ರಾಜನಿಗೆ ಸಲ್ಲಿಸಬೇಕಾದ ತೆರಿಗೆಗಳನ್ನು ಸಲ್ಲಿಸಿಬಿಟ್ಟರೆ ಸಾಕಾಗಿತ್ತು. ಇಡೀ ವರ್ಷದುದ್ದಕ್ಕೂ ಅದೊಂದು ಪ್ರತ್ಯೇಕ ರಾಜ್ಯವೆಂಬಂತೆ ಒಂದು ರೀತಿಯಲ್ಲಿ ಸ್ವತಂತ್ರ್ಯವಾಗಿ ತನ್ನಷ್ಟಕ್ಕೆ ತಾನು ಬದುಕುತ್ತಿದ್ದು ಇಡೀ ದೇಶಕ್ಕೆ ಕಷ್ಟ ಬಂದಾಗ ಆ ಊರಿನ ಜನರೇ ಪರಿಹರಿಸಿಕೊಳ್ಳಲಾಗದ ಸಮಸ್ಯೆ ಅಥವಾ ತೊಂದರೆಗೆ ಒಳಗಾದಾಗ ಮಾತ್ರ ಹಳ್ಳಿಗೆ ಕೇಂದ್ರಾಡಳಿತ ಪ್ರದೇಶವಾಗುವಂತೆ ಕಾಣುತ್ತದೆ.[೧೨೧] ಒಂದೊಂದು ಗ್ರಾಮಕ್ಕೂ ಆಡಳಿತ ವರ್ಗ ನಿರ್ದಿಷ್ಟ ಪಡಿಸಿದ ಸೀಮೆ ಇರುತ್ತಿತ್ತು. ಶಾಸನಗಳಲ್ಲಿ ಹಳ್ಳಿಗಳ ಗಡಿಗಳನ್ನು ಗುರುತಿಸುವಾಗ ಆ ಗಡಿಗಳಲ್ಲಿ ಇರುತ್ತಿದ್ದ ಕೆರೆ, ದಿನ್ನೆ, ಮರ, ದಾರಿ, ಗುಡ್ಡ, ಬೆಟ್ಟ ಇತ್ಯಾದಿಗಳನ್ನು ಹೆಸರಿಸಿರುವುದನ್ನು ಕಾಣಬಹುದಾಗಿದೆ. ಇದಕ್ಕೆ ಸಂಬಂಧಿಸಿದಂತೆ ಹಿರೇಕೆರೂರು ತಾಲ್ಲೂಕಿನ ಒಂದು ಗ್ರಾಮವಾದ ಮಡಲೂರ ಸೀಮೆಯನ್ನು ಹೀಗೆ ಗುರುತಿಸಲಾಗಿದೆ. ಕ್ರಿ.ಶ ೧೨೪೭ರ ಮಡಲೂರು ಶಾಸನದಲ್ಲಿ ಶ್ರೀಮತು ಮಡಲೂರು ಸೀಮಾಮರ್ಯಾದೆ ಪೂರ್ವಾಭಿಮುಖದ ದೆಸೆಯಲು ಬಿಂಜವಾಣಿಯ ಬೆನ್ನಗೆಯಾಗ್ನೆಯಣ ದೆಸೆಯಲು ಹಳುಕಬಾವಿ, ಬೆಲ್ಲವತ್ತದ ಮರದ ದಕ್ಷಿಣಾಭಿಮುಖದ ದೆಸೆಯಲು, ಬೇಗಲ್ಲು, ಕೇತಸೆಟ್ಟಿಯ ಕೆರೆಯ ದೇವಾಲ್ಯದ ಬಡಗಣ ಹುಬ್ಬು ಸಾಯಿರಗುಡಿಯ ತೆಂಕದೆಸೆಯ ಕೋಳ ನೈಋತ್ಯದ ಕೋಣದೆಸೆಯಲು ಭಗವತಿಯ ಯಡದ ತೋಳದೆಸೆಕಾಟಿವೋಳಗಣ ನೆಟ್ಟಕಲ್ಲು. ಪಶ್ಚಿಮಾಭಿಮುಖದ ದೆಸೆಯಲು ಅತ್ತಿಮಲ್ಲನ ಗುಡ್ಡೆಯ ಬಡಗಣ ನೆಟ್ಟಕಲ್ಲು, ಸಬ್ಬಿಕೂಂಚಿಯ ನಡುಕೆರೆ ಒಳಗಾಗಿ ವಾಯುವ್ಯದ ಕೋಣದೆಸೆಯಲು ಕೊಳ. ಹೊನ್ನಹುಣಿಸೆಯ ಬಡಗಣಸರಿವು ಉತ್ತರಾಭಿಮುಖದ ದೆಸೆಯಲು ಆ ಕೆಱೆಯ ಬಡಗಣಕೋಡಿ ಅಲ್ಲಿಂ ಮೂಡಲು ಮಾಱುಕೊಳ ಮೂಹೊಲತಿ ಮುತ್ತಕಟ್ಟದ ಬಡಗಣ ಕೋಡಿಯೆಱೆದ

ಸರಿವು, ಹಕಳಕೆಜೆೀಯ ಪಡುವಣ ಕೋಡಿ, ಮಡಲೂರ ಸೂಡಂಗಿಯ ನೆಲೆನುಜೆಯು ಮೂಹೊಲತಿ ಅಲಿಂ ತೆಂಕಲು ಬಂಚವಾಸಿಣಿ ಸೀಮೆ ಮರ್ಯಾದಿ ಎಂಬ ಪ್ರಸ್ತಾಪವಿದೆ.[೧೨೨]

ಊರ್ಗಾವುಂಡ ಊರ ಆಡಳಿತದ ಮುಖ್ಯಸ್ಥನಾಗಿರುತ್ತಿದ್ದ ಈತನನ್ನು ಸಾಮಾನ್ಯವಾಗಿ 'ಗಾವುಂಡ' ಎಂದು ಕರೆಯಲಾಗುತ್ತಿತ್ತು. ಗಾವುಂಡನಲ್ಲದೆ ದಂಡನಾಯಕರು ಗ್ರಾಮದ ಆಡಳಿತ ವಹಿಸಿಕೊಂಡ ಉಲ್ಲೇಖಗಳು ಕಾಣಬರುತ್ತವೆ. ಕ್ರಿಶ ೧೦೭೩ರ ಮತ್ತಿಹಳ್ಳಿ ಶಾಸನದಲ್ಲಿ[೧೨೩] ಮಹಾ ಪ್ರಧಾನ ಎಂಬ ಉಲ್ಲೇಖವಿದೆ. ಕ್ರಿಶ ೧೦೭೬ರ ಶಾಸನದಲ್ಲಿ ಮಾನೆವೆರ್ಗಡೆ ಎಂಬ ಉಲ್ಲೇಖವಿದೆ ಮತ್ತು ಇದೇ ಶಾಸನದಲ್ಲಿ ದಂಡನಾಯಕನ ಪ್ರಸ್ತಾಪವಿದೆ.

ಹಳ್ಳಿಗೊಬ್ಬ ಗಾವುಂಡ ಎಂಬ ಸಾಮಾನ್ಯ ನಿಯಮವಾಗಿದ್ದರೂ ಒಂದು ಗ್ರಾಮಕ್ಕೆ ಒಂದೇ ಕಾಲಕ್ಕೆ ಹಲವು ಗಾವುಂಡರು ಇದ್ದರೆ ಅವರು ಮೂಲತಃ ಓರ್ವನೇ ಗಾವುಂಡನ ಬೇರೆ ಬೇರೆ ಮನೆತನಗಳಿಗೆ ಸೇರಿದ ಹಿರಿಯನಿರಬಹುದೆಂದು ಆಳ್ತೇಕರ್ ಅಭಿಪ್ರಾಯಪಟ್ಟಿದ್ದಾರೆ.[೧೨೪] ಹೀಗಾಗಿ ಇತ್ತೀಚಿನವರೆಗೆ ಉಳಿದುಕೊಂಡು ಬಂದಿದ್ದ ಗ್ರಾಮಗಳ ಗೌಡಿಕೆ ಪದ್ಧತಿಯಲ್ಲಿ ಊರಲ್ಲಿ ಗೌಡ ಮನೆತನಗಳು ಸರದಿಯ ಮೇಲೆ ಗೌಡಿಕೆ ಮಾಡುತ್ತಿದ್ದುದನ್ನು ಇಲ್ಲಿ ಜ್ಞಾಪಿಸಬೇಕಾಗಿದೆ. ಒಂದು ಊರಿಗೆ ಅನೇಕ ಗಾವುಂಡರಿರುವುದನ್ನು ಬೇರೆ ಬೇರೆ ಕಾರ್ಯ ಬೇರೆ ಬೇರೆ ವಿಭಾಗಗಳಿಗೆ ಪ್ರತ್ಯೇಕ ಗೌಡ ಇರುತ್ತಿದ್ದಂತೆ ಕಾಣುತ್ತದೆ ಎಂದು ಎಂ.ಬಿ. ನೇಗಿನಹಾಳ ಅವರು ಅಭಿಪ್ರಾಯಪಟ್ಟಿದ್ದಾರೆ. ಈ ಪದ್ದತಿ ಬಾದಾಮಿ ಚಾಲುಕ್ಯ ಮತ್ತು ರಾಷ್ಟ್ರಕೂಟ ಕಾಲದಿಂದ ರೂಢಿಯಲ್ಲಿ ಬಂದಿತ್ತೆಂದು ಹೇಳಿದ್ದಾರೆ.[೧೨೫] ಗ್ರಾಮದ ಸಮಸ್ತ ಹೊಣೆ ಹೊತ್ತ ಗಾವುಂಡನ ಕಾರ್ಯಕ್ಷೇತ್ರಗಳು ಹಲವರು ಸರ್ವಾಧಿಕಾರಿಯಂತೆ ವರ್ತಿಸುತ್ತಿರಲಿಲ್ಲ. ಗ್ರಾಮದ ಹಿರಿಯರು, ಅನುಭವಿಗಳು, ನಿಷ್ಠಾವಂತರು ಮತ್ತು ಗಣ್ಯರು ಸೇರಿದ ಒಂದು ಸಭೆಯನ್ನು ಕರೆದು ಅವರ ಸಲಹೆಯಂತೆ ನಡೆದುಕೊಳ್ಳುತ್ತಿದ್ದು[೧೨೬]. ಇಂತಹ ಸ್ಥಾನಿಕ ಸಭೆಯನ್ನೇ ಗ್ರಾಮಸಭೆ ಎಂದು ಕರೆದಿದ್ದಾರೆ.[೧೨೭]

ಇದರಲ್ಲಿ ಸದಸ್ಯರಾಗಿರುತ್ತಿದ್ದವರು ಅರಸನಿಂದ ನೇಮಿಸಲ್ಪಟ್ಟವರಾಗಲೀ, ಚುನಾಯಿತರಾದವರಾಗಲೀ ಆಗಿರುತ್ತಿರಲಿಲ್ಲ. ಗ್ರಾಮ ಮಾನ್ಯರಾದ ಪ್ರಭುಗಳು ಮಹಾಜನರು, ಒಕ್ಕಲು, ಕರ್ಣಂಗಳು, ಸೇನಭೋವ ಶೆಟ್ಟಿ ಮುಂತಾದವರು ಇರುತ್ತಿದ್ದರು. ಈ ಗ್ರಾಮಾಡಳಿತದ ವೈಶಿಷ್ಟ್ಯವೆನಿಸಬಹುದು.[೧೨೮] ಗ್ರಾಮಸಭೆಗಳು ಜನತೆಯಾದ್ದರಿಂದ ಅವು ಸ್ವರೂಪತಃ ಸಮಾಜವಾದಿ ಸಂಸ್ಥೆಗಳಾಗಿದ್ದು, ಕೆಲಮಟ್ಟಿನ ಪ್ರಜಾಪ್ರಭುತ್ವದ ತತ್ವಗಳನ್ನು ಅಳವಡಿಸಿಕೊಂಡಿದ್ದವು.[೧೨೯]

ಕೇಂದ್ರಾಡಳಿತಕ್ಕೂ ಮತ್ತು ಆ ಊರ ಜನಕ್ಕೂ ಮಧ್ಯವರ್ತಿ ಆಗಿದ್ದ ಗಾವುಂಡನನ್ನು ರಾಜ್ಯದ ಅಧಿಕಾರಿಯೆಂದು ಭಾವಿಸಿದ್ದಕ್ಕಿಂತ ಜನರ ಪ್ರತಿನಿಧಿಗಳೆಂದು ಭಾವಿಸುವುದೇ ಹೆಚ್ಚು ಸೂಕ್ತ[೧೩೦]. ಆದ್ದರಿಂದಲೇ ಹಲವಾರು ಶಾಸನಗಳಲ್ಲಿ ಗಾವುಂಡರ ಗುಣಗಾನ ಕಂಡು ಬರುತ್ತದೆ.

ಹಿರೇಕೆರೂರು ತಾಲ್ಲೂಕಿನ ಎಮ್ಮಿಗನೂರಿನ ಕ್ರಿ.ಶ. ೧೧೪೯ರ ಶಾಸನದಲ್ಲಿ ಎಮ್ಮಿಗನೂರಿನಲ್ಲಿ ರಾಮೇಶ್ವರ ದೇವಾಲಯ ನಿರ್ಮಿಸಿದ ಕಾಮ ಗಾವುಂಡನನ್ನು ಅಲ್ಲಿಯ ಶಾಸನ ಉಲ್ಲೇಖಿಸುತ್ತದೆ. ಅದರ ಒಂದು ಪದ್ಯವನ್ನು ಈ ಕೆಳಕಂಡಂತೆ ಕಾಣಬಹುದು.

**ಧರ್ಮದ ಕಣಿ, ಸತ್ಯದ ನಿಧಿ**
**ಪೆರ್ಮೆಯ ನೆಲೆ ಚಾಗದಗರಂ ವಿಜಯಶ್ರೀ ॥**
**ವರ್ಮಂ ಕಾಮಗಾವುಂಡಂ**
**ನಿರ್ಮಳತರ ಕೀರ್ತಿ ವಿಕ್ರಮಾಳಂಕಾರ ॥**

ಹೀಗೆ ಗಾವುಂಡರ ಹಲವಾರು ಕರ್ತವ್ಯಗಳಲ್ಲಿ ಗ್ರಾಮದ ರಕ್ಷಣೆ ಪ್ರಮುಖವಾಗಿದ್ದು, ಪ್ರಾಚೀನ ಕಾಲದಲ್ಲಿ ಹಳ್ಳಿಗಳು ಅಷ್ಟೇನೋ ತಾಪವಾಗಿರಲಿಲ್ಲ. ಅಂದರೆ ಹಳ್ಳಿಗಳನ್ನು ಲೂಟಿ ಮಾಡುವುದು, ದನಕರುಗಳನ್ನು ಅಪಹರಿಸುವುದು, ಸ್ತ್ರೀಯರ ಮಾನಭಂಗ ಮಾಡುವುದು ನಿರಂತರವಾಗಿ ನಡೆಯುತ್ತಿತ್ತು. ಇವುಗಳಿಂದ ರಕ್ಷಣೆ ಪಡೆಯಲು ಬಹುತೇಕ ಗ್ರಾಮಗಳಿಗೆ ಕೋಟೆ, ಕಂದಕ ಕೊತ್ತಲಗಳು ಇರುತ್ತಿದ್ದವು. ಹೀಗೆ ಕ್ರಿ.ಶ. ೧೧೬೪ರ ಹಂಸಭಾವಿ ಶಾಸನದಲ್ಲಿ[೧೩೧] ಮಹಾಮಂಡಳೇಶ್ವರ ಸೋಯೀದೇವರಸ ಉದ್ಧರಯಕ್ಕಲ ಅರಸ ಹಾಗೂ ಮೊನ್ನೆಯರು ಸಾಲಿಯಾರು ಕೋಟೆಯ ಮೇಲೆ ಧಾಳಿ ಮಾಡಿದಾಗ ತುಯ್ಯಲ ಬೇಗೂರಿನಿಂದ ಮಡವರಿಯ ಮೇಲ ಸೆಟ್ಟಿಯ ಮಗ ಜಟ್ಟಿಗ ಬಿಟ್ಟೆಯನು ಹೋಗಿ ಧಾಳಿಯಲ್ಲಿ ಪಾಲ್ಗೊಂಡು ಕೋಟೆಯನ್ನು ಸುತ್ತುವರೆದು ಮಡಿದನು. ಇದರಿಂದಾಗಿ ಪ್ರಜೆಗಳು ಅರಸನಿಗಾಗಿ ಊರ ರಕ್ಷಣೆಗಾಗಿ ಹೋರಾಡಿ ಮಡಿಯುವುದರಲ್ಲಿ ಜೀವನದ ಸಾರ್ಥಕತೆ ಕಾಣುತ್ತಿದ್ದರು.

ಕ್ರಿ.ಶ ೧೨೪೭ರ ಮಡಲೂರು ಶಾಸನದಲ್ಲಿ ಪೊಲ್ಲಗಾವುಂಡನಿಗೆ **"ಕೀಳ್ಗೂಗು"** ನಡೆಸಿಕೊಡುವ ಸಮಾರಂಭದಲ್ಲಿ ಮಂಡಳೇಶ್ವರ ಬೊಮ್ಮದೇವರಸ ಹಾಗೂ ಅನೇಕ ಸಾಮಂತರು ನೆರೆದಿದ್ದು ಇವರಲ್ಲಿ ಊರುಗಾವುಂಡ ಚೌಡಗೌಡನು ಕೂಡಾ ಒಬ್ಬನಾಗಿದ್ದ ಎಂಬ ಉಲ್ಲೇಖವಿದೆ.[೧೩೨]

ಗ್ರಾಮದ ಕೆಲಸ ಕಾರ್ಯಗಳಲ್ಲಿ ದೇವಾಲಯದ ನಿರ್ಮಾಣ ಕಾರ್ಯವು ಒಂದಾಗಿದ್ದು, ಗಾವುಂಡ ಊರಿನ ಹಿತಕ್ಕೋಸ್ಕರ ತಾನೇ ದೇವಾಲಯಗಳನ್ನು ನಿರ್ಮಿಸಿ ಅದಕ್ಕೆ ದತ್ತಿಗಳನ್ನು ಬಿಟ್ಟಿದ್ದು ಕ್ರಿ.ಶ ೧೧೪೯ರ ಎಮ್ಮಿಗನೂರಿನ ಶಾಸನದಲ್ಲಿ[೧೩೩] ಕಂಡು ಬಂದಿದ್ದು, ಕಾಮಗಾವುಂಡ ಊರಲ್ಲಿ ರಾಮೇಶ್ವರ ದೇವಾಲಯ ನಿರ್ಮಿಸಿ ದತ್ತಿಗಳನ್ನು ಬಿಟ್ಟಿರುವುದನ್ನು ಕಾಣಬಹುದಾಗಿದೆ. ಹೀಗೆ ಈ ಮೇಲಿನ ಶಾಸನಗಳಲ್ಲಿ ಉಲ್ಲೇಖಿತಗೊಂಡ ಅಧಿಕಾರಸ್ಥ ವ್ಯಕ್ತಿ ಆಯಾ ಗ್ರಾಮದ ಸ್ಥಾನಮಾನ್ಯರು ಆಡಳಿತ ವಲಯದಲ್ಲಿ ನಿರಂಕುಶ ಪ್ರಭುತ್ವ ಇರುವಾಗಲೂ ನಮ್ಮ ಗ್ರಾಮಗಳೂ ಪ್ರಜಾಪ್ರತಿನಿಧಿಕ ದೃಷ್ಟಿ ಅಳವಡಿಸಿಕೊಂಡಿರುವ ರಾಜಸತ್ಯ ಮತ್ತು ಪ್ರಜಾಪ್ರಭುತ್ವ ಎಂದಿಗೂ ವಿರೋಧಾಸೂಚಕ ಪದಗಳಾಗಿರಲಿಲ್ಲ ಎಂಬುದರ ಸೂಚನೆ ಗಮನಾರ್ಹವಾಗಿದೆ.

**ನ್ಯಾಯಾಂಗ ವ್ಯವಸ್ಥೆ:**

ರಾಜನ ಕರ್ತವ್ಯಗಳು ಪ್ರಮುಖವಾಗಿ **'ದುಷ್ಟ ನಿಗ್ರಹ ಶಿಷ್ಟ ಪರಿಪಾಲನೆಯೇ ನ್ಯಾಯವಾಗಿದ್ದು'** ಇವೆರಡು ಸುಸೂತ್ರವಾಗಿ ನಡೆಯಬೇಕಾದರೆ ರಾಜನು ಆಗಿಂದಾಗ್ಗೆ ಶಾಸನ ಮತ್ತು ಆಜ್ಞೆಗಳನ್ನು ಹೊರಡಿಸುತ್ತಿದ್ದ ಶಿಷ್ಟರಿಗೆ ನ್ಯಾಯ ಲಭಿಸುವಂತೆ, ದುಷ್ಟರಿಗೆ ಸರಿಯಾದ ಶಿಕ್ಷೆ ಆಗುವಂತೆ ಏರ್ಪಾಡು ಮಾಡಲಾಗುತ್ತಿತ್ತು. ಅಂದರೆ ಅನ್ಯಾಯವನ್ನು ಹೋಗಲಾಡಿಸುವುದಾಗಿತ್ತೆಂದು ನೀತಿಸಾರದಲ್ಲಿ ಕಾಮಂದಕನು ಎಚ್ಚರಿಸಿದ್ದಾನೆ. ಅಂದರೆ ಪ್ರಾಚೀನ ಕರ್ನಾಟಕದ ರಾಜರೂ ದಂಡನೀತಿ ಅಥವಾ ನ್ಯಾಯ ಪರಿಪಾಲನೆಯನ್ನು ಯಾವ ರೀತಿ ಕೈಗೊಂಡಿದ್ದಾರೆ, ಅದರ ಸ್ವರೂಪವೇನು ಎಂಬ ಸ್ಪಷ್ಟ ಚಿತ್ರಣ ಶಾಸನಗಳಲ್ಲಿ ದೊರೆಯುವುದಿಲ್ಲ ಎಂಬುದನ್ನು ಚಿದಾನಂದಮೂರ್ತಿಯವರು ತಿಳಿಸಿದ್ದಾರೆ.[೧೩೪] ಲೋಕದಲ್ಲಿ ಶುಚಿ ಎನಿಸಿಕೊಳ್ಳುವವನು ದುರ್ಭಲನೆಂದೂ ದುಷ್ಟರೇ ಬಹುವಾಗಿರುವುದರಿಂದ ಲೋಕವನ್ನು ದಂಡದಿಂದಲೇ ಜಯಿಸಬೇಕೆಂದೂ ಜಗತ್ತು, ಭೋಗ್ಯವಾಗುವುದು ದಂಡದ ಭಯದಿಂದಲೇ ಎಂದು ಮನು ಹೇಳುತ್ತಾನೆ.[೧೩೫]

ಕ್ರಿ.ಶ ೧೨೦೦ರ ಅಬಲೂರು ಶಾಸನದಲ್ಲಿ ಅಬಲೂರಿನ ಬ್ರಮ್ಮೇಶ್ವರ ದೇವಾಲಯದಲ್ಲಿ ಶರಣ ಏಕಾಂತರಾಮಯ್ಯ ಸ್ಥಾನಿಕ ಸವಣರೆದುರು ಶಿವ ಪಾರಮ್ಯ ಹೇಳಲಾಗಿ ಅವರು ಒಪ್ಪದೇ ಪಾರಮ್ಯದ ಪ್ರತಿವಾದ ಮಾಡಿದರು. ಇದರಿಂದ ಮಾತಿನಲ್ಲಿ ಸೋಲದ ರಾಮಯ್ಯನಿಗೆ ಜೈನರು **"ನಿಮ್ಮಾಯ ಶಿರಮಂ ಜನಮರಿಯಲರೆದು-ಕೊಟ್ಟತಾನೊಲಿಂಪಡೆ-ನೀನೆ ಭಕ್ತನಾಥನೇ ದೇವಂ"**[೧೩೬] ಎಂಬ ಪಣ ಒಡ್ಡಿದರು. ಈ ರೀತಿ ಶಿರವನ್ನು ಕತ್ತರಿಸಿಕೊಂಡು ಪುನಃ ಜೋಡಿಸಿದಾಗ ಜೀವ ಪಡೆಯುವುದು 'ಸಶಿರಸ್ಕ'ಎಂಬ ದಿವ್ಯವಾಗಿದೆ. ಹೀಗೆ ಹಾವೇರಿ ಜಿಲ್ಲೆಯ ಶಾಸನಗಳಲ್ಲಿ ನ್ಯಾಯಾಡಳಿತದ ಬಗ್ಗೆ ಉಲ್ಲೇಖಗಳಿದ್ದರೂ ಹೆಚ್ಚಿನ ಮಾಹಿತಿ ಕಂಡುಬರುವುದಿಲ್ಲ.

ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಗಮನಿಸಿದಾಗ ಹಾವೇರಿ ಜಿಲ್ಲೆಯ ಶಾಸನಗಳಲ್ಲಿ ಉಕ್ತವಾದ ಮಾಹಿತಿಯನ್ನು ಒಳಗೊಂಡಂತೆ ಆಡಳಿತಾತ್ಮಕವಾಗಿ ರಾಜರು, ರಾಣಿಯರು, ಮಂತ್ರಿಗಳು, ಇತರ ಅಧಿಕಾರಿಗಳು ಪ್ರಾಂತ್ಯಾಡಳಿತ, ಗ್ರಾಮಾಡಳಿತ, ಸೈನ್ಯಾಡಳಿತ ಮತ್ತು ನ್ಯಾಯಾಡಳಿತ ಮುಂತಾದವುಗಳನ್ನು ಒಳಗೊಂಡಂತೆ ಮಾಹಿತಿಯನ್ನು ಈ ಅಧ್ಯಯನದಲ್ಲಿ ಕಲೆ ಹಾಕಲಾಗಿದೆ.

**ಟಿಪ್ಪಣಿಗಳು:**

೧. ಚಿದಾನಂದಮೂರ್ತಿ ಎಂ., ೨೦೦೮, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಬೆಂಗಳೂರು, ಪುಟ ೩೬೦.

೨. ಕನ್ನಡ ವಿಷಯ ವಿಶ್ವಕೋಶ ಸಂ-೧, ೨೦೦೫, ಪ್ರಸಾರಾಂಗ, ಮೈ.ವಿ.ವಿ, ಮೈಸೂರು, ಪುಟ. ೭೫.

೩. ಅದೇ, ಪುಟ. ೭೫.

೪. ಅದೇ, ಪುಟ. ೭೫.

೫. ಅದೇ, ಪುಟ. ೭೫.

೬. ಅದೇ, ಪುಟ. ೭೫.

೭. ಅದೇ, ಪುಟ. ೭೮.

೮. ನಾಗಯ್ಯ ಜೆ.ಎಂ., ೧೯೯೨, ೬ನೇ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ, ಪುಟ. ೭೮.

೯. ಚನ್ನಬಸವ ಹಿರೇಮಠ, ೧೯೯೫, ಕುರುಗೋಡು ಸಿಂದರು : ಒಂದು ಅಧ್ಯಯನ, ಸಂಸ್ಕೃತಿ ಪ್ರತಿಷ್ಠಾನ, ಕೊಪ್ಪಳ, ಪುಟ. ೧೩೬.

೧೦. ಚಿದಾನಂದಮೂರ್ತಿ ಎಂ., ೨೦೦೮, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯ, ಬೆಂಗಳೂರು, ಪುಟ. ೩೫೭.

೧೧. ಕ.ಇ. ಸಂ. ೨, ಪುಟ. ೧.

೧೨. ಸೂರ್ಯನಾಥ ಕಾಮತ್, ೧೯೯೯, ಇತಿಹಾಸ ದರ್ಶನ ಸಂ ೧೪, ಬೆಂಗಳೂರು, ಪುಟ. ೬೧.

೧೩. ಎಸ್.ಐ.ಐ.ಸಂ.XX. ಪುಟ ೩೪, ಕಲಕೇರಿ, ೧೦೫೩.

೧೪. ಅದೇ, ಕಲಕೇರಿ, ೧೦೫೫, ಪುಟ. ೩೫.

೧೫. ಎಸ್.ಐ.ಐ.ಸಂ.XX. ಪುಟ. ೬೦, ಕಲಕೇರಿ, ೧೦೫೩.

೧೬. ಅದೇ, ೧೧೪, ಕಲಕೇರಿ, ೧೧೪೬.

೧೭. ಅದೇ, ಪುಟ ಕಲಕೇರಿ ೧೧೮೫.

೧೮. ಅದೇ ಪುಟ ಕಲಕೇರಿ ೧೧೮೩.

೧೯. ಅದೇ, ಪುಟ ೧೯೬, ಕಲಕೇರಿ ೧೨೨೪.

೨೦. ಅದೇ, ಪುಟ. ೨೦, ಕಲಕೇರಿ ೧೨೭೦.

೨೧. ಅದೇ ಪುಟ. ೨೦, ಕಲಕೇರಿ ೧೨೮೯.

೨೨. ಅದೇ, ಪುಟ, ೨೦, ಕಲಕೇರಿ ೧೨೦೭.

೨೩. ನಾಗಯ್ಯ ಜೆ.ಎಂ., ೧೯೯೫, ಕಲಕೇರಿ, ಶ್ರೀ ಬಸವೇಶ್ವರು ಜೀರ್ಣೋದ್ಧಾರ ಟ್ರಸ್ಟ್, ಕಲಕೇರಿ. ಹಾನಗಲ್ಲು ತಾಲ್ಲೂಕು, ಧಾರವಾಡ ಜಿಲ್ಲೆ, ಪುಟ. ೪-೬

೨೪. ಚಿದಾನಂದಮೂರ್ತಿ ಎಂ, ೨೦೦೮, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಬೆಂಗಳೂರು, ಪುಟ. ೩೬೩.

೨೫. ಎಲಿಗಾರ ಚನ್ನಕ್ಕ, ೧೯೯೦, ಪ್ರಾಚೀನ ಕರ್ನಾಟಕದ ರಾಣಿಯರು, ಧಾರವಾಡ, ಪುಟ. ೧೯-೨೮.

೨೬. ಎಫಿ.ಇಂ. ಸಂ. ೧೬, ತಿಳುವಳ್ಳಿ, ಹಾನಗಲ್ಲು ತಾಲ್ಲೂಕು, ಪುಟ. ೩೩೭-೩೪೯.

೨೭. ಎಫಿ.ಇಂ. ಸಂ. XXXIII, ಪುಟ. ೧೩೧-೩೩.

೨೮. ಭೋಜರಾಜ ಬಿ. ಪಾಟೀಲ, ೧೯೯೫, ನಾಗರಖಂಡ - ೭೦ ಒಂದು ಅಧ್ಯಯನ, ಮಲೆನಾಡ ವೀರಶೈವ ಅಧ್ಯಯನ ಅಕಾಡೆಮಿ, ಆನಂದಪುರ, ಪುಟ. ೯೭

೨೯. ಅದೇ, ಪುಟ. ೯೭.

೩೦. ಕ.ಇ.ಸಂ. ೪ ಪುಟ ೧, ಸಾತೇನಹಳ್ಳಿ, ಕ್ರಿ.ಶ. ೧೨೦೪.

೩೧. ಅದೇ, ಪುಟ-೧.

೩೨. ಧಾ.ಜಿ.ಶಾ.ಸೂ.ಶಾ.ಸಂ. ೮೨, ಪುಟ. ೫೭.

೩೩. ಅದೇ, ಶಾ.ಸಂ. ೨೦೩, ಪುಟ. ೬೫.

೩೪. ಅದೇ, ಶಾ.ಸಂ., ೧೪೬, ಪುಟ. ೬೭.

೩೫. ಅದೇ, ಶಾ.ಸಂ. ೧೪೯, ಪುಟ. ೬೭.

೩೬. ಚಿದಾನಂದಮೂರ್ತಿ ಎಂ., ೨೦೦೮, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಬೆಂಗಳೂರು, ಪುಟ. ೩೬೪.

೩೭. ಶ್ಯಾಮಾಶಾಸ್ತ್ರಿ ಆರ್. (ಅನು.) ಕೌಟಿಲ್ಯನ ಅರ್ಥಶಾಸ್ತ್ರ, ಪುಟ. ೨೮.

೩೮. ಕ.ಇ.ಸಂ.೬, ಪುಟ. ೧೨, ಹಿರೇ (ತಾಲ್ಲೂಕು), ಮತ್ತಿಹಳ್ಳ ೧೭೮.

೩೯. ಅದೇ, ಪುಟ ೧೨.

೪೦. ಕ.ಇ.ಸಂ.೬, ಪುಟ. ೨೨, ಮತ್ತಿಹಳ್ಳಿ ಕ್ರಿ.ಶ. ಸುಮಾರು ೧೦೭೯.

೪೧. ಅದೇ, ಪುಟ. ೧೭೮.

೪೨. ಅದೇ, ಪುಟ. ೧೭೮.

೪೩. ಅದೇ, ಪುಟ. ೧೭೮.

೪೪. ಧಾ.ಜಿ.ಶಾ.ಸೂ., ಶಾ.ಸಂ, ೮೮, ಪುಟ. ೬೧.

೪೫. ಎಸ್.ಐ.ಐ. ಸಂ. XX, ಪುಟ ೩೧.

೪೬. ಎಸ್.ಐ.ಐ., ಸಂ. XVI, ಪುಟ. ೬೬-೮೮.

೪೭. ಧಾ.ಜಿ.ಶಾ.ಸೂ.,ಶಾ.ಸಂ. ೬೦, ಪುಟ. ೫೨.

೪೮. ಅದೇ, ಶಾ.ಸಂ. ೭೯, ಪುಟ. ೪೫.

೪೯. ಅದೇ, ಶಾ.ಸಂ. ೧೬೮, ಪುಟ. ೩೨.

೫೦. ಅದೇ, ಶಾ.ಸಂ. ೯೯, ಪುಟ. ೭೩.

೫೧. ಎಫಿ.ಇಂ.ಸಂ. XVI, ೩೩೮, ಕ.ಇ.ಸಂ. II.೮.

೫೨. ಎಫಿ.ಇಂ.ಸಂ. XVI, ಪುಟ. ೬೮–೭೩.

೫೩. ಎಫಿ.ಇಂ.ಸಂ. XXXV., ಪುಟ. ೧೮೩–೮೭.

೫೪. ಎಫಿ.ಇಂ.ಸಂ. IV., ಪುಟ. ೩೩.

೫೫. ಧಾ.ಜಿ.ಶಾ.ಸೂ., ಪುಟ. ೯೭.

೫೬. ಎಫಿ.ಇಂ.ಸಂ. V., ಪುಟ. ೨೧೩–೩೧.

೫೭. ಧಾ.ಜಿ.ಶಾ.ಸೂ., ಶಾ.ಸಂ. ೯೩, ಪುಟ. ೬೧.

೫೮. ಎಫಿ.ಇಂ.ಸಂ. ೧೬, ಸಂಖ್ಯೆ ೧೧ಸಿ.

೫೯. ಕ.ಇ.ಸಂ.I, ಪುಟ ೧೭.

೬೦. ಧಾ.ಜಿ.ಶಾ.ಸೂ.,ಶಾ.ಸಂ.೬೫, ಪುಟ. ೨೯.

೬೧. ಕ.ಇ.ಸಂ., IX.೧೦.

೬೨. ಕ.ಇ.ಸಂ. VI, ಹಿರೇ (ತಾಲ್ಲೂಕು), ಮತ್ತಿಹಳ್ಳಿ, ೧೦೭೩. ಪುಟ. ೧೨.

೬೩. ಕ.ಇ.ಸಂ. VI, ಹಿರೇ (ತಾಲ್ಲೂಕು), ಮತ್ತಿಹಳ್ಳಿ, ೧೦೭೩. ಪುಟ. ೨೨.

೬೪. ಕ.ಇ.ಸಂ. VI, ಹಿರೇ (ತಾಲ್ಲೂಕು), ಮತ್ತಿಹಳ್ಳಿ, ೧೦೭೩. ಪುಟ. ೨೦.

೬೫. ಎಫಿ.ಇಂ.ಸಂ. V., ಪುಟ. ೨೩೨–೩೪.

೬೬. ಧಾ.ಜಿ.ಶಾ.ಸೂ.,ಶಾ.ಸಂ.೨೦೮, ಪುಟ. ೬೫.

೬೭. ಕ.ಇ.ಸಂ. VI, ಪುಟ. ೨೦.

೬೮. ಧಾ.ಜಿ.ಶಾ.ಸೂ.,ಶಾ.ಸಂ.೨೪೮, ಪುಟ. ೬೭.

೬೯. ಅದೇ, ಶಾ.ಸಂ. ೪, ಪುಟ. ೫೪.

೭೦. ಅದೇ, ಪುಟ. ೭೬.

೭೧. ಸಿ.ಎಂ. ಪುಟ ೧೧೩–೧೧೪.

೭೨. ಧಾ.ಜಿ.ಶಾ.ಸೂ.,ಶಾ.ಸಂ.೪೦, ಪುಟ. ೪೪.

೭೩. ಧಾ.ಜಿ.ಶಾ.ಸೂ.,ಶಾ.ಸಂ.೨೨, ಪುಟ. ೫೪.

೭೪. ಸೂರ್ಯನಾಥ ಕಾಮತ್, ೨೦೦೫, ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಬೆಂಗಳೂರು, ಪುಟ. ೭೪.

೭೫. ಧಾ.ಜಿ.ಶಾ.ಸೂ.,ಶಾ.ಸಂ.೪೮, ಪುಟ. ೫೬.

೭೬. ಅದೇ, ಶಾ.ಸಂ. ೩೯, ಪುಟ. ೨೯.

೭೭. ಕ.ಇ.ಸಂ.V ೩೫.

೭೮. ಕ.ಇ.ಸಂ.VI, ೩೬.

೭೯. ಅದೇ, ಸಂ.V, ೩೬.

೮೦. ಧಾ.ಜಿ.ಶಾ.ಸೂ.,ಶಾ.ಸಂ.೩೩೦, ಪುಟ. ೬೯.

೮೧. ನಾಗಯ್ಯ, ಜೆ.ಎಂ., ೧೯೯೨, ೬ನೇ ವಿಕ್ರಮಾದಿತ್ಯನ ಶಾಸಗಳು ಒಂದು ಅಧ್ಯಯನ, ಬೆಳಗಾವಿ, ಪುಟ: ೨೭೭.

೮೨. ಧಾ.ಜಿ.ಶಾ.ಸೂ.,ಶಾ.ಸಂ.೪೭, ಪುಟ. ೨೮.

೮೩. ಎಫಿ.ಇಂ.ಸಂ. XVI, ಪುಟ. ೭೫-೮೧.

೮೪. ಧಾ.ಜಿ.ಶಾ.ಸೂ.,ಶಾ.ಸಂ.೪೮, ಪುಟ. ೨೮.

೮೫. ಧಾ.ಜಿ.ಶಾ.ಸೂ.,ಶಾ.ಸಂ.೧೬೮, ಪುಟ. ೩೨.

೮೬. ಕ.ಇ.ಸಂ.VI, ಪುಟ ೮.

೮೭. ಎಫಿ.ಇಂ.ಸಂ. VI, ಪುಟ. ೩೨-೩೩.

೮೮. ಎಸ್.ಐ.ಐ.ಸಂ. XX, ಪುಟ ೬೦.

೮೯. ಕ.ಇ.ಸಂ. ಪುಟ IV.

೯೦. ಕ.ಇ.ಸಂ.VI. ಪುಟ ೭.

೯೧. ಕ.ಇ.ಸಂ.IV. ಪುಟ ೪೩.

೯೨. ಕ.ಇ.ಸಂ.VI. ಪುಟ ೭೪.

೯೩. ಧಾ.ಜಿ.ಶಾ.ಸೂ ಶಾ.ಸಂ ೧೦೮, ಪುಟ. ೬೧.

೯೪. ಕ.ಇ.ಸಂ.VI. ಪುಟ ೭.

೯೫. ಧಾ.ಜಿ.ಶಾ.ಸೂ ಶಾ.ಸಂ ೧೦, ಪು ೫೪.

೯೬. ಕೆ.ಆರ.ಐ.ಸಂ.VI., ೧೯೫೩-೫೭, ಪುಟ. ೭೨.

೯೭. ಧಾ.ಜಿ.ಶಾ.ಸೂ ಶಾ.ಸಂ ೫೪, ಪು ೫೨.

೯೮. ಧಾ.ಜಿ.ಶಾ.ಸೂ ಶಾ.ಸಂ ೧೦, ಪು ೫೨.

೯೯. ಕ.ಇ.ಸಂ.II. ಪುಟ ೩೭.

೧೦೦. ಚಿದಾನಂದಮೂರ್ತಿ ಎಂ., ೨೦೦೮, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಬೆಂಗಳೂರು, ಪುಟ. ೨೪೬.

೧೦೧. ಎಸ್.ಐ.ಐ., ಸಂ. XX, ೧೮, ೧೧೧, ಪುಟ. ೧೧೧೫.

೧೦೨. ಎಸ್.ಐ.ಐ., ಸಂ. XI, ೧೮, No. ೧೧೧, ಪುಟ. ೧೧೧೫.

೧೦೩. ಎಸ್.ಐ.ಐ., ಸಂ. XX, ೧೮, No. ೯೫, ಪುಟ. ೧೧೧೫.

೧೦೪. ಮೊರಸ್ ಜಿ.ಎಂ. ಕದಂಬಕುಲ ಪುಟ. ೨೬೪.

೧೦೫. ಆಳ್ತೇಕರ್ ಎ.ಎಸ್., ೧೯೬೭, ರಾಷ್ಟ್ರಕೂಟಾಸ್ ಆ್ಯಂಡ್ ದೇರ್ ಟೈಮ್ಸ್, ಪೂನ, ಓರಿಯಂಟಲ್ ಬುಕ್ಸ್ ಏಜೆನ್ಸಿ, ಪುಟ. ೧೩೬.

೧೦೬. ಕೆ.ಆರ್.ಐ.ಪಿ.ಆರ್. ೧೯೫೩-೫೭, ಪುಟ. ೬೫.

೧೦೭. ಧಾ.ಜಿ.ಶಾ.ಸೂ.ಶಾ.ಸಂ. ೧೬೫, ಪುಟ. ೩೨.

೧೦೮. ಎಫಿ.ಇಂ.ಸಂ. XVI, ಪುಟ. ೨೮೫.

೧೦೯. ಧಾ.ಜಿ.ಶಾ.ಸೂ.ಶಾ.ಸಂ. ೧೪೮, ಪುಟ. ೩೨.

೧೧೦. ಎಸ್.ಐ.ಐ.ಸಂ. XVIII, ೧೯.

೧೧೧. ಧಾ.ಜಿ.ಶಾ.ಸೂ.ಶಾ.ಸಂ.೯೫, ಪುಟ. ೫೭.

೧೧೨. ಕ.ಇ.ಸಂ.II. ಪುಟ ೧೪

೧೧೩. ಧಾ.ಜಿ.ಶಾ.ಸೂ.ಶಾ.ಸಂ.೨೦, ಪುಟ. ೪೩.

೧೧೪. ಧಾ.ಜಿ.ಶಾ.ಸೂ.ಶಾ.ಸಂ.೮೮, ಪುಟ. ೬೧.

೧೧೫. ಎಫಿ.ಇಂ.ಸಂ. XIX, ಪುಟ. ೧೮೦-೮೩.

೧೧೬. ಧಾ.ಜಿ.ಶಾ.ಸೂ.ಶಾ.ಸಂ.೧೯೯, ಪುಟ. ೬೫.

೧೧೭. ಧಾ.ಜಿ.ಶಾ.ಸೂ.ಶಾ.ಸಂ.೯೩, ಪುಟ. ೬೧.

೧೧೮. ಕಿ.ಇ.ಸಂ.VI, ಪುಟ.೧೭.

೧೧೯. ಧಾ.ಜಿ.ಶಾ.ಸೂ.ಶಾ.ಸಂ.೧೦೩, ಪುಟ. ೫೩

೧೨೦. ಧಾ.ಜಿ.ಶಾ.ಸೂ.ಶಾ.ಸಂ.೪, ಪುಟ. ೭೦.

೧೨೧. ಚಿದಾನಂದಮೂರ್ತಿ ಎಂ., ೨೦೦೮, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಬೆಂಗಳೂರು, ಪುಟ. ೨೪೬.

೧೨೨. ಭೋಜರಾಜ ಪಾಟೀಲ, ೧೯೯೫, ನಾಗರಖಂಡ – ೭೦ ಒಂದು ಅಧ್ಯಯನ, ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ, ಆನಂದಪುರಂ, ಪುಟ. ೧೦೮.

೧೨೩. ಕ.ಇ.ಸಂ. ೬, ಪುಟ. ೧೨, ಮತ್ತಿಹಳ್ಳಿ ೧೦೭೩.

೧೨೪. ಅಳ್ತೇಕರ್ ಎ.ಎಸ್., ೧೯೬೭, ರಾಷ್ಟ್ರಕೂಟಾಜ್ ಆ್ಯಂಡ್ ದೇರ್ ಟೈಮ್ಸ್, ಪೂನ, ಓರಿಯಂಟಲ್ ಬುಕ್ಸ್ ಏಜೆನ್ಸಿ, ಪುಟ. ೧೩೬.

೧೨೫. ಕಾಳೇಗೌಡ ನಾಗವಾರ, ಜನಪದ ಸಾಹಿತ್ಯ ದರ್ಶನ ಭಾಗ – ೭, ಪುಟ. ೧೧೫.

೧೨೬. ಚಿದಾನಂದಮೂರ್ತಿ ಎಂ. ೨೦೦೮, ಕನ್ನಡ ಶಾಸನಗಳ ಸಾಹಿತ್ಯಿಕ ಅಧ್ಯಯನ, ಪುಟ. ೩೪೯, ಮತ್ತು ಕ.ಇ.ಸಂ. ೬–೨೮, ಚಿಕ್ಕಕೋಣತಿ.

೧೨೭. ಅದೇ, ಪುಟ–೨೮.

೧೨೮. ಕೊಪ್ಪ ಎಸ್. ಕೆ., ೧೯೮೦, ತರ್ದವಾಡಿನಾಡು ಒಂದು ಅಧ್ಯಯನ, ಪುಟ. ೧೨೧.

೧೨೯. ದೀಕ್ಷಿತ್ ಆರ್.ಆರ್, ಹಿಂದೂ ಅಡ್ಮಿನಿಸ್ಟ್ರೇಟ್ ಇನ್ಸ್ಟಿಟ್ಯೂಷನ್–೩೨೮.

೧೩೦. ಅಳ್ತೇಕರ್ ಎ.ಎಸ್.೧೯೬೭, ರಾಷ್ಟ್ರಕೂಟಾಸ್ ಆ್ಯಂಡ್ ದೇರ್ ಟೈಮ್ಸ್, ಪೂನ, ಓರಿಯಂಟಲ್ ಬುಕ್ಸ್ ಏಜೆನ್ಸಿ, ಪುಟ, ೩೨೮.

೧೩೧. ಕ.ಇ.ಸಂ ೪. ಪುಟ ೨೪ ಹಿರೇಹಂಸಭಾವಿ ೧೧೬೪.

೧೩೨. ಅದೇ ಸಂ ೪. ಪುಟ ೪೮ ಮಾಡಲೂರ ೧೨೪೭.

೧೩೩. ಅದೇ ಸಂ ೪. ಪುಟ ೧೫ ಎಮ್ಮಿಗನೂರು ೧೪೪೯.

೧೩೪. ಚಿದಾನಂದಮೂರ್ತಿ ಎಂ., ೨೦೦೮, ಕನ್ನಡ ಶಾಸನಗಳ ಸಾಹಿತ್ಯಿಕ ಅಧ್ಯಯನ, ಬೆಂಗಳೂರು, ಪುಟ. ೩೭೯–೮೦.

೧೩೫. ಅದೇ ಪುಟ. ೩೮೦.

೧೩೬. ಎಫಿ.ಇಂ.ಸಂ. XXIX, ಪುಟ. ೧೪೦.

# ಅಧ್ಯಾಯ – ೪

## ಆರ್ಥಿಕ ವ್ಯವಸ್ಥೆ

- ಕೃಷಿ
- ನೀರಾವರಿ
- ಬೆಳೆಗಳು
- ತೆರಿಗೆಗಳು
- ವ್ಯಾಪಾರ
- ತೂಕ ಮತ್ತು ಅಳತೆಗಳು
- ನಾಣ್ಯಪದ್ಧತಿ

# ಆರ್ಥಿಕ ವ್ಯವಸ್ಥೆ

ಯಾವುದೇ ಒಂದು ಪ್ರದೇಶದ ಅಭಿವೃದ್ಧಿ ಆ ದೇಶದ ಆರ್ಥಿಕ ಸಂಪತ್ತನ್ನು ಅವಲಂಬಿಸಿರುತ್ತದೆ. ಅದು ಅಲ್ಲಿಯ ನೈಸರ್ಗಿಕ ಸಂಪನ್ಮೂಲಗಳು ಜನ-ಜೀವನ ಹಾಗೂ ಮಾನವನ ದುಡಿಮೆಯ ಪರಿಶ್ರಮದ ಫಲವಾಗಿ ಆ ದೇಶದ ಬೆನ್ನೆಲುಬು ಆರ್ಥಿಕ ವ್ಯವಸ್ಥೆಯಾಗಿದ್ದು ಇದು ಪ್ರಮುಖವಾಗಿ ಆರ್ಥಿಕ ಬೆಳವಣಿಗೆಯಲ್ಲಿ ಪ್ರಗತಿಯ ಹಂತವನ್ನು ತಿಳಿಯಲು ಹೆಚ್ಚಿನ ಮಹತ್ವವುಳ್ಳದ್ದಾಗಿದೆ. ಕೌಟಿಲ್ಯನು ಕ್ರಿ.ಪೂ. ೩ನೇ ಶತಮಾನದಲ್ಲಿಯೇ ತನ್ನ ಕೃತಿಯಾದ 'ಅರ್ಥಶಾಸ್ತ್ರ'ದಲ್ಲಿ ರಾಜ್ಯದ ಆರ್ಥಿಕ ವ್ಯವಸ್ಥೆಯ ಪ್ರಾಮುಖ್ಯತೆಯನ್ನು ದೀರ್ಘವಾಗಿ ಪ್ರಸ್ತಾಪಿಸಿದ್ದಾನೆ. ಹೀಗಾಗಿ ಹಲವಾರು ವಿದ್ವಾಂಸರು ನಂತರದ ಕಾಲದಲ್ಲಿ ಆರ್ಥಿಕ ಪ್ರಾಮುಖ್ಯತೆಯನ್ನು ವಿವರಿಸಿದ್ದಾರೆ. ಹೀಗಾಗಿ ಒಂದು ದೇಶದ ಆರ್ಥಿಕ ಅಭಿವೃದ್ಧಿ ಅಲ್ಲಿ ದೊರೆಯುವ ಸಂಪನ್ಮೂಲಗನ್ನು ಆಧರಿಸಿರುತ್ತದೆ.

ಒಂದು ದೇಶದ ಆರ್ಥಿಕ ಬೆಳವಣಿಗೆಯ ವ್ಯವಸ್ಥೆಯು ಪ್ರಮುಖವಾಗಿ ಕೃಷಿಗೆ ಸಂಬಂಧಿಸಿದ ನೀರಾವರಿ ಈ ನೀರಾವರಿಗೆ ಸಂಬಂಧಪಟ್ಟಂತೆ ಕೆರೆ-ಕಟ್ಟೆಗಳ ನಿರ್ಮಾಣ ಬಾವಿಗಳ ಕೊರೆತ ಆ ಕಾಲದಲ್ಲಿ ಬೆಳೆಯುತ್ತಿದ್ದ ವಿಭಿನ್ನ ಬೆಳೆಗಳು ಒಂದು ಕಡೆಯಾದರೆ ಮತ್ತೊಂದು ಕಡೆ ವಾಣಿಜ್ಯೀಕರಣಕ್ಕೆ ಸಂಬಂಧಪಟ್ಟಂತೆ, ವ್ಯಾಪಾರ ಆ ಕಾಲದ ಪ್ರಮುಖ ಆರ್ಥಿಕ ಪ್ರಗತಿಯ ಒಂದು ಭಾಗವಾಗಿತ್ತು.

ಇವುಗಳ ದೃಷ್ಟಿಯಿಂದ ವ್ಯಾಪಾರದಲ್ಲಿ ಸ್ಥಳೀಯ, ಆಂತರಿಕ, ದೇಶ, ವಿದೇಶಗಳೊಂದಿಗೆ ವ್ಯಾಪಾರೀಕರಣದ ಹಿನ್ನೆಲೆಯಿಂದ ವ್ಯವಹಾರಗಳನ್ನು ಅಂದಿನ ಜನ ಹೊಂದಿದ್ದರು. ಪ್ರಮುಖವಾಗಿ ವ್ಯಾಪಾರೀಕರಣದ ದೃಷ್ಠಿಯಿಂದ ಅನೇಕ ಸಂಘ ಸಂಸ್ಥೆಗಳು ಸ್ಥಾಪನೆಯಾಗಿ, ಅಯ್ಯಾವೊಳೆ ಐನೂರರ್ವ್ವರು, ಗವರೆ ಗಾತ್ರಿಕ, ತೆಲ್ಲಿಗ ಮೊದಲಾದ ಗುಂಪುಗಳು ಕಂಡುಬರುತ್ತಿದ್ದವು. ಹೀಗೆ ವ್ಯಾಪಾರಿಗಳಲ್ಲದೆ ಆ ಕಾಲದಲ್ಲಿ ಹಲವಾರು ಉದ್ಯೋಗಗಳು ಪ್ರಚಲಿತದಲ್ಲಿದ್ದವು. ಗಾಣಿಗರು, ಬಿಲ್ಲ, ನೇಕಾರರು ಹೀಗೆ ಹಲವಾರು ಉದ್ಯೋಗಗಳು ಕಾರ್ಖಾನೆ ಪ್ರಚಲಿತದಲ್ಲಿದ್ದಂತೆ ತೋರುತ್ತದೆ.

**ಕೃಷಿ:**

ವ್ಯವಸಾಯವು ರಾಜ್ಯದ ಪ್ರಗತಿಯ ಬೆನ್ನೆಲುಬಾಗಿದ್ದು, ಹಾವೇರಿ ಜಿಲ್ಲೆಯ ಆರ್ಥಿಕ ವ್ಯವಸ್ಥೆಯನ್ನು ಶಾಸನಗಳಲ್ಲಿ ಅವಲೋಕಿಸಿದಾಗ ಆ ಕುರಿತಂತೆ ಬಹುತೇಕ ಮಾಹಿತಿಗಳು

ದೊರೆಯುತ್ತವೆ. ಇತಿಹಾಸ ಪೂರ್ವಕಾಲದಿಂದಲೂ ಪಾರಂಪರಿಕವಾಗಿ ಬೆಳೆದು ಬಂದಿರುವ ಒಕ್ಕಲುತನವೇ ಈ ಜಿಲ್ಲೆಯ ಮುಖ್ಯ ಕಸುಬಾಗಿ ಪ್ರತಿನಿಧಿಸುತ್ತದೆ. ಅಲ್ಲದೆ ಇಲ್ಲಿಯ ಜನರ ಜೀವನೋಪಾಯದ ಮಾರ್ಗವೂ ಆಗಿತ್ತು. ಆದ್ದರಿಂದಲೇ ವ್ಯವಸಾಯದ ಅಭಿವೃದ್ಧಿಯೆಂದರೆ ಒಂದು ನಾಡಿನ ಇಲ್ಲವೇ ಇಡೀ ರಾಷ್ಟ್ರದ ಅಭಿವೃದ್ಧಿಯ ಸಂಕೇತ ಎಂಬುದನ್ನು ಪ್ರಾಚೀನ ಸಾಮಾಜಿಕರು ಚೆನ್ನಾಗಿ ತಿಳಿದಿದ್ದರು.[೧]

ಕೃಷಿಯನ್ನು ಅವಲಂಬಿಸಲು ನಿಸರ್ಗದತ್ತವಾದ ಭೂಮಿ ಪ್ರಮುಖವಾದದ್ದು ಆಗಿದ್ದು ತನ್ನ ಗರ್ಭದಿಂದ ಹೊರಟ ಧಾನ್ಯಗಳಿಂದ ಜನರನ್ನು ಸಾಕುವ ಭೂಮಿಯನ್ನು ತಾಯಿಯೆಂದು, ಧಾನ್ಯಗಳನ್ನು ಬೆಳೆಯುವ ರೈತರನ್ನು ಭೂದೇವಿಯ ಮಕ್ಕಳೆಂದು ನಂಬಲಾಗಿತ್ತು. ಈ ದೃಷ್ಟಿಯಿಂದ ಪ್ರಾಚೀನರು ಸಾಗುವಳಿ ಭೂಮಿಯನ್ನು ನೀರು ಉಣ್ಣುವ ತತ್ವದ ಮೇಲೆ ಎರಡು ವಿಧವಾಗಿ ವಿಂಗಡಿಸಿದ್ದರು. ಅವುಗಳಲ್ಲಿ ಮಳೆನೀರನ್ನು ಆಶ್ರಯಿಸಿದ್ದನ್ನು 'ದೇವಮಾತೃಕವೆಂದು" ನದಿ, ಹಳ್ಳ, ಕೊಳ್ಳ, ಕೆರೆ – ಬಾವಿಗಳನ್ನು ಆಶ್ರಯಿಸಿದ್ದ ಭೂಮಿಗೆ 'ನದಿಮಾತೃಕ'ವೆಂದು ಕರೆಯುತ್ತಿದ್ದರು.[೨]

ನೀರು ಉಣ್ಣುವ ತತ್ವದ ಮೇಲೆ ಭೂವಿಂಗಡಣೆಯಾಗಿದ್ದರೂ ಶಾಸನಗಳಲ್ಲಿ ಪಾರಿಭಾಷಿಕ ಪದಗಳು ಬರುವುದಿಲ್ಲ. ಅವುಗಳಿಗೆ ಪ್ರತಿಯಾಗಿ 'ಬೆದ್ದಲೆ' ಹಾಗೂ 'ಗದ್ದೆ' ಪ್ರಯೋಗವಾಗಿವೆ. ಕ್ರಿ.ಶ. ೧೦೭೯ರ ಹಿರೇಕೆರೂರ ತಾಲ್ಲೂಕಿನ ಮತ್ತಿಹಳ್ಳಿ ಶಾಸನದಲ್ಲಿ[೩] ಕೃಷಿಯ ಬಗ್ಗೆ ಉಲ್ಲೇಖಗೊಂಡಿದೆ. ಇದರಲ್ಲಿ

**"ಬಲ್ಲಧರಿಯ ಹರಿಯಲು ಗದ್ದೆ ಮತ್ತ ೧ – ದೇವರ ಪಶ್ಚಿಮ**
**ಭಾಗದ ಬೆಟ್ಟದ ಮೇಲೆ ಬೆದ್ದಲೆ ಮತ್ತ ೧"**

ಹೀಗೆ ಗದ್ದೆ ಹಾಗೂ ಬೆದ್ದಲೆಗಳು ಜೊತೆಜೊತೆಯಾಗಿ ಉಲ್ಲೇಖಗೊಂಡಿರುವುದನ್ನು ಕಾಣಬಹುದಾಗಿದೆ. ತೇದಿ ರಹಿತ ಹಾವೇರಿ ತಾಲ್ಲೂಕಿನ ಹರಳಹಳ್ಳಿ ಗ್ರಾಮದ ಶಾಸನದಲ್ಲಿ[೪] ಸೇನಭೋವ ನರಸಿಂಹ ದೇವರ ಮಾನದ ಹೊಲದ ಉಲ್ಲೇಖವಿದೆ.

ಕ್ರಿ.ಶ. ೧೧೪೯ರ ಎಮ್ಮಿಗನೂರು ಶಾಸನದಲ್ಲಿ[೫] ಗದ್ದೆಗೆ ಪ್ರತಿಯಾಗಿ ಕೆಯ್ ಎಂಬ ಉಲ್ಲೇಖವು ಕಂಡುಬರುತ್ತದೆ. ತೇದಿರಹಿತ ಹಾನಗಲ್ಲು ತಾಲೂಕಿನ ತಿಳುವಳ್ಳಿ ಶಾಸನದಲ್ಲಿ[೬] ಬೆದ್ದಲೆಗೆ ಪ್ರತಿಯಾಗಿ 'ಪೊಲ'ದ ಉಲ್ಲೇಖವಿದೆ. ಕ್ರಿ.ಶ. ೧೧೭೪ರ ರಟ್ಟಿಹಳ್ಳಿ ಶಾಸನದಲ್ಲಿ ಹೊತು ಮಣ್ಣಿನ ಗದ್ದೆಯ[೭] ಉಲ್ಲೇಖವಿದೆ. ಕ್ರಿ.ಶ. ೧೭೨೮ರ ಹಿರೇಕೆರೂರ ತಾಲೂಕಿನ ನೂಲಗೇರಿ ಶಾಸನದಲ್ಲಿ ಸೇನಭೋವ ಶ್ರೀರಂಗನ ಮಗ ನಾರಿಯಣ್ಣನ ಹೊಲದ ಉಲ್ಲೇಖ ಕಂಡು ಬರುತ್ತದೆ. ಕ್ರಿ.ಶ. ೧೨೫೯ರ ಹಾನಗಲ್ಲು ತಾಲೂಕಿನ ತಿಳುವಳ್ಳಿ[೮] 'ಬೆನಚಗಲ್ಲ ಮರಡಿ' ಎಂಬುವುದರ ಪ್ರಸ್ತಾಪವಿದೆ. ತೇದಿ ರಹಿತ ಹಿರೇಕೆರೂರು ತಾಲೂಕಿನ ನಾಗವಂದ ಶಾಸನದಲ್ಲಿ[೯]

ಹೊಲದ ಉಲ್ಲೇಖವಿದೆ. ಹಾವೇರಿ ತಾಲೂಕಿನ ತೇದಿ ರಹಿತ ಗುತ್ತಲ ಶಾಸನದಲ್ಲಿ[೯] ಗುತ್ತೊಳಲು ದೇಸಾಯಿ ಹನುಮಂತಗೌಡನ ಗೌಡಕಿಯ ಮಾನ್ಯದ ಹೊಲದ ಸೀಮೆಯ ವಿಷಯ ತಿಳಿಸಿದೆ. ಹೀಗಾಗಿ ಭೂಮಿಯ ಸಾಗುವಳಿ ವ್ಯವಸ್ಥೆಯನ್ನು ಅಭಿವೃದ್ಧಿಗೊಳಿಸುವ ವ್ಯವಸ್ಥೆ ಅಂದಿನ ಕಾಲದಲ್ಲಿ ರೂಢಿಯಲ್ಲಿತ್ತು.

**ನೀರಾವರಿ:**

ಕೃಷಿಗೆ ಅತ್ಯವಶ್ಯಕವಾದ ನೀರನ್ನು ಕೃತಕ ರೀತಿಯಲ್ಲಿ ಸರಬರಾಜು ಮಾಡುವ ವಿಧಾನವೇ ನೀರಾವರಿ ವ್ಯವಸ್ಥೆ. ಪುರಾತನ ಕಾಲದಿಂದಲೂ ಜಲವಾಚಕಕ್ಕೆ ಸಂಬಂಧಿಸಿದಂತೆ ಶಾಸನಗಳಲ್ಲಿ ಅಂಬುಧಿ, ಅರ್, ಏರಿ, ಕಾಲುವೆ, ಹೊಂಡ, ಕೊಳ, ತಟಾಕ, ತೊರೆ, ಬಾವಿ, ಹಳ್ಳ ಮುಂತಾದ ಉಲ್ಲೇಖಗಳು ಕಂಡುಬಂದಿದ್ದು, ಇವುಗಳಿಂದ ನೀರನ್ನು ಸಂಗ್ರಹಿಸಿ ವ್ಯವಸಾಯಕ್ಕೆ ಉಪಯೋಗಿಸುತ್ತಿದ್ದುರು ಕಂಡುಬಂದಿದೆ. ಕೃಷಿಗೆ ಅಗತ್ಯವಾದ ನೀರಿನ ಸಂಗ್ರಹಣೆ ಇತಿಹಾಸ ಆರಂಭಕಾಲದಲ್ಲಿ ಕೆರೆಕಟ್ಟೆಗಳ ನಿರ್ಮಾಣವು ಒಂದು ಧರ್ಮಕಾರ್ಯವೆಂದು ಪರಿಗಣಿಸಲಾಗಿತ್ತು.

ಪ್ರಾಚೀನ ಕಾಲದಿಂದಲೂ ನಮ್ಮ ಪೂರ್ವಜರು, ಆಳ್ವಿಕೆ ಮಾಡಿದ ಅರಸರು ಮೋಕ್ಷಮಾರ್ಗ ಲಭಿಸಲೆಂದು ತಟಾಕಗಳನ್ನು ನಿರ್ಮಿಸುತ್ತಿದ್ದರು. ಈ ಧರ್ಮಕಾರ್ಯಗಳಲ್ಲಿ ತಟಾಕದ ನಿರ್ಮಾಣ ಗುಡಿಗೋಪುರದ ನಿರ್ಮಾಣ, ಎಲ್ಲವೂ ಅತ್ಯಂತ ಪ್ರಮುಖ ಕಾರ್ಯಗಳು ಆಗಿದ್ದವೆಂದು ಭಾವಿಸಿದ್ದರು. ಉದಾ – ಲಕ್ಷ್ಮೀಧರನ ಹಂಪೆಯ ಶಾಸನವು ತಿಳಿಸುವಂತೆ ಲಕ್ಷ್ಮೀಧರನ ತಾಯಿ ಆತನು ಚಿಕ್ಕಮಗುವಾಗಿದ್ದಾಗ ಆತನಿಗೆ ಹಾಲು ಉಣಿಸುವಾಗ, ತೊಟ್ಟಿಲು ತೂಗುವಾಗ **“ಕೆರೆಯಂ ಕಟ್ಟಿಸಿ ಬಾವಿಯಂ ಸವೆಸು (ತೊಡಿಸು) ದೇವಗಾರಂ ಮಾಡಿಸು”** ಎಂದು ರಾಗವಾಗಿ ಹಾಡುತ್ತಿದ್ದಳು ಎಂಬ ಅಂಶ ಕಂಡುಬರುತ್ತದೆ. ಇದರಿಂದ ನಮ್ಮ ಪೂರ್ವಜರು ಬಾವಿಗಳನ್ನು, ಕೆರೆಗಳನ್ನು, ಕೂಳಗಳನ್ನು ಇನ್ನೂ ಮುಂತಾದ ಜನಹಿತಕಾರ್ಯಗಳನ್ನು ಮಾಡಿ ಪುಣ್ಯಪ್ರಾಪ್ತಿ ಮಾಡಿಕೊಳ್ಳುತ್ತಿದ್ದರು ಹೀಗೆ ಮಾಡುವುದು ಪುಣ್ಯಕಾರ್ಯ ಅತ್ಯಂತ ಶ್ರೇಷ್ಠ ಎಂದು ಪರಿಗಣಿಸಿದ್ದು”[೧೦] ನೀರಾವರಿಗೆ ಸಂಬಂಧ ಪಟ್ಟಂತೆ ಈ ಜಿಲ್ಲೆಯ ಅನೇಕ ಶಾಸನಗಳಲ್ಲಿ ಉಲ್ಲೇಖವಾಗಿರುವಂತೆ ಸುಮಾರು ೭ & ೮ ನೇ ಶತಮಾನದ ಗುಡಗುಡಿಯ ಶಾಸನದಲ್ಲಿ[೧೧] ಕೆರೆಯ ನಿರ್ಮಾಣದ ಉಲ್ಲೇಖವಿದೆ. ಕ್ರಿ.ಶ. ೧೦೨೭ರ ಯಳವಟ್ಟಿಶಾಸನದಲ್ಲಿ ಕುಂದನು ಬನವಾಸಿನಾಡನ್ನಾಳುವಾಗ ಕೆರೆಯ ತೂಬಿನ ನಿರ್ಮಾಣ, ಕ್ರಿ.ಶ. ೧೦೬೦ರ ಹಿರೇಕೆರೂರ ಶಾಸನದಲ್ಲಿ[೧೨] ದಂಡನಾಯಕ ಗೊಂಡಮಯ್ಯನಿಂದ ಪಿರಿಯಕೆರೆಯೂರಿನ ದೊಡ್ಡಕೆರೆಗೆ ಪೆರ್ಜುಂಕ ಸುಂಕದಾನ ನೀಡಿದನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೦೬೨ರ ಹುಲಗೂರ ಶಾಸನದಲ್ಲಿ[೧೩] ಮಹಾಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕ ದೇವಪಾಲ ಅರಸನು ಪುಲ್ಲಂಗೂರು ಆಳುವಿಗೆ ಕೆರೆಗಳಿಗೆ ನೀಡಿದ ಭೂದಾನ ಉಲ್ಲೇಖಿಸುತ್ತದೆ ಹಾಗೂ ಯಳವಟ್ಟಿಯ

ದಂಡನಾಯಕ ಚರೋಜನ ಆದೇಶದಂತೆ ಕುಪ್ಪಟೂರ ಗ್ರಾಮದ ಭೂದಾನ, ಬನವಾಸಿ – ೧೨೦೦೦ದ ಪೆರ್ಗಡೆ ಮುದಿರಾಜನ ಆದೇಶದಂತೆ ತಿಳುವಳ್ಳಿಯಲ್ಲಿ ಮಾಳಪಯ್ಯ ಬಿಟ್ಟ ದತ್ತಿಯ ಉಲ್ಲೇಖವಿದೆ.

ಕ್ರಿ.ಶ. ೧೦೭೭ರ ಹಿರೇಕೆರೂರ ತಾಲ್ಲೂಕಿನ ಚಿಕ್ಕೆರೂರ ಶಾಸನದಲ್ಲಿ[೧೫] ಯುದ್ಧದಲ್ಲಿ ಮರಣ ಹೊಂದಿದ ವೀರನೊಬ್ಬನಿಗೆ ಕಿರಿಯಕೆರೆವೂರಿನ ಸಾಸಿರಮಹಾಜನರು ನೀಡಿದ ಭೂದಾನವನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೦೮೮ರ ಬಾಳಂಬೀಡು ಶಾಸನದಲ್ಲಿ[೧೬] ದೇವಯ್ಯನ ಭೂತಗಾವುಂಡನು ಪಿರಿಯ ಕೆರೆಯೂರಿನ ಮಹಾಜನ ಸಾಸಿರ್ವರ ಸಮ್ಮುಖದಲ್ಲಿ ಪಾಂಡುರಂಗೇಶ್ವರ ದೇವರಿಗೆ ನೀಡಿದ ಭೂದಾನದ ವಿವರವಿದೆ. ಕ್ರಿ.ಶ. ೧೧ನೇ ಶತಮಾನದ ಹಾವೇರಿ ತಾಲೂಕಿನ ಬಮ್ಮನಕಟ್ಟಿ ಶಾಸನದಲ್ಲಿ[೧೭] ಕೇತನಿಂದ ಕೆರೆಯ ನಿರ್ಮಾಣ ಬಗ್ಗೆ ವಿವರಿಸುತ್ತದೆ. ಕ್ರಿ.ಶ. ೧೧೩೫ರ ಹಾವೇರಿ ಶಾಸನದಲ್ಲಿ[೧೮] ದಂಡನಾಯಕ ಕುಮಾರ ಪದ್ಮನಾಭನ ವಿನಂತಿಯ ಮೇರೆಗೆ ಕದಂಬ ಮಲ್ಲಿಕಾರ್ಜುನ ದೇವನಿಂದ ಕೆರೆಗೆ ಪುನರ್ದತ್ತಿ ನೀಡಿದ ಬಗ್ಗೆ ಉಲ್ಲೇಖಿಸುತ್ತದೆ. ಕ್ರಿ.ಶ. ೧೧೮೩ರ ರಾಣಿಬೆನ್ನೂರು ತಾಲ್ಲೂಕಿನ ಮೇದೂರು ಶಾಸನದಲ್ಲಿ[೧೯] ಮಹಾಮಂಡಳೇಶ್ವರ ಕುಮಾರ ವೀರವಿಕ್ರಮಾದಿತ್ಯದೇವ, ಸುಸಂಗ ದಂಡನಾಯಕನಿಂದ ಚಾವಿಸೆಟ್ಟಿಯು ಕೆರೆ ಮತ್ತು ಮೂಲಸ್ಥಾನ ಕಲಿದೇವರಿಗೆ ಭೂದಾನ ನೀಡಿದ ಬಗ್ಗೆ ತಿಳಿಸುತ್ತದೆ. ಕ್ರಿ.ಶ. ೧೧–೧೨ನೇ ಶತಮಾನದ ಹಾನಗಲ್ಲು ತಾಲೂಕಿನ ಬೆಳವತ್ತಿಯ ಶಾಸನದಲ್ಲಿ[೨೦] ಶ್ರೀಧರ ದಂಡನಾಯಕನಿಂದ ಹಿರಿಯಕೆರೆಯ ಜೀರ್ಣೋದ್ಧಾರಕ್ಕಾಗಿ ಮುನ್ನೂರ್ವರಿಗೆ ನೂರು ಗದ್ಯಾಣದ ದಾನ ಹಾಗೂ ಮಹಾರಾಣಿಯಿಂದ ಗೋಕುಳೇಶ್ವರ ದೇವಾಲಯಕ್ಕೆ ಗುಂಡನಪಳ್ಳಿ ಗ್ರಾಮದಾನ ನೀಡಿದ ಬಗ್ಗೆ ವಿವರಿಸುತ್ತದೆ. ಕ್ರಿ.ಶ. ೧೩ನೇ ಶತಮಾನದ[೨೧] ಹಾನಗಲ್ಲು ತಾಲೂಕಿನ ದಾಸೆಯ ನಾಯಕನು ನೀಲರಿಗೆಯ ಮಹಾಜನರಿಗೆ ನೀಡಿದ ಕೆರೆಯ ದಾನದ ಬಗ್ಗೆ ಮಾಹಿತಿ ಲಭ್ಯವಾಗಿದೆ. ಕ್ರಿ.ಶ. ೧೩೯೫ರ ಹಿರೇಕೆರೂರು ತಾಲೂಕಿನ ಹೊಸಹಳ್ಳಿ ಶಾಸನದಲ್ಲಿ[೨೨] ಜೋಗಿಸೆಟ್ಟಿಯು ಕಾಲುವೆಯನ್ನು ಬೀಳ ಭೂಮಿಯ ಕಡೆಗೆ ತಿರುಗಿಸಿದ ಮಾಹಿತಿ ಲಭ್ಯವಾಗಿದೆ.

ಕ್ರಿ.ಶ. ೧೫ನೇ ಶತಮಾನದ ಬ್ಯಾಡಗಿ ತಾಲೂಕಿನ ಚಿಕ್ಕಮತ್ತೂರು ಶಾಸನದಲ್ಲಿ[೨೩] ಮಾದರಸ ಒಡೆಯನು ಮತ್ತೂರಿನ ಕೆರೆ ಕಟ್ಟಿಸಿದ ವಿಠಪನಿಗೆ ನೀಡಿದ ಭೂದಾನ ಬಗ್ಗೆ ವಿವರ ನೀಡುತ್ತದೆ. ಕ್ರಿ.ಶ. ೧೫೯೯ರ ಸವಣೂರು ತಾಲೂಕಿನ ಶಾಸನದಲ್ಲಿ[೨೪] ಬಂಕಾಪುರ ಕೋಟೆಯ ಅಧಿಕಾರಿ ಖಾನ–ಎ–ಅಜಂ ಖುಸ್ರುದ್‌ಖಾನನಿಂದ ನೀಲಿಗೆ ಗ್ರಾಮದಲ್ಲಿ ಬಾವಿಯ ನಿರ್ಮಾಣ ಮಾಡಿದ ಬಗ್ಗೆ ವಿವರ ನೀಡುತ್ತದೆ. ಕ್ರಿ.ಶ. ೧೫೮೧ರ ಹಿರೇಕೆರೂರ ತಾಲ್ಲೂಕಿನ ಸಾತೇನಹಳ್ಳಿ ಶಾಸನದಲ್ಲಿ[೨೫] ಸಂಖನಾಯಕನ ಅಧಿಕಾರಿಯಿಂದ ಹನುಮಂತದೇವರಿಗೆ ಹನುಮಸಮುದ್ರ ಗ್ರಾಮದಾನದ ಉಲ್ಲೇಖವಿದೆ. ಕ್ರಿ.ಶ. ೧೮೫೪–೫೫ರ ಸವಣೂರ ತಾಲೂಕಿನ ಶಾಸನದಲ್ಲಿ[೨೬] ಬಾವಿಯನ್ನು ಅಗಿಯಲಿಕ್ಕೆ ದಿಲೇರಖಾನನು ನೀಡಿದ ಆದೇಶದ ಉಲ್ಲೇಖವಿದೆ. ತೇದಿರಹಿತ ಇಟಗಿ ಶಾಸನದಲ್ಲಿ[೨೭] ಮಹಾಪ್ರಧಾನ ಹೆಗ್ಗಡೆ ಕೇಶಿರಾಜಯ್ಯನಿಂದ ಗಂಗಸಮುದ್ರಕೆರೆಗೆ

ಭೂದಾನ ನೀಡಿ ಉಲ್ಲೇಖವಿದೆ. ತೇದಿರಹಿತ ಸವಣೂರ ತಾಲೂಕಿನ ಯಲವಿಗಿ ಶಾಸನದಲ್ಲಿ[೬೮] ಯಲಲುವಿಗೆ ಗ್ರಾಮದ ಕೆರೆಯ ಜೀರ್ಣೋದ್ಧಾರಕ್ಕಾಗಿ ಖಂಡೇರಾಯನಿಗೆ ದಾನ ನೀಡಿದ್ದನ್ನು ತಿಳಿಸುತ್ತದೆ. ತೇದಿರಹಿತ ಹಿರೇಕೆರೂರು ತಾಲ್ಲೂಕಿನ ಸಿರಗಂಬಿ ಶಾಸನದಲ್ಲಿ[೬೯] ಕೆರೆಯ ಜೀರ್ಣೋದ್ಧಾರಕ್ಕಾಗಿ ನೀಡಿದ ಹನ್ನೆರಡು ಮತ್ತರು ಭೂಮಿದಾನ ನೀಡಿದ ವಿಷಯವನ್ನು ತಿಳಿಸುತ್ತದೆ.

—ಕ್ರಿ.ಶ. ೧೦೫೩ರ ಹಾನಗಲ್ಲು ತಾಲೂಕಿನ ನೀಲರಗಿ ಶಾಸನದಲ್ಲಿ[೭೦] ಮಹಾಮಂಡಳೇಶ್ವರ ಹರಿಕೇಸರಿಯಿಂದ ಪಿರಿಯಕೆರೆ ಮತ್ತು ಕಲಿದೇವರ ಸಲುವಾಗಿ ನೀಲರಿಗಿಯ ಮೂನ್ನೂರ್ವರಿಗೆ ದತ್ತಿಯನ್ನು ನೀಡಿದ ಬಗ್ಗೆ ದಾಖಲಿಸಿದೆ. ಕ್ರಿ.ಶ. ೯೪೮ರ ಹಾನಗಲ್ಲು ತಾಲೂಕಿನ ಕುಂಟನಹೊಸಳ್ಳಿ ಶಾಸನದಲ್ಲಿ[೭೧] ಯರಗಾಗಿ ಮಣಿಯಮ್ಮ ಮತ್ತು ಪಾಡುವ ಕರಿಯಮ್ಮರಿಂದ ಕೆರೆಯ ಜೀರ್ಣೋದ್ಧಾರಕ್ಕಾಗಿ ದಾನ ನೀಡಿದ್ದನ್ನು ದಾಖಲಿಸಿದೆ.

ಹೀಗೆ ಹಾವೇರಿ ಜಿಲ್ಲೆಯಲ್ಲಿ ಕಂಡುಬರುವ ಶಾಸನಗಳಲ್ಲಿ ಉಲ್ಲೇಖಗೊಂಡಂತೆ ನೀರಾವರಿ ವ್ಯವಸ್ಥೆ ಅಂದಿನ ಕಾಲದಲ್ಲಿ ವ್ಯವಸಾಯಕ್ಕೆ ಅತ್ಯುಪಯುಕ್ತವಾಗಿ ಯೋಗ್ಯವಾಗಿತ್ತು ಹಾಗೂ ಅಂದಿನ ಜನ ಜೀವನ ವ್ಯವಸ್ಥೆಯಲ್ಲಿ ಅತ್ಯಂತ ಮಹಾತ್ಕಾರ್ಯವಾಗಿತ್ತು ಎಂಬುದನ್ನು ಗಮನಿಸಬಹುದು. ಕ್ರಿ.ಶ. ೧೦೮೧ರ ರಾಣಿಬೆನ್ನೂರು ತಾಲೂಕಿನ ನಿಟ್ಟೂರು ಶಾಸನದಲ್ಲಿ[೭೨] ಭೂದಾನದ ಉಲ್ಲೇಖ ಕಂಡುಬರುತ್ತದೆ. ಕ್ರಿ.ಶ. ೧೧೮೩ರ ಮೈದೂರ ಶಾಸನದಲ್ಲಿ ಮಹಾಮಂಡಳೇಶ್ವರ, ಕುಮಾರ ವೀರವಿಕ್ರಮಾದಿತ್ಯ ದೇವ, ಸುಸಂಘ ದಂಡನಾಯಕರಿಂದ ಜಾವಿಶೆಟ್ಟಿಯ ಕೆರೆ ಮತ್ತು ಮೂಲಸ್ಥಾನ ಕಲಿದೇವರಿಗೆ ಭೂದಾನ ನೀಡಿದ ಉಲ್ಲೇಖವಿದೆ.

**ಬೆಳೆಗಳು:**

ವ್ಯವಸಾಯ ಆಧಾರಿತ ಭೂಮಿಯಲ್ಲಿ ಬೆಳೆಗಳನ್ನು ಬೆಳೆಯುವುದು ಪ್ರಮುಖವಾಗಿದ್ದು, ಈ ಜಿಲ್ಲೆಯ ಶಾಸನಗಳ ಅವಲೋಕನದಿಂದ ಹೊಲ, ಗದ್ದೆ, ತೋಟ, ಬೆಳೆಗಳು ಹಾಗೂ ಮತ್ತಿತರ ಗಿಡಮರಗಳ ಹೂವುಗಳ ಪ್ರಸ್ತಾಪ ಕಂಡುಬಂದಿದ್ದು. ಕ್ರಿ.ಶ. ೧೨೦೪ರ ಹಿರೇಕೆರೂರು ತಾಲೂಕಿನ ಸಾತೇನಹಳ್ಳಿ ಶಾಸನದಲ್ಲಿ[೭೩] ಬಹಿರ್ಪುರದ ವರ್ಣನೆಯನ್ನು ಕೊಡಲಾಗಿದೆ. ಕ್ರಿ.ಶ. ೧೨೩೯ರ ಹಾನಗಲ್ಲು ತಾಲೂಕು ತಿಳುವಳ್ಳಿ[೭೪] ಶಾಸನದಲ್ಲಿ ಸಂಕೇಶ್ವರ ದೇವರ ಹೂದೋಟದ ಉಲ್ಲೇಖವಿದೆ. ಕ್ರಿ.ಶ. ೧೨೩೯ ಹಂಸಭಾವಿ ಶಾಸನದಲ್ಲಿ ರಾಗಿಯಂತೆ ಜೋಳವು ಹಕ್ಕಲದ ಒಂದು ಬೆಳೆಯಾಗಿದ್ದು, ಅದರಿಂದ ಶಾಸನದಲ್ಲಿ[೭೫] 'ಜೋಳದ ಪಾಳಿ' ಗಾದೆ ಬಳಕೆಯಾಗಿದೆ. ಕ್ರಿ.ಶ. ೧೨೪೭ರ ಮಡಲೂರ ಶಾಸನದಲ್ಲಿ[೭೬] ನೇರಿಲಕೆಯ್ ಮತ್ತು ಹುಣಸೆ ಮರಗಳ ಉಲ್ಲೇಖವಾಗಿರುವುದು ವಿಶೇಷವಾಗಿ ಕಂಡುಬರುತ್ತದೆ. ಕ್ರಿ.ಶ. ೧೦೨೯ರ ತಿಳುವಳ್ಳಿ ಶಾಸನದಲ್ಲಿ[೭೭] ಈಳೆಯ ಗದ್ದೆಯ ಉಲ್ಲೇಖವಿದೆ. ಹೂಗಿಡ–ಮರಗಳು, ಬಳ್ಳಿಗಳು, ಉದ್ಯಾನಗಳು ಬೆಳೆಸಲ್ಪಡುತ್ತಿದ್ದು ಒಂದೊಂದು ಊರಿನ ಹೊರಭಾಗದಲ್ಲಿಯೂ 'ಪುಷ್ಪವಾಟಿ'ಗಳು ಇದ್ದವು

ಎಂದು ಬಣ್ಣಿಸಿದ್ದವು. ಹೀಗೆ ಶಾಸನಗಳಲ್ಲಿ ಬೇಸಾಯದ ಬೆಳೆಗಳು, ತೋಟಗಾರಿಕೆ ಬೆಳೆಗಳು, ಮರಗಿಡಗಳು, ಹೂ ಬಳ್ಳಿಗಳು ಹಾಗೂ ಇನ್ನಿತರ ಅಂಶಗಳ ಬಗ್ಗೆ ಉಲ್ಲೇಖವಿರುವುದನ್ನು ಕಾಣಬಹುದು.

**ತೆರಿಗೆಗಳು:**

ರಾಜ್ಯದ ಮೂಲ ಆದಾಯಗಳಲ್ಲಿ ತೆರಿಗೆಗಳು ಅತ್ಯಮೂಲ್ಯ ಭಾಗವಾಗಿದೆ. ರಾಜ್ಯದ ಅಭಿವೃದ್ಧಿ ಹಾಗೂ ಸುಭದ್ರತೆ ಅದರ ಹಣಕಾಸಿನ ವ್ಯವಸ್ಥೆಯನ್ನು ಆಧರಿಸುತ್ತದೆ. ಅಂದರೆ ಕೃಷಿಯಿಂದ ಉತ್ಪಾದಿಸುವ ವಸ್ತುಗಳು, ವ್ಯಾಪಾರದ ವಸ್ತುಗಳು ಕೆಲವೊಮ್ಮೆ ದೇವರಿಗೆ ದಾನರೂಪದಲ್ಲಿ ತೆರಿಗೆಗಳನ್ನು ಸದಾ ನೀಡಬೇಕಾಗುತ್ತಿತ್ತು. ಆದ್ದರಿಂದಲೇ ರಾಜ್ಯದ ಸಪ್ತಾಂಗಗಳಲ್ಲಿ ಕೋಶವನ್ನು ಸೇರಿಸಿದ್ದಾರೆ ಇಂತಹ ಕೋಶವನ್ನು ತುಂಬುವ ಅನೇಕ ಮಾರ್ಗಗಳನ್ನು ಕೌಟಿಲ್ಯ ಏಳು ವಿಶಾಲ ಗುಂಪುಗಳಲ್ಲಿ ಕ್ರೂಢಿಕರಿಸಿದ್ದಾನೆ. ಅವುಗಳಲ್ಲಿ ಆಸ್ತಿ ತೆರಿಗೆ, ಸಿದ್ದಾಯ, ಆರುವಣ, ವ್ಯಾಪಾರ, ವೃತ್ತಿ, ಕೈಗಾರಿಕೆ, ಪೆರ್ಜುಂಕ ದಂಡ, ಸುಂಕ ಈ ರೀತಿಯ ತೆರಿಗೆಗಳನ್ನು ಕಾಣುತ್ತೇವೆ[೩೮].

ವ್ಯವಸಾಯ ಹಾಗೂ ಭೂ ಮೂಲದ ಪದಾರ್ಥಗಳೇ ಕಸುಬು ಕೈಗಾರಿಕೆಗಳಿಗೆ ಮೂಲವಸ್ತುಗಳು. ಆದುದರಿಂದ ಅವು ಒಂದನ್ನು ಉಳಿದು ಮತ್ತೊಂದು ಇಲ್ಲವೆಂಬಂತೆ ಒಂದಕ್ಕೊಂದು ಬೆಸೆದುಕೊಂಡಿರುವ ವಸ್ತುಗಳ ಮೇಲೆ ಪ್ರಾಚೀನ ಕಾಲದಿಂದಲೂ ಕಂಡುಬಂದಿದೆ[೩೯]. ಪ್ರಾಚೀನ ಕಾಲದಲ್ಲಿ ಸುಂಕವನ್ನು ವಿಧಿಸಲಾಗುತ್ತಿತ್ತು. ಪ್ರಭುವರ್ಗದವರ ಪ್ರಮುಖ ಆದಾಯ ಇದಾಗಿತ್ತು. ಹೀಗಾಗಿ ಜನರ ಮೇಲೆ ಸುಂಕದ ಭಾರವೂ ಸಾಕಷ್ಟಿತ್ತು. ಸುಂಕದ ಭಾರಕ್ಕೆ ಹೆದರಿ ಅದನ್ನು ತಪ್ಪಿಸಲು ಕೆಲವರು ಪ್ರಯತ್ನಿಸುತ್ತಿದ್ದರು. ದೇವರ ದಾಸಿಮಯ್ಯನ ಒಂದು ವಚನದಲ್ಲಿ

**"ಹಱಿದ ಗೋಣಿಯಲೊಬ್ಬ ಕಳವೆಯ ತುಂಬಿ**
**ಇರುಳೆಲ್ಲಾ ನಡೆದನಾ ಸುಂಕಕಂಜಿ**
**ಕಳವೆಯಲ್ಲಾ ಹೋಗಿ ಬಱಿಗೋಣಿ ಉಳಿದಿತ್ತು**
**ಅಳಿಮನದವನ ಭಕ್ತಿ ಇಂತಾಯಿತ್ತು ರಾಮನಾಥ॥**

ಎಂದು ಹೇಳಿದ್ದಾನೆ. ಈ ವಚನದಲ್ಲಿ ಕಳವೆ (ಭತ್ತ)ಯ ಸುಂಕಕ್ಕೆ ಹೆದರಿ, ಸುಂಕವನ್ನು ತಪ್ಪಿಸಬೇಕೆಂದು ರಾತ್ರಿ ಹೊತ್ತಿನಲ್ಲಿ ಕಳವೆಯನ್ನು ಸಾಗಿಸುತ್ತಾನೆ. ಹರಿದ ಗೋಣಿ ರಾತ್ರಿ ಕಾಣದೇ ಇದ್ದುದರಿಂದ ಕಳವೆಯಲ್ಲಾ ಚೆಲ್ಲಿಹೋಗಿತ್ತು. ಇಲ್ಲಿ ಸುಂಕದ ಭಾರ ಹಾಗೂ ಅದನ್ನು ತಪ್ಪಿಸಿ ವ್ಯವಹರಿಸುತ್ತಿದ್ದುದನ್ನು ದಾಸಿಮಯ್ಯನು ತಿಳಿಸಿದ್ದಾನೆ. ಇದರಿಂದ ಪ್ರಾಚೀನ ಕಾಲದಲ್ಲಿ ಸುಂಕದ ಭಾರ ಹೆಚ್ಚಾಗಿತ್ತೆಂಬುದು ಸ್ಪಷ್ಟವಾಗುತ್ತದೆ.[೪೦] ಈ ದೃಷ್ಟಿಯಿಂದ ಹಾವೇರಿ ಜಿಲ್ಲೆಯ ಶಾಸನಗಳನ್ನು ಅವಲೋಕಿಸಿದಾಗ ಕ್ರಿ.ಶ. ೮೮೬ ಶಿಗ್ಗಾಂವಿ ಶಾಸನದಲ್ಲಿ[೪೧] ಕುಪ್ಪೆಯನು ಪುಲಿಗೆರೆ – ೩೦೦

ಆಳುವಾಗ ಪೆದ್ದಮನಿಂದ ಶಿಗ್ಗಾಂವಿಯ ತೆರಿಗೆಯ ದಾನವನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೯೬೧ ದೇವಿ ಹೊಸೂರ ಶಾಸನದಲ್ಲಿ[೪೨] ಗರ್ವಿಂದರನು ಬನವಾಸಿ ನಾಡನ್ನಾಳುವಾಗ ಮಹಾಜನರಿಂದ ಹಣದಾನ ನೀಡುವ ಬಗ್ಗೆ ವಿವರಿಸುತ್ತದೆ. ಕ್ರಿ.ಶ. ೯೭೦ ಹುಲಗೂರ ಶಾಸನದಲ್ಲಿ[೪೩] ಗುತ್ತಿಯ ಗಂಗ ಪುಲಿಗೆರೆ – ೩೦೦ ಆಳುವಾಗ ಆತನ ಹೆಂಡತಿ ಅಂಕಬ್ಬರಸಿಯಳಿಂದ ಪುಲ್ಲುಂಗೂರಬ್ಬೆ ದೇವತೆಗೆ ಭೂಮಿ ಹಾಗೂ ಸುಂಕದಾನ ನೀಡಿದನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೦೧೫ರ ಹತ್ತಿಮತ್ತೂರ ಶಾಸನದಲ್ಲಿ[೪೪] ಕೆರೆಯ ಅಧಿಕಾರಿಯಾದ ದಂಡನಾಯಕ ಲೋಕರಸ ಮತ್ತು ದಂಡನಾಯಕ ಮಲ್ಲರಸ ಹಾಗೂ ಅನಂತಮಯ್ಯ ಎಂಬ ಕೆರೆದರೆ ಅಧಿಕಾರಿಗಳ ಉಲ್ಲೇಖವಿದೆ.

ಕ್ರಿ.ಶ. ೧೦೩೩ರ ಕಾಗಿನೆಲೆ ಶಾಸನದಲ್ಲಿ[೪೫] ದೇವಾಲಯಕ್ಕಾಗಿ ಭೂಮಿ ಹಾಗೂ ಚಿನ್ನದಾನದ ಬಗ್ಗೆ ಪ್ರಸ್ತಾಪಿಸುತ್ತದೆ. ಕ್ರಿ.ಶ. ೧೦೩೭ರ ಹುಟ್ಟೂರು ಶಾಸನದಲ್ಲಿ[೪೬] ಅಕ್ಕದೇವಿ ಮತ್ತು ಮಯೂರವರ್ಮನು ಬನವಾಸಿನಾಡನ್ನಾಳುವಾಗ ಪೊಟ್ಟಿಯಾರ ಕೆಂಗೆರೆಗೆ ಸುಂಕಾಧಿಕಾರಿಗಳಿಂದ ಸುಂಕದಾನದ ಬಗ್ಗೆ ಮಾಹಿತಿ ಲಭ್ಯವಿದೆ. ಕ್ರಿ.ಶ. ೧೦೪೮ರ ಚಿಕ್ಕೆರೂರು ಶಾಸನದಲ್ಲಿ[೪೭] ಸಿದ್ಧಾಯದ ಉಲ್ಲೇಖವಿದೆ. ಕ್ರಿ.ಶ. ೧೦೫೨–೫೩ರ ತಿಳುವಳ್ಳಿ ಶಾಸನದಲ್ಲಿ[೪೮] ಪಿರಿಯರಸಿ ಮೈಳಲಾದೇವಿ ಬನವಾಸಿನಾಡನ್ನಾಳುವಾಗ ಸುಂಕಾಧಿಕಾರಿಗಳು ನೀಡಿದ ದಾನದ ಬಗ್ಗೆ ಉಲ್ಲೇಖಿಸುತ್ತದೆ. ಕ್ರಿ.ಶ. ೧೦೫೩ರ ಹಾವನೂರ ಶಾಸನದಲ್ಲಿ[೪೯] ಪೆರ್ಗಡೆ ಬೀಚಿಮಯ್ಯಾದಿಗಳಿಂದ ಮೂಲಸ್ತಾನ ಕಲದೇವರಿಗೆ ಸುಂಕವನ್ನು ಉಲ್ಲೇಖಿಸುತ್ತದೆ.

ಕ್ರಿ.ಶ. ೧೦೫೬ರ ಕಳ್ಳಿಹಾಳ ಶಾಸನದಲ್ಲಿ[೫೦] ಸುಂಕವರ್ಗದ ಚೆಟ್ಟಿದುಯ್ಯಾದಿಗಳಿಂದ ಸಾದೇಶ್ವರ ದೇವರ ನಂದಾದೀವಿಗೆಗಾಗಿ ಸುಂಕದಾನದ ಮಾಹಿತಿ ಲಭ್ಯವಿದೆ, ಕ್ರಿ.ಶ. ೧೧೯೫ರ ಕುಮ್ಮೂರ ಶಾಸನದಲ್ಲಿ[೫೧] ಮಂಡಳೇಶ್ವರ ಜಗದಳೆ ಬೆಟ್ಟಮದೇವರಸನು ಮಹಾಪಸಾಯಿತ ಬಾಗಗಾವುಂಡನಿಂದ ೨೦೦ ಗದ್ಯಾಣ ಪಡೆದ ಕುಮ್ಮೂರ ಗ್ರಾಮದ ಉಲ್ಲೇಖವಿದೆ. ಕ್ರಿ.ಶ. ೧೦೬೦ರ ಹಿರೇಕೆರೂರ ಶಾಸನದಲ್ಲಿ[೫೨] ದಂಡನಾಯಕ ಗೊಂಡಮಯ್ಯನಿಂದ ಪಿರಿಯಕೆರೆಯೂರಿನ ದೊಡ್ಡಕೆರೆಗೆ ಪೆರ್ಜುಂಕ ಸುಂಕದಾನ ನೀಡಿದ ಬಗ್ಗೆ ವಿವರವಿದೆ. ೧೦೬೩ರ ಬಂಕಾಪುರ ಶಾಸನದಲ್ಲಿ[೫೩] ಪಡೆವಳ ಬೀರಯ್ಯ ಅಲಿಮಯ್ಯ ಹಾಗೂ ಶ್ರೀಧರಯ್ಯ ಪೆರ್ಗಡೆಗಳಿಂದ ಇಂದ್ರೇಶ್ವರ ದೇವಾಲಯಕ್ಕೆ ಸುಂಕ ನೀಡಿದ ಬಗ್ಗೆ ವಿವರಿಸುತ್ತದೆ. ಕ್ರಿ.ಶ. ೧೦೭೨ ತಿಳುವಳ್ಳಿ ಶಾಸನದಲ್ಲಿ[೫೪] ಮನೆವೆರ್ಗಡೆ ದಂಡನಾಯಕ ಅಧಿಕಾರಿಯಿಂದ ತಿಳುವಳ್ಳಿಯ ಅಗ್ರಹಾರದ ಮಹಾಜನರಿಗೆ ಪೆರ್ಜುಂಕಾದಿ ಸುಂಕಗಳ ದಾನವನ್ನು ನೀಡಿದ ಬಗ್ಗೆ ವಿವರಿಸುತ್ತದೆ. ಕ್ರಿ.ಶ. ೧೦೭೨ರ ಮತ್ತೊಂದು ತಿಳುವಳ್ಳಿ ಶಾಸನದಲ್ಲಿ[೫೫] ಮಣೆದೆರೆಯ ಉಲ್ಲೇಖವಿದೆ. ಅಂದರೆ ಭೂಮಿ ಹಾಗೂ ನಿವೇಶನ ಮತ್ತು ಪಶು–ಪ್ರಾಣಿಗಳ ಮೇಲೆ ತೆರಿಗೆಯನ್ನು ಹಾಕುತ್ತಿದ್ದರು. ಕ್ರಿ.ಶ. ೧೧೭೨ರ ನೀಡನೇಗಲ ಶಾಸನದಲ್ಲಿ[೫೬] ನೀಡನೇಗಿಲದ ಮಲ್ಲಿಕಾರ್ಜುನ ದೇವರಿಗೆ ಹೆಗ್ಗಡೆ ವಿಠ್ಠರಸ ಮತ್ತು ನಾರಣದೇವರು ನೀಡಿದ ಸುಂಕದಾನದ ಪ್ರಸ್ತಾಪವಿದೆ.

ಕ್ರಿ.ಶ. ೧೦೭೫ ದೇವಗಿರಿ ಶಾಸನದಲ್ಲಿ[೫೭] ದಂಡನಾಯಕ ವೆಣ್ಣಮಯ್ಯನಿಂದ ದೇವಗಿರಿಯ ಕಂಕಾಳೇಶ್ವರ ದೇವರಿಗೆ ಸುಂಕಗಳ ದಾನವನ್ನು ವಿವರಿಸುತ್ತದೆ. ಕ್ರಿ.ಶ. ೧೦೭೭ರ ಹುಲಗೂರು ಶಾಸನದಲ್ಲಿ[೫೮] ಮಣಲೆಯರ ಜಯಕೇಶಿ ಅರಸ ನಾಳ್ಗಾವುಂಡನಿದ್ದಾಗ ಅಧಿಕಾರಿಗಳಿಂದ ಕೊಯ್ಲಾಳೇಶ್ವರ ದೇವರಿಗೆ ಹಣದಾನ ನೀಡಿದನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೦೭೯ರ ಕೋಳೂರ ಶಾಸನದಲ್ಲಿ[೫೯] ಗ್ರಾಮೇಶ್ವರ ದೇವಾಲಯಕ್ಕೆ ಸುಂಕಗಳ ದಾನ ಮಾಡಿದ್ದನ್ನು ಉಲ್ಲೇಖಿಸುತ್ತದೆ. ಇದೇ ತೇದಿಯ ಗಳಗನಾಥ ಶಾಸನದಲ್ಲಿ[೬೦] ಮೋಕರಿ ಬೊಮ್ಮಯ್ಯನಿಂದ ಗಳಗೇಶ್ವರ ದೇವರ ಮಂಟಪ ನಿರ್ಮಾಣಕ್ಕಾಗಿ ಸುವರ್ಣ ದಾನ ನೀಡಿದ ಬಗ್ಗೆ ಮಾಹಿತಿ ಲಭ್ಯವಿದೆ. ಕ್ರಿ.ಶ. ೧೦೮೭ರ ಹೊಟ್ಟೂರ ಶಾಸನದಲ್ಲಿ[೬೧] ಲೆಕ್ಕಮಯ್ಯಾದಿಗಳಿಂದ ಬೀರೇಶ್ವರ ದೇವರಿಗೆ ಸುಂಕಗಳ ದಾನ ನೀಡಿದ ವಿಷಯದ ಉಲ್ಲೇಖವಿದೆ. ಕ್ರಿ.ಶ. ೧೦೮೮ರ ಹತ್ತಿಮತ್ತೂರ ಶಾಸನದಲ್ಲಿ[೬೨] ದಂಡನಾಯಕ ಶಿವರಾಜನಿಂದ ಭೋಗೇಶ್ವರ ದೇವಾಲಯಕ್ಕೆ ಸುಂಕದಾನದ ಉಲ್ಲೇಖವಿದೆ. ಕ್ರಿ.ಶ. ೧೦೮೯ ಉಕ್ಕುಂದ ಶಾಸನದಲ್ಲಿ[೬೩] ದಂಡನಾಯಕ ಸೋಮೇಶ್ವರಭಟ್ಟನು ಶಿವಾಲಯ ಕಟ್ಟಿಸಿದ ದಾಸಗಾವುಂಡನಿಗೆ ನೀಡಿದ ಸುಂಕದಾನದ ಬಗ್ಗೆ ಉಲ್ಲೇಖಿಸುತ್ತದೆ.

ಕ್ರಿ.ಶ. ೧೧೦೪ರ ಅಬಲೂರಿನ ಶಾಸನದಲ್ಲಿ[೬೪] ಬೊಮ್ಮಗಾವುಂಡನೆಂಬುವನು ಹಲವಾರು ಹಳ್ಳಿಗಳನ್ನು ದಾನ ನೀಡಿ ದೇವರ ಅಂಗಭೋಗಕ್ಕೆ, ದೀಪಕ್ಕೆ, ದೇವಸ್ಥಾನದ ಕಾರ್ಯಗಳಿಗೆ ಗ್ರಾಮದಿಂದ ಬರುವ ತೆರಿಗೆಗಳಿಂದ ವಡ್ಡರಾವುಳ, ಪೆರ್ಜುಂಕ ಬೀಳ್ಕೂಡೆ ಅಚ್ಚುಪನ್ನಾಯ, ತೆರಿಗೆಗಳನ್ನು ಕೆಲವು ಹಳ್ಳಿಗಳಿಗೆ ದಾನ ನೀಡುತ್ತಾನೆ. ಇದರಿಂದ ಹಳ್ಳಿಗಳಿಗೆ ತೆರಿಗೆಗಳನ್ನು ದಾನದ ರೂಪದಲ್ಲಿ ನೀಡುವುದು ಒಂದು ವಿಶಿಷ್ಟವಾದ ಉಲ್ಲೇಖವಾಗಿದೆ. ಕ್ರಿ.ಶ. ೧೧೧೯ರ ಹಾವೇರಿ ಶಾಸನದಲ್ಲಿ[೬೫] ಸಿದ್ದೇಶ್ವರ ದೇವಾಲಯಕ್ಕೆ ನಿಗದಿಪಡಿಸಿದ ಆದಾಯಗಳನ್ನು ಮಾದವಭಟ್ಟನು ಪನ್ನಾಯದ ತೆರಿಗೆಗಳನ್ನು ವಹಿಸಿಕೊಂಡಿದ್ದನು. ದಂಡನಾಯಕ ಅನಂತಪಾಲಯ್ಯನು ವಡ್ಡರಾವುಳ ಮತ್ತು ಪನ್ನಾಯದ ತೆರಿಗೆಗಳನ್ನು ವಸೂಲಿ ಮಾಡುವ ಅಧಿಕಾರ ಹೊಂದಿದ್ದನು ಎಂದು ವಿವರ ನೀಡುತ್ತದೆ.

ಕ್ರಿ.ಶ. ೧೧೧೨ರ ಶಾಬಾಳ ಶಾಸನದಲ್ಲಿ[೬೬] ಹಿರಿಯ ಪಡೆದವಳ ದೇವರಸ ಶಂಭೊಳಲಾದಿಗಳನ್ನಾಳುವಾಗ ನೀಡಿದ ಕೆಲವು ಸುಂಕಗಳ ದಾನವನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೧೧೬ರ ಹತ್ತಿಮತ್ತೂರ ಶಾಸನದಲ್ಲಿ[೬೭] ದಂಡನಾಯಕ ಲೋಕರಸಾದಿಗಳಿಂದ ದೇವಿಂಗೆರೆಯ ಜೀರ್ಣೋದ್ಧಾರಕ್ಕಾಗಿ ಸುಂಕದಾನ ಉಲ್ಲೇಖಿಸುತ್ತದೆ. ಕ್ರಿ.ಶ. ೧೧೦೮ರ ಶಿಗ್ಗಾಂವ ಶಾಸನದಲ್ಲಿ[೬೮] ಉತ್ತಮಸೆಟ್ಟಿ ಮತ್ತು ಮಲ್ಲಸೆಟ್ಟಿಯಾದಿಗಳಿಂದ ಮೂಲಸ್ಥಾನ ದೇವರಿಗೆ ಹಣದಾನ ನೀಡಿದನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೧೧೯ರ ನೂಲಗೇರಿ ಶಾಸನದಲ್ಲಿ[೬೯] ನೂಲಗೇರಿಯ ಬಣಂಜಿಗಾದಿಗಳಿಂದ ಭೂಮಿ ಮತ್ತು ಸುಂಕದಾನ ನೀಡಿದ ಬಗ್ಗೆ ವಿವರಿಸುತ್ತದೆ. ಕ್ರಿ.ಶ. ೧೧೨೧-೨೨ರ ಹಾನಗಲ್ಲು ತಾಲ್ಲೂಕಿನ ಶಾಸನದಲ್ಲಿ[೭೦] ಸೋಮೇಶ್ವರ ದೇವಾಲಯವನ್ನು ಕಟ್ಟಲು ಗಡಿಯಂಕ ಮಲ್ಲನ ಬೀಡುವಿನಲ್ಲಿ ಒಂದು ಭೂಮಿಯನ್ನು ದಾನ ಮಾಡಿದ ವಿವರ

ಆದಾಯ, ತೆರಿಗೆಗಳು, ಎಣ್ಣೆ ಇತ್ಯಾದಿಗಳನ್ನು ಹಾಗೂ ೧೬ ಎಂಟುನಾಡು, ಮುಮ್ಮಡಿದಂಡ-೫೦೦, ಗಡಿಯಂಕ ಮಲ್ಲಬೀಡು – ೬೦, ಒಕ್ಕಲುಗಳು – ಯರ್ಜುಂಕ ತೆರಿಗೆ ಬೀಳ್ಕೊಡುಗಳನ್ನು ದೇವರಿಗೆ ದಾನ ನೀಡಿದ ವಿಷಯದ ಪ್ರಸ್ತಾಪವಿದೆ. ಕ್ರಿ.ಶ. ೧೧೨೪ನೇ ನೆಗಳೂರ ಶಾಸನದಲ್ಲಿ[೭೧] ಮನೆವೆರ್ಗಡೆ ಸೋಮರಸ ಹಾಗೂ ಉದಯಾದಿತ್ಯರಿಂದ ನಗೆಯೂರಿನ ಸಿದ್ದೇಶ್ವರ ದೇವಾಲಯಕ್ಕೆ ಸುಂಕದಾನ ನೀಡಿದನ್ನು ಉಲ್ಲೇಖಿಸಿದೆ. ಕ್ರಿ.ಶ. ೧೧೨೪ರ ಹೂಟ್ಟೂರ ಶಾಸನದಲ್ಲಿ[೭೨] ಹೊಟ್ಟೆಯೂರದ ಉಗುರು ಮೂನ್ನೂರ್ವರಿಂದ ಹಣದಾನ ಮಾಡಿದ್ದನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೧೨೮ರ ಹೊನ್ನತ್ತಿ ಶಾಸನದಲ್ಲಿ[೭೩] ಅರಸನಿಂದ ರಾಜೇಶ್ವರ ದೇವಾಲಯಕ್ಕೆ ಭೂಮಿ ಮತ್ತು ಸುಂಕದಾನ ನೀಡಿದ ಬಗ್ಗೆ ದಾಖಲಿಸುತ್ತದೆ. ಕ್ರಿ.ಶ. ೧೧೨೯ರ ನಾಗವಂದ ಶಾಸನದಲ್ಲಿ[೭೪] ನಾಗಾರ್ಜುನ ಗ್ರಾಮದ ಬ್ರಹ್ಮೇಶ್ವರ ದೇವಾಲಯಕ್ಕೆ ಭೂಮಿಯನ್ನು ನೀಡಿದ ಹಂದರವಣ ಸುಂಕದಾನವನ್ನು ಉಲ್ಲೇಖಿಸಿದೆ. ಕ್ರಿ.ಶ. ೧೧೩೦-೪೪ರ ಅಬ್ಬಲೂರ ಶಾಸನದಲ್ಲಿ[೭೫] ಬರ್ಮಗಾವುಂಡ ಮತ್ತು ದಂಡನಾಯಕ ಮಲ್ಲಭಾವರಸರಿಂದ ಬ್ರಹ್ಮೇಶ್ವರ ದೇವಾಲಯಕ್ಕೆ ಭೂಮಿ ಹಾಗೂ ಸುಂಕದಾನವನ್ನು ನೀಡಿದ ಬಗ್ಗೆ ವಿವರಿಸುತ್ತದೆ.

ಕ್ರಿ.ಶ. ೧೧೩೧ರ ಹಿರೇಕೆರೂರ ಶಾಸನದಲ್ಲಿ[೭೬] ಮಂಡಳಿಕ ಮಸಣರಸಾದಿಗಳಿಂದ ಹೆಗ್ಗಡೆಗೆ ಸುಂಕದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೧೪೨ರ ಚಿನ್ನಮುಳುಗುಂದ ಶಾಸನದಲ್ಲಿ[೭೭] ದಂಡನಾಯಕ ಸೋಮೇಶ್ವರ ದೇವರಿಗೆ ಮಹಾಪ್ರಧಾನ ಗ್ರಾಮದಲ್ಲಿ ಪನ್ನಾಯ ಮತ್ತು ಬೀರವಣ ಸುಂಕಗಳ ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೧೪೪ರ ಅಸುಂಡಿ ಶಾಸನದಲ್ಲಿ[೭೮] ವಡ್ಡರಾವುಳ ಮತ್ತು ಹೆಜ್ಜುಂಕದ ದಂಡನಾಯಕ ಮಹಾಪ್ರಧಾನ ದೇವರಯ್ಯನ ಆದೇಶದ ಮೇರೆಗೆ ಆದಿತ್ಯನಾಯಕ ಅಧಿಕಾರಿಗಳಿಂದ ಕಲಿದೇವಸ್ವಾಮಿಯ ದೇವಾಲಯಕ್ಕೆ ಸುಂಕದಾನ ನೀಡಿದ್ದನ್ನು ವಿವರಿಸುತ್ತದೆ. ಕ್ರಿ.ಶ. ೧೧೪೬ ರ ಕಾಗಿನೆಲೆ ಶಾಸನದಲ್ಲಿ[೭೯] ಯುದ್ಧದಲ್ಲಿ ಹೋರಾಡಿ ಮಡಿದ ಬಾಚಣ್ಣನ ಸೇವಕನ ಮಕ್ಕಳಿಗೆ ಊರ ಜನರಿಂದ ಆದಾಯ ದಾನವನ್ನು ನೀಡಿದ ಬಗ್ಗೆ ದಾಖಲಿಸುತ್ತದೆ. ಕ್ರಿ.ಶ. ೧೧೪೯ರ ದೇವಿಹೊಸೂರ ಶಾಸನದಲ್ಲಿ[೮೦] ಸುಂಕಾಧಿಕಾರಿ ದೇವಧರದಂಡನಾಯಕನಿಂದ ಮಾಳಚಿದೇವಿಗೆ ಸುಂಕದಾನ ನೀಡಿರುವುದನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೧೫೩ರ ಹಾವೇರಿ ಶಾಸನದಲ್ಲಿ[೮೧] ಹಾವೇರಿಯ ಮತ್ತು ಬಣಜಿಗರ ಸನ್ನಿಧಿಯಲ್ಲಿ ದಂಡನಾಯಕ ಮಾಹಿದೇವರಸನು ಸಿದ್ದೇಶ್ವರ ದೇವರಿಗೆ ನೀಡಿದ ಹಣದಾನ ಉಲ್ಲೇಖಿಸುತ್ತದೆ. ಕ್ರಿ.ಶ. ೧೧೫೪ರ ಹುಲಗೂರ ಶಾಸನದಲ್ಲಿ[೮೨] ಮಹಾಪ್ರಧಾನ ಮಾಯಿಪಯ್ಯನಾಯಕನಿಂದ ಎರಕಗಾವುಂಡನ ತೋಟದ ಪನ್ನಾಯ ಸುಂಕದಾನವನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೧೫೬ರ ಹುಲಗೂರಿನ ಮತ್ತೊಂದು ಶಾಸನದಲ್ಲಿ[೮೩] ಚಟ್ಟಗಾವುಂಡ ಹಾಗೂ ಚಟ್ಟಯ್ಯ ಸಾಮಂತರಿಂದ ಮಲ್ಲಿಕವ್ವೆ ಗಾವುಂಡಿಯ ತೋಟದ ಸುಂಕಗಳ ದಾನದ ಬಗ್ಗೆ ಮಾಹಿತಿ ಲಭ್ಯವಾಗಿದೆ. ಕ್ರಿ.ಶ. ೧೧೫೮ರ ಹಾವೇರಿ ಶಾಸನದಲ್ಲಿ[೮೪] ರುದ್ರದೇವನಿಂದ ಹಿರಿಯಕೆರೆಗೆ ಆದಾಯ ದಾನದ

ಬಗ್ಗೆ ದಾಖಲಿಸುತ್ತದೆ. ಹಾವೇರಿ ತಾಲೂಕಿನ ಶಾಸನದಲ್ಲಿ[೮೫] ಮಾಚಿ ಚಮೂಪನಿಂದ ಸಿದ್ದೇಶ್ವರ ದೇವಾಲಯಕ್ಕೆ ಸುಂಕಗಳ ದಾನ ಹಾಗೂ ಕ್ರಿ.ಶ. ೧೧೬೫ರ ಬಾಳೂರ ಶಾಸನದಲ್ಲಿ[೮೬] ಬಳ್ಳರವೀಡು ಗ್ರಾಮದ ಚಿಕ್ಕೇಶ್ವರ ದೇವಾಲಯಕ್ಕೆ ಹೊಂದಿರುವ ಬ್ರಹ್ಮೇಶ್ವರ ದೇವಾಲಯಕ್ಕೆ ಸುಂಕದಾನ ನೀಡಿರುವ ಬಗ್ಗೆ ಮಾಹಿತಿ ಲಭ್ಯವಾಗಿದೆ.

ತೇದಿರಹಿತ ನಿಡುನೇಗಿಲ ಶಾಸನದಲ್ಲಿ[೮೭] ಮೇಲ್ಭಾಗ ಅಸ್ಪಷ್ಟವಾಗಿದ್ದು, ಬೆಳಗುತ್ತಿಯ ಸಿಂಧವಂಶದ ಮಹಾಮಂಡಳೇಶ್ವರ ಈಶ್ವರದೇವನಿಂದ ಊರೊಡೆಯ ಮಹಾದೇವನು ಕಟ್ಟಿಸಿದ ಮಲ್ಲಿಕಾರ್ಜುನ ದೇವಾಲಯಕ್ಕೆ ಕೆಲವು ಸುಂಕದಾನ ನೀಡಿದ ವಿವರವನ್ನು ತಿಳಿಸುತ್ತದೆ. ಕ್ರಿ.ಶ. ೧೧೭೨ರ ನೀಡುನೇಗಿಲ ಶಾಸನದಲ್ಲಿ[೮೮] ನೀಡುನೇಗಿಲದ ಮಲ್ಲಿಕಾರ್ಜುನ ದೇವರಿಗೆ ಹೆಗ್ಗಡೆ ವಿಠ್ಠರಸ ಮತ್ತು ನಾರಣದೇವರು ನೀಡಿದ ಸುಂಕದಾನವನ್ನು ಉಲ್ಲೇಖಿಸುತ್ತದೆ.

ಕ್ರಿ.ಶ. ೧೧೮೧ರ ಮುದೇನೂರು ಶಾಸನದಲ್ಲಿ[೮೯] ಕುರಿಬರಕೂಟಯನಾಯಕನ ಸ್ಮರಣಾರ್ಥವಾಗಿ ಮಹಾಜನರಿಂದ ಭೂಮಿ ಮತ್ತು ಸುಂಕಗಳ ದಾನದ ಬಗ್ಗೆ ಮಾಹಿತಿ ದೊರೆಯುತ್ತದೆ. ಕ್ರಿ.ಶ. ೧೧೮೩ರ ಗುಡ್ಡದಾನವೇರಿ ಶಾಸನದಲ್ಲಿ[೯೦] ಸುಂಕವೆರ್ಗಡೆ ನಾಗರಸನಿಂದ ಮಲ್ಲಿಕಾರ್ಜುನ ಮತ್ತು ಯೋಗೇಶ್ವರ ದೇವಾಲಯಗಳಿಗೆ ಸುಂಕದಾನ ನೀಡಿದ ಬಗ್ಗೆ ತಿಳಿಸುತ್ತದೆ. ಕ್ರಿ.ಶ. ೧೧೮೪ರ ತಿಳುವಳ್ಳಿ ಶಾಸನದಲ್ಲಿ[೯೧] ಬಾವಿಗಳ ಮೇಲಿನ ತೆರಿಗೆಯನ್ನು ಉಲ್ಲೇಖಿಸುತ್ತದೆ. ಆ ಕಾಲದಲ್ಲಿ ಏನಾದರೂ ತಪ್ಪು ಮಾಡಿದವರು ಕ್ಷಮೆ ಪಡೆಯಬೇಕಾದರೂ ಕೂಡ ಸುಂಕ ನೀಡಬೇಕಾಗುತ್ತಿತ್ತು. ಇದನ್ನು 'ವಿಮೋಚನೆ ತೆರಿಗೆ' ಎಂದು ಕರೆಯಲಾಗುತ್ತಿತ್ತು. ಇದರ ಉಲ್ಲೇಖ ಬಂಕಾಪುರ ಶಾಸನದಲ್ಲಿ ಕಂಡುಬರುತ್ತದೆ. ಕ್ರಿ.ಶ. ೧೨೦೪ರ ಸಾತೇನಹಳ್ಳಿ ಶಾಸನದಲ್ಲಿ[೯೨] ಎತ್ತಿನ ಮೇಲೆ ವಿಧಿಸಿದ ಸುಂಕದ ಬಗ್ಗೆ ಮಾಹಿತಿಯನ್ನು ತಿಳಿಸುತ್ತದೆ. ತೇದಿ ರಹಿತ ಮಾಕನೂರು ಶಾಸನದಲ್ಲಿ[೯೩] ಮಹಾಪ್ರಧಾನ ಮಹೇಶ್ವರ ದೇವನು ಬನವಾಸಿ - ೧೨೦೦೦ ಆಳುವಾಗ ಕೆಲವು ನಾಯಕರಿಂದ ಬೊಪ್ಪೇಶ್ವರ ದೇವರಿಗೆ ಸುಂಕದಾನ ನೀಡಿದ ಮಾಹಿತಿ ದೊರಕುತ್ತದೆ. ಕ್ರಿ.ಶ.೧೨೦೮ರ ಹಾವೇರಿ ಶಾಸನದಲ್ಲಿ[೯೪] ಸುರಿಗೆಯ ಪೆರುಮಾಳೆಯಣ್ಣನಿಂದ ಸಿದ್ದನಾಥ ದೇವಾಲಯದ ನಂದಾದೀವಿಗೆಗಾಗಿ ಹಣದಾನ ಮಾಡಿದ್ದನ್ನು ಉಲ್ಲೇಖಿಸುತ್ತದೆ. ಕ್ರಿ.ಶ.೧೨೨೪ರ ಕಲಕೇರಿ ಶಾಸನದಲ್ಲಿ[೯೫] ಲಕ್ಷ್ಮೀಪಾಲದೇವ ಮತ್ತು ಸುಂಕವೆರ್ಗ್ಗಡೆ ಕೆಡುವಮ ಹಂತರಿಂದ ಸೋಮನಾಥ ದೇವಾಲಯಕ್ಕೆ ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ.

ಕ್ರಿ.ಶ. ೧೨೦೮ರ ಹಾವೇರಿ ಶಾಸನದಲ್ಲಿ[೯೬] ಹಾವೇರಿಯ ವರ್ತಕರಿಂದ ಸಿದ್ದನಾಥ ದೇವಾಲಯದ ವಿನಾಯಕ ದೇವರಿಗೆ ಹಣದಾನ ಮಾಡಿದ ಉಲ್ಲೇಖವಿದ್ದು ಹಾಗೂ ಹಾವೇರಿ ಮತ್ತೊಂದು ಶಾಸನದಲ್ಲಿ[೯೭] ದೇಚಿಸೆಟ್ಟಿ ಮತ್ತು ಮಾಯಿಸೆಟ್ಟಿಯರಿಂದ ಸಿದ್ದನಾಥ ದೇವರಿಗೆ ಹಣದಾನ ಮಾಡಿದ ಮಾಹಿತಿ ಇದೆ. ಕ್ರಿ.ಶ. ೧೨೩೧ರ ಹಾವೇರಿ ಶಾಸನದಲ್ಲಿ[೯೮] ಬೋಯಿದೇವ

ನಾಯಕನಿಂದ ಅಗ್ರಹಾರ ಹಾವೇರಿಯ ಸಿದ್ದೇಶ್ವರ ದೇವರ ನಂದಾದೀಪಿಗೆಗಾಗಿ ಹಣದಾನ ನೀಡಿದ ವಿವರವಿದೆ. ಕ್ರಿ.ಶ. ೧೨೩೫ರ ದೇವಿಹೊಸೂರ ಶಾಸನದಲ್ಲಿ[೯೯] ಸುಂಕವೆರ್ಗಡೆ ಆಯಿದೇವನಿಂದ ದೇವಿಯು ಹೊಸವೂರಿನ ಅನಾದಿ ಅಗ್ರಹಾರದ ಮಹಾಜನರಿಗೆ ಸುಂಕದಾನ ನೀಡಿರುವ ಬಗ್ಗೆ ಉಲ್ಲೇಖಿಸುತ್ತದೆ. ಕ್ರಿ.ಶ. ೧೨೩೭ರ ರಟ್ಟಿಹಳ್ಳಿ ಶಾಸನದಲ್ಲಿ[೧೦೦] ರಾಯಸೆಟ್ಟಿ ಬಿರುದಿನ ಗುಬ್ಬಿಯ ಕಲ್ಲೆಯನಿಂದ ಕದಂಬೇಶ್ವರ ದೇವಾಲಯದ ಸ್ಥಾನಾಚಾರ್ಯ ಮೂರುಜಾವಿ ದೇವರಿಗೆ ಸುಂಕದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೨೪೭ರ ಮಾಡಲೂರು ಶಾಸನದಲ್ಲಿ[೧೦೧] ಅರುವಣದ ಪ್ರಸ್ತಾಪವಿದೆ. ಕ್ರಿ.ಶ. ೧೨೪೭ರ ಹೊಳೆಆನವೇರಿ ಶಾಸನದಲ್ಲಿ[೧೦೨] ನಾಗವ್ವೆಯಿಂದ ವಿಶ್ವರೂಪ ದೇವಾಲಯದ ಹೂವಿಗಾಗಿ ೧ ಗದ್ಯಾಣ ದಾನ ನೀಡಿದ ಬಗ್ಗೆ ವಿವರವಿದೆ. ಕ್ರಿ.ಶ. ೧೨೬೬ರ ಹಾವೇರಿ ಶಾಸನದಲ್ಲಿ[೧೦೩] ಸುಂಕಾಧಿಕಾರಿ ಬೈಚರಸನಿಂದ ಸ್ವಯಂಭೂ ಸಿದ್ದನಾಥ ದೇವರಿಗೆ ಸುಂಕಗಳ ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೨೭೦ರ ಹಾವೇರಿಯ ಮತ್ತೊಂದು ಶಾಸನದಲ್ಲಿ ತಿಪ್ಪರಸನಿಂದ ಸ್ವಯಂಭೂ ಸಿದ್ದನಾಥದೇವರಿಗೆ ಸುಂಕದಾನ ಬಗ್ಗೆ ಉಲ್ಲೇಖವಿದೆ. ಕ್ರಿ.ಶ. ೧೨೭೦ರ ಹಾವೇರಿಯ ಮತ್ತೊಂದು ಶಾಸನದಲ್ಲಿ ತಿಪ್ಪರಸನಿಂದ ಸ್ವಯಂಭೂ ಸಿದ್ದನಾಥ ದೇವರಿಗೆ ಸುಂಕದಾನ ನೀಡಿದ ಬಗ್ಗೆ ಉಲ್ಲೇಖವಿದೆ. ಕ್ರಿ.ಶ. ೧೨೭೦ರ ಕಲಕೇರಿ ಶಾಸನದಲ್ಲಿ[೧೦೪] ಸಿರಿಳಮಾಯಿದೇವನಿಂದ ಸೋಮೇಶ್ವರ ದೇವಾಲಯಕ್ಕೆ ಸುಂಕದಾನ ನೀಡಿದ್ದನ್ನು ತಿಳಿಸುತ್ತದೆ.

ಕ್ರಿ.ಶ. ೧೨೯೨ರ ಚೌಡದಾನಪುರದ ಶಾಸನದಲ್ಲಿ[೧೦೫] ಮಹಾಪ್ರಧಾನ ಸರ್ವಾಧಿಕಾರಿ ಪರಶುರಾಮದೇವರ ಆಜ್ಞೆಯ ಮೇರೆಗೆ ಸುಂಕವೆರ್ಗಡೆಯಿಂದ ಮುಕ್ತನಾಥ ದೇವರಿಗೆ ಸುಂಕಗಳನ್ನು ದಾನವಾಗಿ ಕೊಟ್ಟ ವಿಷಯದ ಪ್ರಸ್ತಾಪವಿದೆ. ಕ್ರಿ.ಶ. ೧೨೯೪ರ ಹೂಲಿಹಳ್ಳಿ ಶಾಸನದಲ್ಲಿ[೧೦೬] ಸುಂಕಾಧಿಕಾರಿ ವಿಠ್ಠರಸನಿಂದ ದೇವಾಲಯಕ್ಕೆ ಸುಂಕ ಮತ್ತು ಎಣ್ಣೆದಾನ ನೀಡಿದ ವಿವರವಿದೆ. ಕ್ರಿ.ಶ. ೧೨೯೯ರ ಹಾವೇರಿ ಶಾಸನದಲ್ಲಿ[೧೦೭] ಸುಂಕಾಧಿಕಾರಿ ಮಾದಯ್ಯನಿಂದ ಅಗ್ರಹಾರ ಹಾವೇರಿಯ ಸಿದ್ದನಾಥ ದೇವರಿಗೆ ಸುಂಕಗಳ ದಾನ ನೀಡಿದ ಮಾಹಿತಿಯಿದೆ. ಕ್ರಿ.ಶ.೧೫೦೫ರ ಹಿರೇಕೆರೂರ ಶಾಸನದಲ್ಲಿ[೧೦೮] ಹಡಪದವನೊಬ್ಬನಿಗೆ ನೀಡಿದ ತೆರಿಗೆ ದಾನ. ಕ್ರಿ.ಶ. ೧೫೪೪ರ ಗುತ್ತಲ[೧೦೯] ಶಾಸನದಲ್ಲಿ ನಾವಿಂದರಿಗೆ ನೀಡಿದ ಸುಂಕದಾನ ಕ್ರಿ.ಶ. ೧೫೫೦ರ ರಾಣೆಬೆನ್ನೂರ ಶಾಸನದಲ್ಲಿ[೧೧೦] ತಿಮ್ಮೋಜ, ಕಂಡೋಜ ಹಾಗೂ ಭದ್ರೋಜರಿಗೆ ಸುಂಕ ಮತ್ತು ಆದಾಯ ದಾನ ನೀಡಿದುದರ ಬಗ್ಗೆ ವಿವರಿಸುತ್ತದೆ. ಕಲಕೇರಿ ತೇದಿ ರಹಿತ ಶಾಸನದಲ್ಲಿ[೧೧೧] ಬನವಾಸಿಯ ಸುಂಕಾಧಿಕಾರಿಗಳಿಂದ ದೇವರಿಗೆ ದಾನ ನೀಡಿದ ವಿವರ ಹಾಗೂ ಮತ್ತೊಂದು ತೇದಿರಹಿತ ಅರಿಷಿಣಗುಪ್ಪಿ ಶಾಸನದಲ್ಲಿ[೧೧೨] ಲಕ್ಕರಸಯ್ಯನಿಗೆ ಪರೋಕ್ಷವಾಗಿ ಪುಣ್ಯಪ್ರಾಪ್ತಿಯಾಗಲೆಂದು ಬೆಳವತ್ತಿಯ ಲಿಂಗರಸಯ್ಯನು ಅರಿಷಿಣಗುಪ್ಪಿಯ ಹನುಮಂತದೇವರಿಗೆ ಬಿಟ್ಟ ಸುಂಕದ ಬಗ್ಗೆ ತಿಳಿಸುತ್ತದೆ. ತೇದಿರಹಿತ ಗುಡಗುಡಿ ಶಾಸನದಲ್ಲಿ[೧೧೩] ಆರುವತ್ತೊಕ್ಕಲು ಕೊಡಬೇಕಾದ ಅಡಿಕೆ ಸುಂಕವನ್ನು ಗುಡಗುಡಿಯ ಮಹಾಪ್ರಭುತಯಲ ಗಾವುಂಡ ನಿರ್ಣಯನದ ಉಲ್ಲೇಖ

ವಿವರಿಸುತ್ತದೆ. ಕ್ರಿ.ಶ. ತೇದಿ ರಹಿತ ಹಾವೇರಿ ಶಾಸನದಲ್ಲಿ[೧೧೪] ಮಂಚಿ ಚಮೂಪನಿಂದ ಸಿದ್ದೇಶ ದೇವಾಲಯಕ್ಕೆ ಸುಂಕಗಳದಾನ ಬಗ್ಗೆ ಉಲ್ಲೇಖವಿದೆ. ತೇದಿರಹಿತ ಹೆಮ್ಮರಡಿ ಶಾಸನದಲ್ಲಿ[೧೧೫] ಕದಂಬ ವಂಶದ ಮಯೂರವರ್ಮ ದೇವನಿಂದ ಸುಂಕದಾನ ಮಾಹಿತಿ ಹಾಗೂ ಮತ್ತೊಂದು ತೇದಿರಹಿತ ಬಂಕಾಪುರ ಶಾಸನದಲ್ಲಿ[೧೧೬] ಅರಸ ಕಾಳಲಾದೇವಿ ಮತ್ತು ಮಹಾಪ್ರಧಾನ ಕುಮಾರ ಮಲ್ಲರಸರಿಂದ ಇಂದ್ರೇಶ್ವರ ದೇವಾಲಯಕ್ಕೆ ತೋಟದ ಸುಂಕದಾನ ಮಾಡಿದ್ದನ್ನು ಉಲ್ಲೇಖಿಸುತ್ತದೆ.

ಮತ್ತೊಂದು ತೇದಿರಹಿತ ಬಂಕಾಪುರ ಶಾಸನದಲ್ಲಿ[೧೧೭] ದಂಡನಾಯಕ ಡಾಕರಸನ ಆಜ್ಞೆಯ ಮೇರೆಗೆ ಹೆಗ್ಗಡೆ ಮಹಾದೇವಣ್ಣ ಸಖರೇಶ್ವರ ದೇವಾಲಯದ ನಂದಾದೀವಿಗೆಗಾಗಿ ಸುಂಕದಾನ ಮಾಡಿದ್ದನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ಸುಮಾರು ೧೧ನೇ ಶತಮಾನದ ತಿಳುವಳ್ಳಿ ಶಾಸನದಲ್ಲಿ[೧೧೮] ತಿಳುವಳ್ಳಿ ಮಹಾಜನರಿಗೆ ಬಿಟ್ಟ ಸುಂಕದ ಬಗ್ಗೆ ಉಲ್ಲೇಖಿಸುತ್ತದೆ. ಕ್ರಿ.ಶ. ೧೨ನೇ ಶತಮಾನದಲ್ಲಿ ಹಾವೇರಿ ತಾಲ್ಲೂಕಿನ ಶಾಸನದಲ್ಲಿ[೧೧೯] ಚೌಡರಸ ಮತ್ತು ಮುಮ್ಮರಿ ದಂಡಾದಿಗಳಿಂದ ಸಿದ್ದನಾಥ ದೇವರಿಗೆ ಕೆಲವು ಆದಾಯಗಳ ದಾನ ನೀಡಿರುವುದರ ಬಗ್ಗೆ ಮಾಹಿತಿಯಿದೆ. ಕ್ರಿ.ಶ. ೧೩-೧೪ನೇ ಶತಮಾನದಲ್ಲಿ[೧೨೦] ಇಮ್ಮಡಿ ಸಿಂಗಿನಾಯಕಾದಿಗಳಿಂದ ಸುಂಕದಾನ ನೀಡಿರುವುದನ್ನು ವಿವರಿಸುತ್ತದೆ. ಕ್ರಿ.ಶ. ೮ನೇ ಶತಮಾನ ದಿಗಡೂರ ಶಾಸನದಲ್ಲಿ[೧೨೧] ದೋಸಿಯು ಬನವಾಸಿ -೧೨೦೦೦ ಆಳುವಾಗ ಸಂಗವೂರಿನಲ್ಲಿ ತೆರಿಗೆದಾನ ಮಾಡಿದ ಉಲ್ಲೇಖವಿದೆ.

ಹೀಗಾಗಿ ತೆರಿಗೆಗಳು ಅಂದಿನ ರಾಜ್ಯದ ಸರ್ವತೋಮುಖ ಅಭಿವೃದ್ಧಿಗೆ ಪೂರಕವಾದ ಆರ್ಥಿಕ ಸಹಾಯವನ್ನು ನೀಡುತ್ತಿದ್ದವು. ಬಹುಶಃ ಇದರಿಂದಲೇ ಆ ಕಾಲದ ತೆರಿಗೆ ಪದ್ಧತಿ ಬಹುಮುಖ್ಯ ಭಾಗವಾಗಿತ್ತು ಎಂದು ಹೇಳಿದರೆ ತಪ್ಪಾಗಲಾರದು.

**ವ್ಯಾಪಾರ:**

ವ್ಯಾಪಾರ ಮತ್ತು ವಾಣೀಜ್ಯ ಅನಾದಿಕಾಲದಿಂದಲೇ ಆರ್ಥಿಕ ಬೆಳವಣಿಗೆಗೆ ಪೂರಕವಾಗಿ ಬೆಳೆದುಕೊಂಡು ಬಂದಿದೆ ಅಂದರೆ ಇತಿಹಾಸ ಪೂರ್ವಕಾಲದಿಂದಲೇ ವ್ಯಾಪಾರದ ಪ್ರಾಥಮಿಕ ಹಂತಗಳನ್ನು ಗುರುತಿಸಬಹುದು, ವಸ್ತುಗಳನ್ನು ವಿನಿಮಯ ಮಾಡಿಕೊಳ್ಳುವುದರ ಮೂಲಕ ನಿಗಧಿತ ಮೌಲ್ಯಾಂಕನ ಪದ್ಧತಿ ಬಹುಶಃ ಆ ಕಾಲದಲ್ಲಿಯೇ ಪ್ರಾರಂಭವಾಯಿತು ಎನ್ನಬಹುದು. ಈ ದೃಷ್ಟಿಯಿಂದ ವ್ಯವಸಾಯ, ಕೈಗಾರಿಕೆಗಳು ಉತ್ಪಾದನೆ, ಉದ್ಯಮಗಳೆಲ್ಲವೂ ಆದರೆ ವಾಣಿಜ್ಯ ವ್ಯವಹಾರ ಆಗಿರುತ್ತವೆ. ಉತ್ಪಾದನ ಸ್ಥಳದಲ್ಲಿ ವಸ್ತುಗಳನ್ನು ಖರೀದಿಸಿ ಅನುತ್ಪಾದಕ ವಸ್ತುಗಳನ್ನು ಬೇರೆ ಬೇರೆ ಸ್ಥಳಗಳಿಗೆ ಸಾಗಿಸಿ ಮಾರುವುದೇ ವಾಣಿಜ್ಯ ವ್ಯವಹಾರ. ದೇಶ-ವಿದೇಶಗಳೊಡನೆ ಮಾಡುವ ವ್ಯವಹಾರ ಅಂತರಾಷ್ಟ್ರೀಯವೆನಿಸುತ್ತದೆ. ಕನ್ನಡಿಗರು ಪುರಾತನ ಕಾಲದಿಂದ ದೇಶಿಯ ಮತ್ತು ಅಂತರಾಷ್ಟ್ರೀಯ ವಾಣಿಜ್ಯ ವ್ಯವಹಾರಗಳಲ್ಲಿ ತೊಡಗಿದ್ದರೆಂದು ಇತಿಹಾಸ ಹೇಳುತ್ತವೆ[೧೨೨].

ಇತಿಹಾಸ ಕಾಲದಲ್ಲಿ ರಾಜಧಾನಿಗಳು ಕಂಪೆನಿಗಳ ಮುಖ್ಯ ಸ್ಥಳಗಳು ಹಾಗೂ ಪಟ್ಟಣಗಳು ಕೇಂದ್ರಗಳಾಗಿರುತ್ತಿದ್ದವು. ಶಾಸನಗಳಲ್ಲಿ ಇವುಗಳನ್ನು “ಆದಿಬಣಂಜುವಟ್ಟಣ”, “ಅನಾದಿ ಬಣಂಜುವಟ್ಟಣ', “ಬಣಂಜುವಟ್ಟಣ', “ವೀರಬಣಂಜುವಟ್ಟಣ” ಬಣಂಜದಾದಿ ಪಟ್ಟಣ, ತೆಂಕಣ ಅಯ್ಯಾವೊಳೆ, ದಕ್ಷಿಣ ಅಯ್ಯಾವೊಳೆ, ಪಹಾಪಟ್ಟಣ, ಬಳೆಯಪಟ್ಟಣ, ವೇಂಟೇದಾಣ, ಮಳಿಗೆಯ ಮನೆ ಎಂಬ ವಿಶೇಷಣಗಳಿಂದ ಕರೆಯಲಾಗಿದೆ”[೧೨೩]. ವ್ಯಾಪಾರಕ್ಕೆ ಸಂಬಂಧಿಸಿದಂತೆ ಹಾವೇರಿ ಜಿಲ್ಲೆಯಲ್ಲಿಯ ಶಾಸನಗಳನ್ನು ಅವಲೋಕಿಸಿದಾಗ ಕ್ರಿ.ಶ. ೧೦೫೩ ಕಲಕೇರಿ ಶಾಸನದಲ್ಲಿ[೧೨೪] ಉಪ್ಪನ್ನು ತಂದು ಮಾರಲಾಗುತ್ತಿತ್ತು. ಇವುಗಳ ಜೊತೆ ದವಸ ಧಾನ್ಯಗಳ ವ್ಯಾಪಾರವು ನಡೆಯುತ್ತಿತ್ತು ಎಂಬುದು ಶಾಸನಗಳಲ್ಲಿ ಉಲ್ಲೇಖವಾಗಿದೆ. ಕ್ರಿ.ಶ. ೧೧೮೯ರ ನೂಲಕೇರಿ ಶಾಸನದಲ್ಲಿ[೧೨೫] ಹಿರಿಯಕೆರೆಯ ಹನ್ನೆರೆಡರು ಬಣಂಜುಗಳು ಠಾಣಾತನಂದರ ಸುಂಕ ಒಕ್ಕಲುದೇರೆ, ಬೆಳೆ ಮತ್ತು ಹೇರುಗಳನ್ನು ದೇವರ ಹಾಗಗಳನ್ನು ನೀಡಿದ ಮಾಹಿತಿಯ ವಿವರ ಹಾಗೂ ಶಾಸನದಲ್ಲಿ ಶ್ರೀಧರಸೆಟ್ಟಿ, ನಾಗದೇವಸೆಟ್ಟಿ, ಚಟ್ಟಸೆಟ್ಟಿ, ಬೊಮ್ಮಸೆಟ್ಟಿಯರನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೧೧೬ರ ಹಾನಗಲ್ಲು ತಾಲೂಕಿನ ಬಾಳಂಬೀಡಿನ ಶಾಸನದಲ್ಲಿ[೧೨೬] ಅಲ್ಲಿನ ಗ್ರಾಮೇಶ್ವರ ದೇವರಿಗೆ ಸಮಸ್ತ ಧರ್ಮದವರು ದಾನ-ದತ್ತಿಗಳನ್ನು ನೀಡಲಾಗಿ ಅವರೆಲ್ಲಾ ನಿತ್ಯನೈವೇದ್ಯ ಜೀರ್ಣೋದ್ಧಾರಕ್ಕೆ ಚೈತ್ರ ಪಾವಿತ್ರಕ್ಕೆ, ತಂಬೂಲಿಗ, ಸಾಸಿರ್ವರು ಪ್ರಸಾದಕ್ಕೆ ವೆರ್ಜುಂಕದವರು ಸುಂಕವನ್ನು ದೇವರ ನಂದಾ ದೀಪಕ್ಕೆ ನೀಡಿದ ಬಗ್ಗೆ ಉಲ್ಲೇಖಿಸುತ್ತವೆ. ಕ್ರಿ.ಶ.೧೧೨೩ರ ಹಾನಗಲ್ಲು ತಾಲೂಕಿನ ಬಾಳಂಬೀಡು ಶಾಸನದಲ್ಲಿ[೧೨೭] ಇಲ್ಲಿನ ಚಿಕ್ಕೇಶ್ವರ ದೇವರ ಮಠಕ್ಕೆ ನಂದಾದೀವಿಗೆಗೆ ಮಾನೆಂಣ್ಣೆ ಹಾಗೂ ಕೊಳಗವಿಂಡಿ ಬಿಟ್ಟ ಗಾಣ – ೧ ಮತ್ತರು ತಂಬೂಲಿಕ ಸಾಸ್ವಿರ್ವರುಗಳು ದೇವರಿಗೆ ಹೇರೆಂಗೊಂದು ವಿಸವಣ್ಣ ನೀಡುತ್ತಿದ್ದರೆಂದು ಶಾಸನ ಉಲ್ಲೇಖಿಸುತ್ತದೆ. ಕ್ರಿ.ಶ. ೧೧೨೬ರ ತಿಳುವಳ್ಳಿ ಶಾಸನದಲ್ಲಿ[೧೨೮] ‘ಮಹಾಗ್ರಾಮ ತಿಳುವಳ್ಳಿ’ ಎಂಬ ವಿಷಯಗಳು ಶಾಸನಗಳಲ್ಲಿ ಉಲ್ಲೇಖಿತಗೊಂಡಿವೆ. ನಂತರ ವ್ಯಾಪಾರವನ್ನೇ ವೃತ್ತಿಯನ್ನಾಗಿಸಿ ಕೊಂಡವರನ್ನು ವರ್ತಕರೆಂದು ಕರೆದಿದ್ದು, ಇವರಲ್ಲಿ ಪೃಥ್ವಿಶೆಟ್ಟಿ, ಬಣಂಜಿಗ, ವಡ್ಡ-ವ್ಯವಹಾರಿ, ನಾನಾ-ದೇಶಿ ಇವರುಗಳು ವರ್ತಕರ ಗುಂಪಿಗೆ ಸೇರುತ್ತಾರೆ ಎಂಬ ವಿಷಯದ ಉಲ್ಲೇಖವಿದೆ. ಕ್ರಿ.ಶ. ೧೨೦೪ರ ಸಾತೇನಹಳ್ಳಿ ಶಾಸನದಲ್ಲಿ[೧೨೯] ಬಣಂಜು ಪಟ್ಟಣ ಸಾತೇನಹಳ್ಳಿ ಎಂಬ ಉಲ್ಲೇಖ ಕಂಡುಬಂದಿದೆ. ಕ್ರಿ.ಶ. ೧೨೨೮ರ ಶಾಸನದಲ್ಲಿ[೧೩೦] ಹಾವೇರಿಯ ವರ್ತಕರಿಂದ ಸಿದ್ದನಾಥ ದೇವಾಲಯದ ವಿನಾಯಕ ದೇವರಿಗೆ ಹಣದಾನ ಮಾಡಿದ ವಿಷಯ ಹಾಗೂ ಕ್ರಿ.ಶ. ೧೨೪೧ರ ಸಾತೇನಹಳ್ಳಿ ಶಾಸನದಲ್ಲಿ[೧೩೧] ವೀರಬಣಂಜು ಪಟ್ಟಣವೆಂದು ಹೆಸರಾದ ಕೋಣವಂತ್ತಿಯ ಮಾಹಿತಿಯ ಲಭ್ಯವಾಗಿದೆ. ಕ್ರಿ.ಶ. ೧೨೩೭೪ ರಟ್ಟಿಹಳ್ಳಿ ಶಾಸನದಲ್ಲಿ[೧೩೨] ಕರಣದ ಕಲ್ಲರಸ ಮತ್ತು ಹಲವು ವ್ಯಾಪಾರಸ್ಥರು ಮಲ್ಲಿನಾಥ ದೇವಾಲಯಕ್ಕಾಗಿ ಜಾವಿ ಮೂರು ದೇವರಿಗೆ ಬಿಟ್ಟ ದಾನದ ವಿವರವಿದೆ. ಕ್ರಿ.ಶ. ೧೨೭೦ರ ಶಾಸನದಲ್ಲಿ[೧೩೩] “ಅಡಕೆ ಮೆಣಸು ಮುಕ್ತವಾಗಿ ಯೇನ ಹೇಜಿದಡಂ” ಎಂಬ ಮಾತು ಬರುವುದರಿಂದ ಮೆಣಸಿನ ಜೊತೆ ಅಡಕೆ ವ್ಯಾಪಾರವು ನಡೆಯುತ್ತಿತ್ತು ಎಂಬ ಉಲ್ಲೇಖವಿದೆ. ಕ್ರಿ.ಶ. ೧೩-೧೪ನೇ

ಶತಮಾನದಲ್ಲಿ[೧೩೪] ಮೆಣಸಿನ ಹೇಱುಮಂ ಮಾಣಿಕವ ತಂದರೆ ಆಯಿದು ಪ ಎಂಬ ಮಾತು ಬರುವುದರಿಂದ ಮೆಣಸು, ಮಾಣಿಕ್ಯಗಳನ್ನು ತಂದು ಮಾರುತ್ತಿದ್ದರು ಅವುಗಳಿಗೆ ಐದು ಪಣ ಸುಂಕವನ್ನು ವಿಧಿಸಲಾಗುತ್ತಿತ್ತು. ಕ್ರಿ.ಶ. ಸುಮಾರು ೧೨ನೇ ಶತಮಾನದ[೧೩೫] ತಮಿಳು ವರ್ತಕರ ಸೀಮಾದ ಉಲ್ಲೇಖ ಹಾನಗಲ್ಲು ತಾಲೂಕಿನ ಶಾಸನದಲ್ಲಿ ಕಂಡುಬಂದಿದೆ.

ಹೀಗೆ ವ್ಯಾಪಾರ ವಹಿವಾಟುಗಳು ಜಿಲ್ಲೆಯ ಉದ್ದಗಲಕ್ಕೂ ಹರಡಿದ್ದು, ಹಲವಾರು ವಿಧದಲ್ಲಿ ಭೌಗೋಳಿಕವಾಗಿ ಅಲ್ಲಿನ ಅವಶ್ಯಕತೆಗೆ ಅನುಗುಣವಾಗಿ ಬೆಳವಣಿಗೆ ಹೊಂದಿದ್ದವು ಈ ಹಿನ್ನೆಲೆಯಲ್ಲಿ ವ್ಯಾಪಾರ ಜಿಲ್ಲೆಯ ಬೊಕ್ಕಸಕ್ಕೆ ಅಧಿಕ ಲಾಭ ತರುವ ಉದ್ದಿಮೆಯಾಗಿತ್ತೆಂದು ಹೇಳಬಹುದು.

**ತೂಕ ಮತ್ತು ಅಳತೆಗಳು:**

ತೂಕಗಳಿಗೆ ಸಂಬಂಧಿಸಿದಂತೆ ಹಾವೇರಿ ಜಿಲ್ಲೆಯ ಶಾಸನಗಳಲ್ಲಿ ಹೆಚ್ಚಿನ ಮಾಹಿತಿ ಕಂಡು ಬರುವುದಿಲ್ಲ. ಮಾನವನು ತನ್ನ ದೈನಂದಿನ ವ್ಯವಹಾರಕ್ಕಾಗಿ ತನ್ನದೇ ಆದ ವಿಧಾನವನ್ನು ಅನುಸರಿಸಿ ತೂಕ ಮತ್ತು ಅಳತೆಯ ರೂಪದಲ್ಲಿ ವಿಭಾಗ ಮಾಡಿಕೊಂಡಿದ್ದನು. ತಾನು ಬೆಳೆದ ದವಸ-ಧಾನ್ಯಗಳನ್ನು ಮಾರಲು ಅಥವಾ ಇನ್ನೊಬ್ಬರಿಗೆ ಕಡದ ರೂಪದಲ್ಲಿ ನೀಡುವ ಸಂದರ್ಭದಲ್ಲಿ ತೂಕ ಮತ್ತು ಅಳತೆ ಪ್ರಮುಖ ಊರುಗೋಲು ಆಗಿ ಕೆಲಸ ಮಾಡುತ್ತವೆ. ಅಲ್ಲದೆ ಭೂಮಿಯನ್ನು ಅಳೆಯಲು ಅಳತೆ ಮಹತ್ವಪೂರ್ಣವಾಗಿದೆ.

ಕ್ರಿ.ಶ. ೧೨೦೬ ಹಾನಗಲ್ಲು ತಾಲೂಕಿನ ಕಲಕೇರಿ ಶಾಸನದಲ್ಲಿ[೧೩೬] 'ಹರಿಯ (ಕೋಲಲಿ) ಗದ್ದೆ ಕ ೧೦ ಎಂದು ಕೊಡಲಾಗಿದೆ. ಮತ್ತೊಂದು ಕ್ರಿ.ಶ. ೧೩ನೇ ಶತಮಾನದಲ್ಲಿ ಶಾಸನದಲ್ಲಿ[೧೩೭] ಹಿರಿಯ ಕೋಲಲ್ಲಿ ಗದ್ದೆ ಕ ೧೦ ಎಂದು ಉಲ್ಲೇಖಿಸಲಾಗಿದೆ. ಕ್ರಿ.ಶ. ೧೨೪೧ರ ಸಾತೇನಹಳ್ಳಿ ಶಾಸನದಲ್ಲಿ[೧೩೮] ಎಣ್ಣೆ ಅಳೆಯುವಲ್ಲಿ ಸೊಲ್ಲಗೆ ಎಂಬ ತೂಕದ ಉಲ್ಲೇಖವಿದೆ.

ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲೂಕಿನಲ್ಲಿ ನಾಲ್ಕು ಶಾಸನಗಳು ದೊರಕಿದ್ದು ೧೭-೧೮ನೇ ಶತಮಾನಕ್ಕೆ ಸೇರಿದ್ದಾಗಿದೆ. ಅವುಗಳಲ್ಲಿ ಮೊದಲ ಶಾಸನವು ಕೆರೆ, ತಳಗಣ, ಉಂಬಳಿ, ಹೊಲ ಉಲ್ಲೇಖಿಸಿದರೆ, ನಾಲ್ಕನೆಯ ಶಾಸನ ಊರ ಮಧ್ಯದಲ್ಲಿರುವ ಹನುಮಂತ ದೇವಾಲಯವನ್ನು ಕ್ರಿ.ಶ. ೧೮೬೬ರಲ್ಲಿ ಕಟ್ಟಿಸಿದ ವಿವರವನ್ನೊಳಗೊಂಡಿದೆ. ಹನುಮಂತ ದೇವಾಲಯದ ದಕ್ಷಿಣಕ್ಕೆ ಕಲ್ಯಾಣ ಚಾಲುಕ್ಯರ ಕಲ್ಮೇಶ್ವರ ತ್ರಿಕೂಟಾಚಲವಿದೆ. ಈ ದೇವಾಲಯದ ದಕ್ಷಿಣಕ್ಕೆ ಇರುವ ಚನ್ನಪ್ಪ ಗುರುಬಸಪ್ಪ ಮರಿಬಸಪ್ಪನವರ ಮನೆಯಲ್ಲಿ ಅಳತೆ ತೂಕದ ಕಲ್ಲೊಂದಿದೆ. ಮಣಕಲ್ಲು ಎಂದು ಕರೆಯಲ್ಪಡುವ ಕಲ್ಲನ್ನು ಹತ್ತಿ ತೂಗಲು ಬಳಸುತ್ತಾರೆ. ಇದು ಇಂದಿನ ೧೨ ಕಿಲೋಗ್ರಾಂ ತೂಕ ಇದೆ. ವೃತ್ತಾಕಾರದ ಕಲ್ಲಿನ ಮೇಲಿನ ಮತ್ತು ಕೆಳಗಿನ ಅಂಚುಗಳನ್ನು ಸ್ವಲ್ಪ ಒಳಭಾಗಕ್ಕೆ ಇರುವಂತೆ ಸಾಣೆ ಹಿಡಿಯಲಾಗಿದೆ. ಕಲ್ಲಿನ ವ್ಯಾಸ ೮೦ ಸೆಂ.ಮೀ. ಹಾಗೂ ವ್ಯಾಸ ೯.೫೦ ಸೆಂ.ಮೀ. ಇದೆ. ಕಲ್ಲಿನ ಮಧ್ಯದ ಮೇಲ್ಭಾಗದಲ್ಲಿ ದುಂಡನೆಯ ಹಿಡಿಯಿದೆ.

ಇದರ ವ್ಯಾಸ ೫.೫೦ ಹಾಗೂ ಎತ್ತರ ೧ ಸೆಂ.ಮೀ. ಇದೆ. ಹಿಡಿಯ ಸುತ್ತಲೂ ೧೬ ದಳಗಳ ಉಬ್ಬು ಕೆತ್ತನೆಯಿದೆ. ಇದರ ವ್ಯಾಸ ೩೨.೫೦ ಸೆಂ.ಮೀ. ಇದೆ. ಈ ದಳಗಳ ಸುತ್ತಲೂ ಶಾಸನವಿದೆ. ಎರಡು ಕಡೆ ಮೂರು ಅಕ್ಷರಗಳನ್ನು ನಮೂದಿಸಲಾಗಿದ್ದು ಒಂದೆಡೆ ಅಂಕೆಗಳನ್ನು ಸೂಚಿಸಿದೆ. ಹ/ಕ/ದ/೮/೦/೦೧೧ ಇದನ್ನು ಹತ್ತಿಕಲ್ಲು ದಡೆ ೪ ಎಂದು ಅರ್ಥೈಸಬಹುದಾಗಿದೆ. ಅಂಕೆ ೪ ಮತ್ತು ಮುಂದೆ ನೇರ ಗೆರೆಗಳ ಮಧ್ಯ ಎರಡು ಶೂನ್ಯಗಳು ದಡೆಯ ಉಪವಿಭಾಗಗಳನ್ನು ಸೂಚಿಸುತ್ತದೆ. ಈ ಕಲ್ಲು ಸರಿಯಾಗಿ ೧ ಮಣ ಇರುವ ಕಾರಣ ಉಪವಿಭಾಗಗಳಲ್ಲಿ ಶೂನ್ಯ ನಮೂದಿಸಲಾಗಿದೆ. ಒಂದು ಮಣದಲ್ಲಿ ೮ ಕಡೆ ಅಥವಾ ೪೮ ಸೇರು ಇರುತ್ತದೆ. ಉತ್ತರ ಕರ್ನಾಟಕದಲ್ಲಿ ಈಗಲೂ ಹತ್ತಿ, ಬೆಲ್ಲ ತೂಗಲು ಈ ಮಾಣ ಬಳಸುತ್ತಾರೆ[೧೩೯].

ಈ ತೂಕದ ಕೋಷ್ಟಕ ಹೀಗಿದೆ:

| | | |
|---|---|---|
| ೧ ಸಟ್ಟ | = | ೮ ಮಣ |
| ೧ ಮಣ | = | ೪ ದಡೆ |
| ೧ ದಡೆ | = | ೨ ಪಂಚೇರು |
| ೧ ಪಂಚೇರು | = | ೫ ಸೇರು |
| ೧ ಸೇರು | = | ೨೦ ತೊಲೆ (ಉ. ಕೊಣಣಿ) |
| | | ೨೪ ತೊಲೆ (ಮೈಸೂರು ರಾಜ್ಯ) |

ಈ ಅಳತೆ ಮತ್ತು ತೂಕಗಳ ಉಲ್ಲೇಖವನ್ನು ರಾಜಾಧಿತ್ಯನು ತನ್ನ ವ್ಯವಹಾರ ಗಣಿತದಲ್ಲಿ ಇವುಗಳ ಕೋಷ್ಠಕವನ್ನು ಹೀಗೆ ಹೇಳಿದ್ದಾನೆ[೧೪೦].

| | | | | | |
|---|---|---|---|---|---|
| ೪ ಗದ್ದ | – | ೧ ಸೊಲ್ಲಿಗೆ | ೪ ಸೊಲ್ಲಿಗೆ | – | ೧ ಮಾನ |
| ೪ ಮಾನ | – | ೧ ಬಳ್ಳ | ೪ ಬಳ್ಳ | – | ೧ ಕೊಳಗ |
| ೫ ಕೊಳಗ | – | ೧ ಪಂಚಕ | ೪ ಪಂಚಕ | – | ೧ ಖಂಡುಗ |

## ನಾಣ್ಯಪದ್ಧತಿ:

ಅರ್ಥವ್ಯವಸ್ಥೆಯಲ್ಲಿ ನಾಣ್ಯ ಚಲಾವಣೆಯು ಆರ್ಥಿಕ ಅಭಿವೃದ್ಧಿಯ ವಿಕಸಿತವಾಗದ ಸಮಯದಲ್ಲಿ ಕೂಡು-ಕೊಳ್ಳುವ ವ್ಯವಹಾರಕ್ಕೆ ವಸ್ತುಗಳನ್ನು ವಿನಿಮಯ ಮಾಡಿಕೊಳ್ಳಲಾಗುತ್ತಿತ್ತು. ವಸ್ತುಗಳ ವಿನಿಮಯದ ಸಂದರ್ಭದಲ್ಲಿ ಉಂಟಾಗುತ್ತಿದ್ದ ನ್ಯೂನ್ಯತೆ ಮತ್ತು ತೊಂದರೆಯನ್ನು ತಪ್ಪಿಸುವುದಕ್ಕಾಗಿ ಚಿನ್ನದ ಚೂರುಗಳನ್ನು ನಿರ್ದಿಷ್ಟ ಆಕಾರದಲ್ಲಿ ಕತ್ತರಿಸಿ ಬಳಸುವ ಪದ್ಧತಿ ಪ್ರಾರಂಭವಾಯಿತು (ಸ್ಪಷ್ಟ ಕಾಲಮಾನವನ್ನು ಹೇಳು ಕಷ್ಟ) ಇದೇ ವ್ಯವಸ್ಥಿತ ನಾಣ್ಯಪದ್ಧತಿಗೆ

ನಾಂದಿ ಹಾಡಿ ಭಾರತದಲ್ಲಿ ಬಳಕೆಗೆ ಬಂದ ನಾಣ್ಯಗಳಲ್ಲಿ ಅತ್ಯಂತ ಪ್ರಾಚೀನವಾದವುಗಳನ್ನು ಮುದ್ರಾಂಕಿತ (ಪಂಚ್‌ಮಾರ್ಕ್) ನಾಣ್ಯಗಳು ಎಂದು ಕರೆಯುತ್ತಾರೆ[೧೪೧].

ಇವುಗಳ ಬಳಕೆ ಉತ್ತರ ಭಾರತದಲ್ಲಿ ವಿಶೇಷವಾಗಿದ್ದು ಅಲ್ಲಿಂದ ದಕ್ಷಿಣದ ಕಡೆಗೆ ಬಂದಿದ್ದಿತು. ಹಾವೇರಿ ಜಿಲ್ಲೆಯ ಶಾಸನಗಳನ್ನು ಒಳಗೊಂಡಂತೆ ಕರ್ನಾಟಕದಲ್ಲಿದ್ದ ನಾಣ್ಯಗಳಲ್ಲಿ ಈ ಮುದ್ರಾಂಕಿತ ನಾಣ್ಯಗಳೇ ಪ್ರಾಚೀನ ಉತ್ತಮ ನಾಣ್ಯಗಳೆಂದು ಗೊತ್ತಾಗುತ್ತದೆ. ಅಂದಿನಿಂದ ನಾಣ್ಯಗಳ ಬಳಕೆ ಮುಂದುವರೆದುಕೊಂಡು ಬಂದಿದೆ. ಕನ್ನಡ ನಾಡಿನ ಉದ್ದ ಅಗಲಕ್ಕೂ ನಾಣ್ಯಗಳ ಚಲಾವಣೆ, ಪ್ರಚಾರ ಹೆಚ್ಚು ಬಳಕೆಗೊಂಡು ಪ್ರಚಲಿತದಲ್ಲಿದ್ದ ನಾಣ್ಯ ಗದ್ಯಾಣ ಅಥವಾ ಪೊನ್ ಇದು ಲ್ಯಾಟಿನ್ ಭಾಷೆಯ ಗಾರ್ಡಿಯನ್ ಪದದಿಂದ ಬಂದಿದ್ದು, ಚಿನ್ನದ ನಾಣ್ಯವಾದ್ದರಿಂದ ಅದನ್ನು 'ಪೊನ್' ಎಂದು ಕರೆಯಲಾಗಿದೆ. ಇದರ ತೂಕವು ೫೮ ರಿಂದ ೬೦.೧ ಗ್ರೇನ್‌ಗಳೆಂದು ಕಾಂಗ್ರೀಂಗ್‌ಟತನ್ ಹೇಳಿದರೆ ಸುಮಾರು ೬೯ ಗ್ರೇನ್‌ಗಳೆಂದು ಡಾ. ಅಲ್ತೆಕರ್ ಸುಮಾರು ೬೩ ಗ್ರೇನ್‌ಗಳೆಂದೂ ಹಾಗೂ ೬೩ ಗ್ರೇನ್‌ಗಳೆಂದು ಅಪ್ಪಾದೊರೆ ಅಭಿಪ್ರಾಯಪಟ್ಟಿದ್ದಾರೆ[೧೪೨].

ನಾಣ್ಯಗಳ ಸಂಬಂಧವನ್ನು ವ್ಯವಹಾರದ ಸಂದರ್ಭದಲ್ಲಿ ರಾಜಾಧಿತ್ಯನು ಗಣಿತರೂಪದಲ್ಲಿ ತಿಳಿಸಿದ್ದಾನೆ.

| | | |
|---|---|---|
| ೪ ಕಾಣಿ | = | ೧ ವೀಸ |
| ೫ ವೀಸ | = | ೧ ಹಾಗ |
| ೪ ಹಾಗ | = | ೧ ಪಣ |
| ೧೦ ಪಣ | = | ೧ ಗದ್ಯಾಣ[೧೪೩] |

ಅಲ್ಲದೆ ರಾಜಾಧಿತ್ಯನ ಲೀಲಾವತಿ ನಾಣ್ಯಗಳ ಸಂಬಂಧವನ್ನು ಹೀಗೆ ತಿಳಿಸುತ್ತದೆ.

| | | |
|---|---|---|
| ೧ ವರಹ | = | ೨ ಹೊನ್ನು |
| ೧ ಹೊನ್ನು | = | ೫ ಹಣ |
| ೧ ಹಣ | = | ೨ ಅಡ್ಡ |
| ೧ ಅಡ್ಡ | = | ೨ ಹಾಗ |
| ೧ ಹಾಗ | = | ೨ ಬೆಳೆ |
| ೧ ಬೆಳೆ | = | ೨ ವೀಸ |
| ೧ ವೀಸ | = | ೨ ಅರೆವೀಸ |
| ೧ ಅರೆವೀಸ | = | ಕಾಣಿ |
| ೧ ಕಾಣಿ | = | ೪ ಗದ್ಯಾಣ |

ಇಂತಹ ನಾಣ್ಯಗಳು ಅಂದಿನ ಸಮಾಜದಲ್ಲಿ ಚಲಾವಣೆಯ ವಿವರವನ್ನು ಉಲ್ಲೇಖಿಸುತ್ತದೆ[೧೪೪]. ಕ್ರಿ.ಶ. ೧೦೨೧ರ ಬೆಳವತ್ತಿಯ ಶಾಸನದಲ್ಲಿ[೧೪೫] ೧೦ ಗದ್ಯಾಣ ದಾನ ಬಿಟ್ಟ ಮಾಹಿತಿಯಿದೆ. ಕ್ರಿ.ಶ. ೯೬೧ ಹಾವೇರಿ ತಾಲೂಕಿನ ದೇವಿಹೊಸೂರ ಶಾಸನದಲ್ಲಿ[೧೪೬] ಗರ್ವಿಂದರನು ಬನವಾಸಿ ನಾಡನ್ನಾಳುವಾಗ ಮಹಾಜನರಿಂದ ಹಣದಾನ ನೀಡಿದ ಬಗ್ಗೆ ವಿವರವನ್ನು ಕ್ರಿ.ಶ. ೧೦೪೮ರ ಚಿಕ್ಕೆರೂರು ಶಾಸನದಲ್ಲಿ[೧೪೭] ಮತ್ತು ಕ್ರಿ.ಶ. ೧೦೫೪ ಹುಲಗೂರ ಶಾಸನದಲ್ಲಿ[೧೪೮] ಮಹಾಪ್ರಧಾನ ಮಾಹಿಪೈಯ್ಯ ನಾಯಕನಿಂದ ಊರಕ ಗಾವುಂಡನ ತೋಟದ ಪಟ್ಟಾವು ಸುಂಕದಾನ ಮಾಡಿದ್ದನ್ನು ತಿಳಿಸುತ್ತದೆ. ಕ್ರಿ.ಶ. ೧೦೭೨ರ ತಿಳುವಳ್ಳಿ ಶಾಸನದಲ್ಲಿ[೧೪೯] ಪಣದ ಉಲ್ಲೇಖವಿದೆ. ಕ್ರಿ.ಶ. ೧೦೭೨ರ ಕಾಗಿನೆಲೆ ಶಾಸನದಲ್ಲಿ[೧೫೦] ಜಕ್ಕಗಾವುಂಡಿಗಳಿಂದ ಕಾಗಿನೆಲೆಯ ರಾಮೇಶ್ವರ ದೇವಾಲಯಕ್ಕೆ ಹಣದಾನ ನೀಡಿದ್ದನ್ನು ದಾಖಲಿಸಿದೆ. ಕ್ರಿ.ಶ. ೧೦೬೬ರ ಹುಲಗೂರ ಶಾಸನದಲ್ಲಿ[೧೫೧] ಮಣಲೆಯರ ಜಯಕೇಶಿ ಅರಸ ನಾಜ್ಗೂವುಂಡನಿದ್ದಾಗ ಅಧಿಕಾರಿಗಳಿಂದ ಕೊಯ್ಲುಂಳೇಶ್ವರ ದೇವರಿಗೆ ಹಣದಾನ ಮಾಡಿದ ಮಾಹಿತಿಯ ಬಗ್ಗೆ ಪ್ರಸ್ತಾಪವಿದೆ. ಕ್ರಿ.ಶ. ೧೦೭೯ರ ಬಾಳಂಬೀಡು ಶಾಸನದಲ್ಲಿ[೧೫೨] ಲೋಕಿ ಗದ್ಯಾಣ ಚಿನ್ನದ ಬಗ್ಗೆ ವಿವರವಿದೆ. ಕ್ರಿ.ಶ. ೧೦೮೮ರ ಬಾಳಂಬೀಡು ಶಾಸನದಲ್ಲಿ[೧೫೩] ಪಾಂಡುರಂಗ ದೇವರಿಗೆ ಚಿನ್ನದ ನಾಣ್ಯಗಳನ್ನು ನೀಡಿದ ವಿವರವಿದೆ. ಕ್ರಿ.ಶ. ೧೧೦೮ರ ಶಿಗ್ಗಾಂವಿ ಶಾಸನದಲ್ಲಿ[೧೫೪] ಉತ್ತವಸೆಟ್ಟಿ ಮತ್ತು ಮಲ್ಲಿಸೆಟ್ಟಿಯಾದಿಗಳಿಂದ ಮೂಲಸ್ಥಾನ ದೇವರಿಗೆ ಹಣದಾನ ನೀಡಿದ ಉಲ್ಲೇಖವಿದೆ. ಕ್ರಿ.ಶ. ೧೧೨೪ರ ಹೊಟ್ಟೂರ ಶಾಸನದಲ್ಲಿ[೧೫೫] ಹೊಟ್ಟೆಯೂರದ ಉಗುರು ಮೂನ್ನೂರ್ವರಿಂದ ಹಣದಾನ ಬಗ್ಗೆ ಮಾಹಿತಿ ಲಭ್ಯವಾಗಿದೆ. ಕ್ರಿ.ಶ. ೧೧೪೨ರ ಚಿನ್ನಮುಳಗುಂದದ ಶಾಸನದಲ್ಲಿ[೧೫೬] ಪನ್ನಾಯದ ಉಲ್ಲೇಖವಿದೆ. ಕ್ರಿ.ಶ. ೧೧೫೩ರ ಹಾವೇರಿ ತಾಲೂಕಿನ ಶಾಸನದಲ್ಲಿ[೧೫೭] ಹಾವೇರಿಯ ಮಹಾಜನ ಮತ್ತು ಬಣಜಿಗರ ಸನ್ನಿಧಿಯಲ್ಲಿ ದಂಡನಾಯಕ ಮಾಯಿದೇವರಸನು ಸಿದ್ದೇಶ್ವರ ದೇವರಿಗೆ ನೀಡಿದ ಹಣದಾನ ನೀಡಿದ ಬಗ್ಗೆ ಉಲ್ಲೇಖಿಸಿದೆ. ಕ್ರಿ.ಶ. ೯೬೧ರ ದೇವಿಹೂಸೂರು ಶಾಸನದಲ್ಲಿ[೧೫೮] ಗದ್ಯಾಣದ ಮಾಹಿತಿಯು ಲಭ್ಯವಾಗಿದ್ದು ನಂತರ ಕ್ರಿ.ಶ. ೧೨೦೮ರ ಹಾವೇರಿ ತಾಲೂಕಿನ ಶಾಸನದಲ್ಲಿ[೧೫೯] ಹಣದಾನದ ಪ್ರಸ್ತಾಪವಿದೆ.

ಕ್ರಿ.ಶ. ೧೨೧೫ರ ಶಾಸನದಲ್ಲಿ[೧೬೦] ಸಲಿಕಿಸೆಟ್ಟಿಯ ಮಗ ಚಲ್ಲಿಸೆಟ್ಟಿಯಿಂದ ಮೂವತ್ಮೂರು ದೇವರ ವಿಗ್ರಹಗಳ ನಿರ್ಮಾಣದ ವಿಷಯದ ಉಲ್ಲೇಖವಿದೆ. ಕ್ರಿ.ಶ. ೧೨೨೯ರ ಹಾವೇರಿಯ ಶಾಸನದಲ್ಲಿ[೧೬೧] ವರ್ತಕರಿಂದ ಸಿದ್ದನಾಥ ದೇವಾಲಯದ ವಿನಾಯಕ ದೇವರಿಗೆ ಹಣದಾನ ನೀಡಿದ ಮಾಹಿತಿ ಲಭ್ಯವಿದೆ. ಕ್ರಿ.ಶ. ೧೨೪೬ರ ಹೊಳೆಆನವೇರಿ ಶಾಸನದಲ್ಲಿ[೧೬೨] ನಾಗವ್ವೆಯಿಂದ ವಿಶ್ವರೂಪ ದೇವಾಲಯದಲ್ಲಿ ಹೂವಿಗಾಗಿ ಒಂದು ಗದ್ಯಾಣ ದಾನ ನೀಡಿದ ಉಲ್ಲೇಖವಿದೆ. ಕ್ರಿ.ಶ. ೧೧ ಮತ್ತು ೧೨ನೇ ಶತಮಾನದ ಬೆಳವತ್ತಿಯ ಶಾಸನದಲ್ಲಿ[೧೬೩] ೧೦೦ ಗದ್ಯಾಣ ದಾನದ ಪ್ರಸ್ತಾಪವಿದೆ ಹಾಗೂ ತೇದಿರಹಿತ ಮಕರಹಳ್ಳಿ ಶಾಸನದಲ್ಲಿ[೧೬೪] ಚಿನ್ನ ಮತ್ತು ಭೂಮಿ ದಾನ ನೀಡಿದ ಮಾಹಿತಿಯು ಕಂಡುಬರುತ್ತದೆ.

ಮೇಲೆ ತಿಳಿಸಿದ ಎಲ್ಲಾ ಅಂಶಗಳನ್ನು ಗಮನಿಸಿದಾಗ ಹಾವೇರಿ ಜಿಲ್ಲೆಯ ಶಾಸನಗಳಲ್ಲಿನ ಮಾಹಿತಿಯನ್ನು ಆಧರಿಸಿ ಅಂದಿನ ಕಾಲದ ಆರ್ಥಿಕ ವ್ಯವಸ್ಥೆಯಲ್ಲಿ ಕೃಷಿ, ನೀರಾವರಿ, ಬೆಳೆಗಳು, ತೆರಿಗೆ ಮಾರಾಟ, ವ್ಯಾಪಾರ, ತೂಕ ಮತ್ತು ಅಳತೆ ಹಾಗೂ ನಾಣ್ಯಗಳು ಚಲಾವಣೆಯಲ್ಲಿದ್ದು ಆರ್ಥಿಕ ವ್ಯವಸ್ಥೆಯು ಅತ್ಯುತ್ತಮ ರೀತಿಯಲ್ಲಿ ನಡೆಯುತ್ತಿತ್ತು ಎಂಬುದನ್ನು ತಿಳಿಯಬಹುದು. ಆದರೆ ಕೆಲವೊಂದು ವಿಷಯಗಳಿಗೆ ಸಂಬಂಧಿಸಿದಂತೆ ಉದಾಹರಣೆಗೆ ಬೆಳೆಗಳು, ಅಳತೆ ಮತ್ತು ತೂಕ ಹಾಗೂ ಮಾರಾಟ ಇವುಗಳ ಬಗ್ಗೆ ಶಾಸನಗಳಲ್ಲಿ ಹೆಚ್ಚಾಗಿ ಮಾಹಿತಿಗಳು ದೊರೆಯದಿರುವುದು ದುರ್ದೈವದ ಸಂಗತಿಯಾಗಿದೆ.

**ಟಿಪ್ಪಣಿಗಳು:**

೧. ಕೊಪ್ಪ ಎಸ್.ಕೆ.: ೧೯೯೦, ತರ್ದವಾಡಿ ನಾಡು ಒಂದು ಅಧ್ಯಯನ, ಪ್ರತಿಭಾ ಪ್ರಕಾಶನ, ಇಂಡಿ. - ಪು. ೨೦೩.

೨. ಚಿದಾನಂದಮೂರ್ತಿ ಎಂ., ೨೦೦೮, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಬೆಂಗಳೂರು, ಪುಟ. ೪೦೪.

೩. ಕ.ಇ.ಸಂ. ೬. ಪುಟ ೨೨ ಮತ್ತಿಹಳ್ಳಿ, ೧೦೭೯.

೪. ಕ.ಇ.ಸಂ. ೪. ಪುಟ ೧೫, ಹೆಮ್ಮಿಗನೂರು, ೧೧೪೯.

೫. ಕ.ಇ.ಸಂ. ೫. ಪುಟ ೨೩, ತಿಳುವಳ್ಳಿ.

೬. ಕ.ಇ.ಸಂ. IV, ಪುಟ. ೩೭.

೭. ಕ.ಇ.ಸಂ. ೫. ಪುಟ ೪೨, ತಿಳುವಳ್ಳಿ ೧೨೩೯.

೮. ಧಾ.ಜಿ.ಶಾ.ಸೂ. ಶಾ.ಸಂ. ೩೪, ಪುಟ. ೭೫.

೯. ಧಾ.ಜಿ.ಶಾ.ಸೂ. ಶಾ.ಸಂ. ೬೭, ಪುಟ. ೪೬.

೧೦. ಎಸ್.ಐ.ಐ.ಸಂ. – ೪, ಪುಟ. ೨೬೭, ಮತ್ತು ಸ್ಟಡೀಸ್ ಇನ್ ಕರ್ನಾಟಕ ಹಿಸ್ಟರಿ, V. ೧೦, ಪು. ೧೭೧, ೨೦೧೧.

೧೧. ಧಾ.ಜಿ.ಶಾ.ಸೂ. ಶಾ.ಸಂ. ೮೫, ಪುಟ. ೬೧.

೧೨. ಕ.ಇ.ಸಂ. IV, ೨೬, ಕೆ.ಆರ್.ಐ. ಪಿ.ಆರ್. ೧೯೪೭, ಪುಟ. ೨೭.

೧೩. ಧಾ.ಜಿ.ಶಾ.ಸೂ., ಶಾ.ಸಂ. ೧೬೮, ಪುಟ. ೩೨.

೧೪. ಎಪಿ.ಇಂ.ಸಂ.XVI, ಪುಟ ೩೩೮, ಕೆ.ಐ. – ೧೧೮.

೧೫. ಧಾ.ಜಿ.ಶಾ.ಸೂ., ಶಾ.ಸಂ. ೧೦೧, ಪುಟ. ೭೩.

೧೬. ಧಾ.ಜಿ.ಶಾ.ಸೂ., ಶಾ.ಸಂ. ೧೬೬, ಪುಟ. ೭೬.

೧೭. ಧಾ.ಜಿ.ಶಾ.ಸೂ. ಶಾ.ಸಂ. ೧೧೩, ಪುಟ. ೪೭.

೧೮. ಧಾ.ಜಿ.ಶಾ.ಸೂ. ಶಾ.ಸಂ. ೧೫೯, ಪುಟ. ೪೦.

೧೯. ಧಾ.ಜಿ.ಶಾ.ಸೂ. ಶಾ.ಸಂ. ೧೦೧, ಪುಟ. ೫೭.

೨೦. ಧಾ.ಜಿ.ಶಾ.ಸೂ. ಶಾ.ಸಂ. ೨೦೭, ಪುಟ. ೬೫.

೨೧. ಧಾ.ಜಿ.ಶಾ.ಸೂ. ಶಾ.ಸಂ. ೧೫೭.

೨೨. ಧಾ.ಜಿ.ಶಾ.ಸೂ. ಶಾ.ಸಂ. ೨೯೨, ಪುಟ. ೮೦.

೨೩. ಧಾ.ಜಿ.ಶಾ.ಸೂ. ಶಾ.ಸಂ. ೪೬, ಪುಟ. ೫೧.

೨೪. ಧಾ.ಜಿ.ಶಾ.ಸೂ. ಶಾ.ಸಂ. ೧೦೮, ಪುಟ. ೩೦.

೨೫. ಕ.ಇ.ಸಂ. IV, ಪುಟ ೮.

೨೬. ಧಾ.ಜಿ.ಶಾ.ಸೂ. ಶಾ.ಸಂ. ೧೨೩, ಪುಟ. ೩೧.

೨೭. ಧಾ.ಜಿ.ಶಾ.ಸೂ. ಶಾ.ಸಂ. ೧೦, ಪುಟ. ೫೪.

೨೮. ಧಾ.ಜಿ.ಶಾ.ಸೂ. ಶಾ.ಸಂ. ೯೫, ಪುಟ. ೩೦.

೨೯. ಕೆ.ಆರ್.ಐ. ಪಿಆರ್. ೧೯೫೩-೫೭, ಪಿ.-೭೩.

೩೦. ಎಸ್.ಐ.ಐ.ಸಂ. XVI, ಪುಟ. ೬೬-೬೮.

೩೧. ಧಾ.ಜಿ.ಶಾ.ಸೂ. ಶಾ.ಸಂ. ೬೬, ಪುಟಟ. ೬೦.

೩೨. ಧಾ.ಜಿ.ಶಾ.ಸೂ. ಶಾ.ಸಂ. ೫೨, ಪುಟ. ೫೫.

೩೩. ಕ.ಇ.ಸಂ. ೪.೧, ಸಾತೇನಹಳ್ಳಿ, ೧೨೦೪.

೩೪. ಕ.ಇ.ಸಂ. ೫.೪೨, ತಿಳುವಳ್ಳಿ, ೧೨೩೯.

೩೫. ಕ.ಇ.ಸಂ. ೬.೪೭ ಹಂಸಬಾವಿ, ೧೨೩೯.

೩೬. ಕ.ಇ.ಸಂ. ೪.೪೮ ಮಾಡಲೂರ, ೧೨೪೭.

೩೭. ಕ.ಇ.ಸಂ. ೫. ಪುಟ ೨೩ ತಿಳುವಳ್ಳಿ, ೧೧೨೯.

೩೮. ಕೃಷ್ಣಭಟ್ಟ ಕೆ. ೧೯೫೫, ಅನು, ಕೌಟಿಲ್ಯನ ಅರ್ಥಶಾಸ್ತ್ರ, ಪುಟ. ೫೩.

೩೯. ಕೊಪ್ಪ ಎಸ್.ಕೆ. ೧೯೯೦, ತರ್ದವಾಡಿ ನಾಡು – ಒಂದು ಅಧ್ಯಯನ, ಪ್ರತಿಭಾ ಪ್ರಕಾಶನ, ಇಂಡಿ, ಪುಟ. ೨೦೯.

೪೦. ನಾಗಯ್ಯ ಜೆ.ಎಂ., ೧೯೯೫, ಕಲಕೇರಿ, ಶ್ರೀ ಬಸವೇಶ್ವರ ಜೀರ್ಣೋದ್ಧಾರ ಟ್ರಸ್ಟ್, ಕಲಕೇರಿ, ಹಾನಗಲ್ಲು ತಾಲ್ಲೂಕು, ಹಾವೇರಿ ಜಿಲ್ಲೆ, ಪುಟ. ೪-೬. ೬೬.

೪೧. ಧಾ.ಜಿ.ಶಾ.ಸೂ. ಶಾ.ಸಂ. ೧೩೨, ಪುಟ. ೩೧.

೪೨. ಎಫಿ.ಇಂ.ಸಂ. XVI, ಪುಟ. ೨೮೫-೮೬.

೪೩. ಧಾ.ಜಿ.ಶಾ.ಸೂ. ಶಾ.ಸಂ. ೧೬೫, ಪುಟ. ೩೨.

೪೪. ಎಸ್.ಐ.ಐ.ಸಂ. IX, ಬಾ – ೧, ಸಂ – ೧೭೦, ಕ್ರಿ.ಶ. ೧೦೧೫.

೪೫. ಧಾ.ಜಿ.ಶಾ.ಸೂ, ಶಾ.ಸಂ. ೧೫, ಪುಟ. ೫೦.

೪೬. ಎಫಿ.ಇಂ.ಸಂ. XVI, ಪು. ೭೫-೮೧, ದಾ.ಜಿ.ಶಾ.ಸೂ., ಶಾ.ಸಂ. – ೧೮೬, ಪುಟ. ೩೩.

೪೭. ಧಾ.ಜಿ.ಶಾ.ಸೂ, ಶಾ.ಸಂ. ೯೯, ಚಿಕ್ಕೆರೂರು ೧೯೪೮, ಪುಟ. ೬೮.

೪೮. ಎಫಿ.ಇಂ.ಸಂ. XVI, ಪು. ಪುಟ. ೩೩೭-೩೮.

೪೯. ಧಾ.ಜಿ.ಶಾ.ಸೂ. ಶಾ.ಸಂ., ೧೫೧, ಪುಟ. ೪೮.

೫೦. ಧಾ.ಜಿ.ಶಾ.ಸೂ., ಶಾ.ಸಂ. ೩೧, ಪುಟ. ೪೪.

೫೧. ಧಾ.ಜಿ.ಶಾ.ಸೂ., ಶಾ.ಸಂ. ೩೭, ಪುಟ. ೫೧.

೫೨. ಕ.ಇ.ಸಂ. IV, ೨೬, ಕೆ.ಆರ್.ಐ, ಪಿಆರ್–೧೯೪೭, ಪುಟ. ೨೩.

೫೩. ಧಾ.ಜಿ.ಶಾ.ಸೂ., ಸಂ. – ೪೮, ಪುಟ. ೨೮.

೫೪. ಕ.ಇ.ಸಂ. V, ಪುಟ. ೮.

೫೫. ಅದೇ. ಪುಟ ೮.

೫೬. ಕ.ಇ.ಸಂ. IV, ಪುಟ ೧೪.

೫೭. ಎಫಿ.ಇಂ.ಸಂ. XIX, ಪುಟ. ೧೮೩–೮೭.

೫೮. ಎಫಿ.ಇಂ.ಸಂ. XVI, ಪುಟ. ೩೩೨–೩೭.

೫೯. ಎಫಿ.ಇಂ.ಸಂ. XIX, ಪುಟ. ೧೮೭–೮೯.

೬೦. ಧಾ.ಜಿ.ಶಾ.ಸೂ., ಶಾ.ಸಂ. – ೬೦, ಪುಟ. ೪೫.

೬೧. ಧಾ.ಜಿ.ಶಾ.ಸೂ., ಶಾ.ಸಂ. – ೧೮೮, ಪುಟ. ೩೩.

೬೨. ಧಾ.ಜಿ.ಶಾ.ಸೂ., ಶಾ.ಸಂ. – ೧೩೪, ಪುಟ. ೪೭.

೬೩. ಧಾ.ಜಿ.ಶಾ.ಸೂ., ೧೯೩೪–೩೫, ಶಾ.ಸಂ. – ೧೬, ಪುಟ. ೫೪.

೬೪. ಎ.ಆರ್.ಐ.ಇ., ೧೯೫೦–೫೧, ಬಿ. – ೬೩, ಕ್ರಿ.ಶ. ೧೧೦೪.

೬೫. ಎ.ಆರ್.ಐ.ಇ., ೧೯೩೨–೩೩, ಬಿ. – ೮೦, ಕ್ರಿ.ಶ. ೧೧೦೯.

೬೬. ಧಾ.ಜಿ.ಶಾ.ಸೂ., ಶಾ.ಸಂ. ೧೦೩, ಪುಟ. ೩೦.

೬೭. ಧಾ.ಜಿ.ಶಾ.ಸೂ., ಶಾ.ಸಂ., ೧೩೮, ಪುಟ. ೪೭.

೬೮. ಕ.ಇ.ಸಂ. I, ಪುಟ. ೧೯, ಎಫಿ.ಇಂ.ಸಂ. XIII, ಪುಟ. ೧೨–೧೫.

೬೯. ಕ.ಇ.ಸಂ. IV, ಪುಟ. ೩೪.

೭೦. ಕ.ಇ.ಸಂ. V, ಪುಟ. ೧೯, ಕ್ರಿ.ಶ. ೧೧೨೧–೨೨.

೭೧. ಧಾ.ಜಿ.ಶಾ.ಸೂ., ಶಾ.ಸಂ. – ೧೦೦, ಪುಟ. ೪೬

೭೨. ಧಾ.ಜಿ.ಶಾ.ಸೂ., ಶಾ.ಸಂ. – ೧೮೯, ಪುಟ. ೩೩.

೭೩. ಧಾ.ಜಿ.ಶಾ.ಸೂ. ಶಾ.ಸಂ. – ೯೬, ೧೯೩೩–೩೪೪, ಪುಟ. ೫೭

೭೪. ಕ.ಇ.ಸಂ. VI, ಪುಟ ೨೫.

೭೫. ಎಫಿ.ಇಂ.ಸಂ. V, ಪುಟ. ೨೩೨-೩೪.

೭೬. ಧಾ.ಜಿ.ಶಾ.ಸೂ., ಶಾ.ಸಂ. ೨೬೮, ಪುಟ. ೭೯.

೭೭. ಕ.ಇ.ಸಂ. VI, ಪುಟ ೨೭.

೭೮. ಧಾ.ಜಿ.ಶಾ.ಸೂ., ಶಾ.ಸಂ. ೧೯೩-೯೪, ಪುಟ. ೫೪.

೭೯. ಧಾ.ಜಿ.ಶಾ.ಸೂ., ಶಾ.ಸಂ. ೧೫, ಪುಟ. ೫೦.

೮೦. ಧಾ.ಜಿ.ಶಾ.ಸೂ., ಶಾ.ಸಂ., ೧೦೦, ಪುಟ. ೪೬.

೮೧. ಧಾ.ಜಿ.ಶಾ.ಸೂ. ಶಾ, ಸಂ. ೧೫೬, ಪುಟ. ೪೮.

೮೨. ಧಾ.ಜಿ.ಶಾ.ಸೂ. ಶಾ. ಸಂ. ೧೭೨, ಪುಟ. ೩೨.

೮೩. ಧಾ.ಜಿ.ಶಾ.ಸೂ., ಶಾ.ಸಂ. ೧೭೪, ಪುಟ. ೩೨.

೮೪. ಧಾ.ಜಿ.ಶಾ.ಸೂ., ಶಾ.ಸಂ. ೧೬೦, ಪುಟ. ೪೮.

೮೫. ಧಾ.ಜಿ.ಶಾ.ಸೂ., ಶಾ.ಸಂ. ೧೬೨, ಪುಟ. ೪೮.

೮೬. ಎಸ್.ಐ.ಐ.ಸಂ. XX, ಪುಟ ೧೪೨.

೮೭. ಕ.ಇ.ಸಂ. IV, ಪುಟ ೧೩.

೮೮. ಕ.ಇ.ಸಂ. IX, ಪುಟ ೧೪.

೮೯. ಧಾ.ಜಿ.ಶಾ.ಸೂ., ಶಾ.ಸಂ. ೬೧, ಪುಟ. ೫೬.

೯೦. ಧಾ.ಜಿ.ಶಾ.ಸೂ., ೧೯೩೫-೩೬, ಶಾ.ಸಂ. ೨೯, ಪುಟ. ೫೫.

೯೧. ಎ.ಆರ್.ಐ., ೧೯೩೩-೩೪, ಇ ೧೧.

೯೨. ಕ.ಇ.ಸಂ. ೪.೧, ಸಾತೇನಹಳ್ಳಿ, ೧೨೦೪.

೯೩. ಧಾ.ಜಿ.ಶಾ.ಸೂ., ೧೯೩೪-೩೫, ಶಾ.ಸಂ. ೧೭೧, ಪುಟ. ೪೮,

೯೪. ಧಾ.ಜಿ.ಶಾ.ಸೂ., ಶಾ.ಸಂ. ೧೭೦, ಪುಟ. ೪೮.

೯೫. ಎಸ್.ಐ.ಐ.ಸಂ. XX, ಪುಟ ೧೯೬.

೯೬. ಧಾ.ಜಿ.ಶಾ.ಸೂ., ಶಾ.ಸಂ. ೧೭೦, ಪುಟ. ೪೮.

೯೭. ಧಾ.ಜಿ.ಶಾ.ಸೂ., ಶಾ.ಸಂ. ೧೭೨, ಪುಟ. ೪೯.

೯೮. ಧಾ.ಜಿ.ಶಾ.ಸೂ., ಶಾ.ಸಂ. ೧೭೪, ಪುಟ. ೪೯.

೯೯. ಧಾ.ಜಿ.ಶಾ.ಸೂ., ಶಾ.ಸಂ. ೧೯೨, ಪುಟ. ೪೬.

೧೦೦. ಕ.ಇ.ಸಂ. VI, ಪುಟ ೪೩.

೧೦೧. ಕ.ಇ.ಸಂ. ೪. ಪುಟ ೪೮, ಮಾಡಲೂರ ೧೨೪೭

೧೦೨. ಧಾ.ಜಿ.ಶಾ.ಸೂ. ೧೯೩೪-೩೫, ಶಾ.ಸಂ. ೧೦೦, ಪುಟ. ೫೭

೧೦೩. ಧಾ.ಜಿ.ಶಾ.ಸೂ. ಶಾ.ಸಂ. ೧೭೮, ೧೭೯, ಪುಟ. ೪೯.

೧೦೪. ಎಸ್.ಐ.ಐ.ಸಂ. XX, ಪುಟ. ೨೨೦.

೧೦೫. ಧಾ.ಜಿ.ಶಾ.ಸೂ. ಆರ್.ಎನ್.ಜಿಸಿ.ಶಾ.ಸಂ. ೪೬, ಪುಟ. ೩೫.

೧೦೬. ಧಾ.ಜಿ.ಶಾ.ಸೂ. ಶಾ.ಸಂ., ೮೮, ಪುಟ. ೫೭

೧೦೭. ಧಾ.ಜಿ.ಶಾ.ಸೂ.,ಶಾ.ಸಂ., ೧೮೩, ಪುಟ. ೪೯.

೧೦೮. ಕ.ಇ.ಸಂ. IV, ಪುಟ ೩೦.

೧೦೯. ಧಾ.ಜಿ.ಶಾ.ಸೂ. ಶಾ.ಸಂ. ೬೬, ಪುಟ. ೪೫.

೧೧೦. ಧಾ.ಜಿ.ಶಾ.ಸೂ., ೧೯೩೪-೩೫, ಶಾ.ಸಂ. – ೭೧, ಪುಟ. ೫೬.

೧೧೧. ಎಸ್.ಐ.ಐ.ಸಂ. XX, ಪುಟ. ೪೨.

೧೧೨. ಧಾ.ಜಿ.ಶಾ.ಸೂ.ಶಾ.ಸಂ. ೧೮, ಪುಟ. ೫೮.

೧೧೩. ಧಾ.ಜಿ.ಗಾ.ಸೂ.ಶಾ.ಸಂ. ೯೦, ಪುಟ. ೬೧.

೧೧೪. ಧಾ.ಜಿ.ಗಾ.ಸೂ.ಶಾ.ಸಂ. ೧೬೩, ಪುಟ. ೪೮.

೧೧೫. ಧಾ.ಜಿ.ಗಾ.ಸೂ.ಶಾ.ಸಂ., ೧೯೫, ಪುಟ. ೪೯.

೧೧೬. ಧಾ.ಜಿ.ಶಾ.ಸೂ, ಶಾ.ಸಂ. ೧೯೫, ಪುಟ. ೨೮.

೧೧೭. ಧಾ.ಜಿ.ಶಾ.ಸೂ, ಶಾ.ಸಂ. ೬೧, ಪುಟ. ೨೯.

೧೧೮. ಧಾ.ಜಿ.ಶಾ.ಸೂ., ೧೯೪೫-೪೬, ಶಾ.ಸಂ. ೧೦೪, ಪುಟ. ೬೧.

೧೧೯. ಧಾ.ಜಿ.ಶಾ.ಸೂ., ಶಾ.ಸಂ. ೧೬೩, ಪುಟ. ೪೮.

೧೨೦. ಎಸ್.ಐ.ಐ.ಸಂ. XX, ಪುಟ. ೩೫೫,

೧೨೧. ಎಫಿ.ಇಂ.ಸಂ. VI, ಪುಟ. ೨೫೧-೫೩, ಎಫಿ.ಇಂ.ಸಂ. XXXIII, ಪುಟ. ೩೧.

೧೨೨. ಪಂಚಮುಖಿ ಆರ್.ಎಸ್. ೧೯೬೭, ಕರ್ನಾಟಕ ಇತಿಹಾಸ ಸಂಶೋಧನ ಮಂಡಳಿ, ಧಾರವಾಡ, ಪುಟ. ೩೩.

೧೨೩. ಹಿರೇಮಠ ಬಿ.ಆರ್., ೧೫೮೧, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ. ೧೨೭

೧೨೪. ಎಸ್.ಐ.ಐ.ಸಂ. XX , ೩೫೫, ಪುಟ. ೩೪.

೧೨೫. ಕ.ಇ.ಸಂ. ೪, ಐ.ಬಿ. ೩೪, ೧೧೧೯.

೧೨೬. ಎಸ್.ಐ.ಐ.ಸಂ. XX, ಪುಟ. ೭೬, ಕ್ರಿಶ. ೧೧೧೮.

೧೨೭. ಎಸ್.ಐ.ಐ.ಸಂ. XX, ಪುಟ. ೮೮, ಕ್ರಿಶ. ೧೧೨೩.

೧೨೮. ಕ.ಇ.ಸಂ. II, ಪುಟ ೧೭, ತಿಳುವಳ್ಳಿ, ೧೧೨೬.

೧೨೯. ಕ.ಇ.ಸಂ. ೧೪.೧, ಸತೇನಹಳ್ಳಿ ೧೨೦೪,

೧೩೦. ಧಾ.ಜಿ.ಶಾ.ಸೂ. ಶಾ.ಸಂ., ೧೭೨, ಪುಟ. ೪೯.

೧೩೧. ಕ.ಇ.ಸಂ. IV, ಪುಟ. ೨, ಸತೇನಹಳ್ಳಿ ೧೨೪೧.

೧೩೨. ಕ.ಇ.ಸಂ. VI, ಪುಟ ೪೨, ೩೭.

೧೩೩. ಎಸ್.ಐ.ಐ.ಸಂ. XX, ಕಲಕೇರಿ ೧೨೭೦.

೧೩೪. ಎಸ್.ಐ.ಐ.ಸಂ. XX, ಪುಟ. ೩೫೫, ೧೩ ಮತ್ತು ೧೪ ಶತಮಾನ ಕಲಕೇರಿ.

೧೩೫. ಕ.ಇ.ಸಂ.V, ಪುಟ. ೧೦೫.

೧೩೬. ಎಸ್.ಐ.ಐ.ಸಂ. XX, ೨೨೮, ಕಲಕೇರಿ ೧೨೦೬.

೧೩೭. ಅದೇ, ಪುಟ. ೩೨೨, ೧೩ನೇ ಶತ ಕಲಕೇರಿ.

೧೩೮. ಕ.ಇ.ಸಂ. ೪.೨, ಸತೇನಹಳ್ಳಿ ೧೨೪೧.

೧೩೯. ಜಗದೀಶ, ದೇವರಕೊಂಡಾರೆಡ್ಡಿ (ಸಂ.), ೨೦೦೪, ಶಾಸನ ಅಧ್ಯಾಯ, ಸಂ. ೨, ಪ್ರಸಾರಾಂಗ, ಕ.ವಿ.ವಿ. ಹಂಪಿ. ಪುಟ. ೧೧–೧೩.

೧೪೦. ಮರಿಯಪ್ಪ ಭಟ್ಟ ಸಂ.೧೯೯೫, ವ್ಯವಹಾರ ಗಣಿತ (ರಾಜಾದಿತ್ಯ), ಪು–೨೬.

೧೪೧. ಕ.ಕ.ವಿ.ವಿ.ಕೋ. ೨೦೦೭, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು. ೧೪೦.

೧೪೨. ಚಿದಾನಂದ ಮೂರ್ತಿ ಎಂ., ೨೦೦೮, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಬೆಂಗಳೂರು, ಪುಟ. ೪೩೮.

೧೪೩. ಕೊಪ್ಪ ಎಸ್.ಕೆ., ೧೯೯೦, ತರ್ದವಾಡಿನಾಡು – ಒಂದು ಅಧ್ಯಯನ, ಪುಟ. ೨೨೧.

೧೪೪. ಚಿದಾನಂದ ಮೂರ್ತಿ ಎಂ., ೨೦೦೮, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಬೆಂಗಳೂರು, ಪುಟ. ೪೩೮.

೧೪೫. ಧಾ.ಜಿ.ಶಾ.ಸೂ. ಶಾ.ಸಂ. ೧೯೮, ಪುಟ. ೬೫.

೧೪೬. ಎಫಿ.ಇಂ.ಸಂ. XVI, ಪುಟ. ೨೮೫–೮೬.

೧೪೭. ಧಾ.ಜಿ.ಶಾ.ಸೂ., ಶಾ.ಸಂ. ೯೯, ಚಿಕ್ಕೆರೂರು, ೧೦೪೮.

೧೪೮. ಧಾ.ಜಿ.ಶಾ.ಸೂ., ಶಾ.ಸಂ. ೧೭೩, ಪುಟ. ೩೨.

೧೪೯. ಕ.ಇ.ಸಂ., ಪುಟ. ೨೮, ತಿಳುವಳ್ಳಿ ೧೯೭೨.

೧೫೦. ಧಾ.ಜಿ.ಶಾ.ಸೂ., ಶಾ.ಸಂ. ಪುಟ. ೪೯.

೧೫೧. ಧಾ.ಜಿ.ಶಾ.ಸೂ.,ಶಾ.ಸಂ. ೧೬೯, ಪುಟ. ೩೨.

೧೫೨. ಕ.ಇ.ಸಂ. IV, ಪುಟ. ೩೩, ಕ್ರಿ.ಶ. ೧೦೭೯.

೧೫೩. ಕ.ಇ.ಸಂ. IV, ಪುಟ. ೩೨, ಕ್ರಿ.ಶ. ೧೦೮೮.

೧೫೪. ಕೆ.ಐ.ಸಂ. I, ಪುಟ. ೧೯, ಎಫಿ.ಇಂ.ಸಂ. XIII, ಪುಟ. ೧೨–೧೫, ಕ್ರಿ.ಶ. ೧೧೦೮.

೧೫೫. ಧಾ.ಜಿ.ಶಾ.ಸೂ. ಶಾ.ಸಂ. ೧೮೯, ಪುಟ. ೩೩.

೧೫೬. ಕ.ಇ.ಸಂ. VI, ಪುಟ ೨೭, ಕ್ರಿ.ಶ. ೧೧೪೨.

೧೫೭. ಧಾ.ಜಿ.ಶಾ.ಸೂ., ಶಾ.ಸಂ. ೧೫೮, ಪುಟ. ೪೮.

೧೫೮. ಎಫಿ.ಇಂ. ಸಂ. XIXVI, ಪುಟ. ೨೮೫–೮೬.

೧೫೯. ಧಾ.ಜಿ.ಶಾ.ಸೂ., ಶಾ.ಸಂ. ೧೭೦, ಪುಟ. ೪೮.

೧೬೦. ಧಾ.ಜಿ.ಶಾ.ಸೂ., ಶಾ.ಸಂ. ೧೫೨, ಪುಟ. ೭೫.

೧೬೧. ಧಾ.ಜಿ.ಶಾ.ಸೂ., ಶಾ.ಸಂ. ೧೭೨, ಪುಟ. ೪೯.

೧೬೨. ಧಾ.ಜಿ.ಶಾ.ಸೂ., ಶಾ.ಸಂ. ೧೦೧, ಪುಟ. ೫೭.

೧೬೩. ಧಾ.ಜಿ.ಶಾ.ಸೂ., ಶಾ.ಸಂ. ೨೦೭, ಪುಟ. ೬೫.

೧೬೪. ಧಾ.ಜಿ.ಶಾ.ಸೂ., ಶಾ.ಸಂ. ೨೩೦, ಪುಟ. ೬೬.

# ಅಧ್ಯಾಯ – ೫

## ಸಾಮಾಜಿಕ ವ್ಯವಸ್ಥೆ

- ಜಾತಿ ವ್ಯವಸ್ಥೆ
- ಬ್ರಾಹ್ಮಣರು
- ಕ್ಷತ್ರಿಯರು
- ವೈಶ್ಯರು
- ಶೂದ್ರರು
- ಸ್ತ್ರೀಯರ ಸ್ಥಾನಮಾನ
- ವಿವಾಹ
- ವೀರಗಲ್ಲು
- ಮಾಸ್ತಿಗಲ್ಲು
- ನಿಷಧಿ ಕಲ್ಲುಗಳು

# ಸಾಮಾಜಿಕ ವ್ಯವಸ್ಥೆ

ಸಾಮಾಜಿಕ ವ್ಯವಸ್ಥೆ ಪ್ರತಿಯೊಂದು ಸಮಾಜವು ಒಂದು ಸಂಸ್ಕೃತಿಯನ್ನು ಹೊಂದಿರುತ್ತದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಮೌಲ್ಯಾಧಾರಿತ ಮೌಲ್ಯೀಕರಿಸುವ ಮಾನವನ ಒಟ್ಟಾರೆ ಜೀವನಕ್ಕೆ ಒಳಪಡಿಸಿರುತ್ತದೆ. ಏಕೆಂದರೆ, ಸಾಮಾಜಿಕ ಸಂಬಂಧಗಳು, ಆಚಾರ ವಿಚಾರಗಳು, ಸುಸಂಸ್ಕೃತ ಜೀವನದ ಆಗು ಹೋಗುಗಳ ಜೊತೆಯಲ್ಲಿಯೇ ಸಾಮಾಜೀಕರಣ ರೂಪುಗೊಳ್ಳುತ್ತದೆ. ಇಂತಹ ವ್ಯವಸ್ಥೆಯಲ್ಲಿ ಮಾನವರೆಲ್ಲರೂ ಒಂದೆಡೆ ನೆಲೆಸಿ ಸಮಂಜಸತೆಯ ಬದುಕನ್ನು ನಡೆಸುವ ನಿಟ್ಟಿನಲ್ಲಿ ನಿರಂತರ ಪ್ರಯತ್ನವನ್ನು ಮಾಡುತ್ತಾರೆ. ಹೀಗಿರುವಾಗ "ಪ್ರಾಚೀನ ಕರ್ನಾಟಕದಲ್ಲಿ ಸಾಮಾಜಿಕ ಪ್ರಜ್ಞೆಯು ಎಚ್ಚೆತ್ತಿದ್ದಿತೆಂಬುದನ್ನು ವ್ಯಕ್ತಿಯು ತನ್ನಷ್ಟಕ್ಕೆ ತಾನು ಬಾಳದೆ ಇತರರಿಗಾಗಿ ಬಾಳಬೇಕೆಂಬ ಅರಿವು ಅವನಿಗೆ ಸಂಪೂರ್ಣವಾಗಿ ಇದ್ದಿತು ಎಂಬುದನ್ನು ತೋರುವುದೇ ಆಗಿದೆ"[೧]

ಸಮಾಜವು ಸಮಾಜಿಕ ಪ್ರಕ್ರಿಯೆಯಲ್ಲಿ ತನ್ನನ್ನು ಒಳಪಡಿಸಿಕೊಂಡು ಮಾನವೀಯ ಮೌಲ್ಯಗಳನ್ನು ಅನುಷ್ಠಾನಗೊಳಿಸಿ ಮಾನವ ಮಾನವನ್ನು ಹತ್ತಿರ ತಂದು ಜನತೆಯನ್ನು ಜೊತೆಗೂಡಿಸುವ ಪ್ರಮುಖ ತಾಣ ಸಮಾಜವೆನಿಸಿದೆ. ಇದರ ಹಿನ್ನೆಲೆಯಲ್ಲಿ ಸಮಾಜದ ವ್ಯವಸ್ಥೆಯಲ್ಲಿ ಜಾತಿವ್ಯವಸ್ಥೆ, ವರ್ಗ-ವರ್ಣ ವ್ಯವಸ್ಥೆ, ಮಹಿಳೆಯರ ಸ್ಥಾನಮಾನ, ಕುಟುಂಬ, ವಿವಾಹ ಮತ್ತಿತರ ಅಂಶಗಳನ್ನು ಒಳಗೊಂಡಂತೆ ಕಾರ್ಯನಿರ್ವಹಿಸಲು ಅನುಮಾಡಿ ಜೊತೆಗೆ ಸ್ಮಾರಕಗಳ ರೂಪದಲ್ಲಿ ಅಂದಿನ ಸಮಾಜದಲ್ಲಿ ಇದ್ದ ಸಾಮಾಜಿಕ ಕಾರ್ಯ ಪ್ರವೃತ್ತಿಯ ಜೊತೆಯಲ್ಲಿಯೇ ಅಧ್ಯಯನವನ್ನು ಕೈಗೊಂಡಾಗ ವೀರಗಲ್ಲುಗಳು, ಮಾಸ್ತಿಗಲ್ಲುಗಳು, ನಿಷದಿಗಲ್ಲುಗಳ ಉಲ್ಲೇಖಗಳು ಕಾಣಬರುತ್ತವೆ. ಒಟ್ಟಾರೆ ಎಲ್ಲಾ ವ್ಯವಸ್ಥೆಗಳು ಸಾಮಾಜೀಕರಣದಲ್ಲಿ ರೂಪುಗೊಳ್ಳುವುದನ್ನು ಕಾಣಬಹುದು. ಈ ಹಿನ್ನೆಲೆಯಲ್ಲಿ ಹಾವೇರಿ ಜಿಲ್ಲೆಯ ಶಾಸನಗಳಲ್ಲಿ ಸಾಮಾಜಿಕ ವ್ಯವಸ್ಥೆಯ ಬಗ್ಗೆ ಉಲ್ಲೇಖವಾಗಿರುವ ಮಾಹಿತಿಯನ್ನು ಈ ಕೆಳಕಂಡತೆ ಚರ್ಚಿಸಲಾಗಿದೆ.

## ಜಾತಿ ವ್ಯವಸ್ಥೆ:

ಭಾರತೀಯ ಸಂಸ್ಕೃತಿಯ ಸಾಮಾಜಿಕ ವ್ಯವಸ್ಥೆಯನ್ನು ಒಳಗೊಂಡು ಹಾವೇರಿ ಜಿಲ್ಲೆಯ ಜನತಾ ಸಮಾಜ ಜನಾಂಗ ಕಾಲಕಾಲಕ್ಕೆ ಬಂದು ನೆಲೆಸಿದ ಮತ್ತು ಮೊದಲಿನಿಂದಲೂ ಇಲ್ಲಿಯೇ ನೆಲೆಸಿದ ಆದಿವಾಸಿಗಳ ಅಂದರೆ ಮಾಲಿಗರ ಅನೇಕ ಜನಾಂಗಗಳು ಇಲ್ಲಿ ಸಮಾವೇಶಗೊಳ್ಳುತ್ತವೆ. ಅಂದರೆ ಇಡೀ ಮಾನವನ ಜನಾಂಗದಲ್ಲಿ ಒಂದೇ ಚೈತನ್ಯವನ್ನು ಕಂಡ

ಉಪನಿಷತ್ತಿನ ಬ್ರಹ್ಮ ಸಾಕ್ಷಾತ್ಕಾರದ ಪರಂಪರೆಯಲ್ಲಿ ಬಂದ ಹಿಂದು ಧರ್ಮ, ಅವು ಎಲ್ಲವುಗಳಲ್ಲಿ ಒಂದು ಏಕತೆಯ ಸೂತ್ರವನ್ನು ಬೆಸೆಯಲು ಸಮರ್ಥವಾಯಿತು. ಆದರೆ ಆ ವಿಕಾಸ ಕ್ರಿಯೆ ಉಪನಿಷತ್ ಗೀತೆಗಳ ಕಾಲಕ್ಕೆ ನಿಂತು ಹೋಗಿ ಮುಂದೆ ಸಮಾಜವನ್ನು ವಿಭಜಿಸುವ ವರ್ಣಾಶ್ರಮ ಪದ್ಧತಿ ಉಕ್ಕಿನ ಕೋಟೆಯಂತೆ ಬೆಳೆದು ನಿಂತಿತು. "ಗುಣಕರ್ಮ ವಿಭಾಗಶಃ" ಮಾಡಿದ ಆ ವಿಭಜನೆ ಹುಟ್ಟಿನಿಂದಲೇ ನಿರ್ಧಾರವಾಗುವ ಜಾತಿಯಾಗಿ ಪರಿಣಮಿಸಿತು. ಹೀಗಾಗಿ ಜೈನ, ಬೌದ್ಧ ಧರ್ಮಗಳು ಅವುಗಳನ್ನು ಪ್ರತಿಭಟಿಸಲು ವಿಶಾಲ ತತ್ವದ ತಳಹದಿಯ ಮೇಲೆ ಧರ್ಮವನ್ನು ಬೆಳೆಸಿದವು. ಆದರೂ ಹಿಂದೂ ಧರ್ಮ ಹೊಸ ಹೊಸ ರೂಪಗಳಲ್ಲಿ ಮೈದೋರಿ ಈ ವಿಭಜನೆಯ ಪದ್ಧತಿಯನ್ನು ಸಮಾಜದಲ್ಲಿ ಭದ್ರಪಡಿಸಿತು"[೨]. ಆದ್ದರಿಂದ ಹಾವೇರಿ ಜಿಲ್ಲೆಯ ಸಾಮಾಜಿಕ ವ್ಯವಸ್ಥೆ ಜಾತಿ ಪದ್ಧತಿ ಒಂದು ಪ್ರಮುಖ ಅಂಶವಾಗಿತ್ತು ಎಂದು ಹೇಳಬಹುದು.

ಪ್ರಾಚೀನ ಕಾಲದಿಂದಲೂ ಭಾರತೀಯ ಸಮಾಜದಲ್ಲಿ ವರ್ಗ–ವರ್ಣಗಳು ಪ್ರಮುಖ ಪಾತ್ರವನ್ನು ವಹಿಸುತ್ತಾ ಬಂದಿದ್ದು ಸಮಾಜವನ್ನು ಚತುರ್ವರ್ಣಗಳಲ್ಲಿ ವಿಭಜಿಸಿದ್ದನ್ನು ಉಲ್ಲೇಖಿಸಿದ್ದನ್ನು ಪ್ರಾಚೀನ ದಾಖಲೆಯಾದ ಋಗ್ವೇದದ "ಪುರುಷ ಸೂಕ್ತದಲ್ಲಿ". ಇದನ್ನು ಪ್ರಕ್ಷಿಪ್ತ ಎಂದು ಹೇಳಲಾಗುತ್ತದೆ. ಪುರುಷ ಸೂಕ್ತದ ಕಾಲವನ್ನು ಅಥರ್ವಣವೇದದ ಕೊನೆಯ ಭಾಗದಲ್ಲಿ ಕಾಣಬಹುದಾದರೂ ಇದು ಕೊನೆಯ ಭಾಗವೆಂದು ವಿದ್ವಾಂಸರು ನಿರ್ಧರಿಸಿದ್ದಾರೆ[೩].

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ಪ್ರಾಚೀನ ವರ್ಣ ವ್ಯವಸ್ಥೆ ರೂಪುಗೊಳ್ಳುವುದಕ್ಕಿಂತ ಮೊದಲು ಸಮಾಜವನ್ನು ವೃತ್ತಿಗನುಗುಣವಾಗಿ ವರ್ಗೀಕರಣ ಮಾಡಲಾಗಿತ್ತು. ಅಲ್ಲದೆ ವೃತ್ತಿಗಳು ವಂಶಾನುಗತವಾಗಿಲ್ಲವೆಂದು ತೋರಿಸಲು ಯಾವ ಆಧಾರಗಳು ಇರಲಿಲ್ಲ. ವರ್ಣ ಎಂಬ ಶಬ್ದ ಜಾತಿ ಸೂಚಕವಾಗಿರದೆ ಅದು ಆರ್ಯ ಮತ್ತು ಮೂಲನಿವಾಸಿಗಳ ನಡುವಣ ವ್ಯತ್ಯಾಸವನ್ನು ಸೂಚಿಸುವ ಪದವಾಗಿತ್ತು (ಅಂದರೆ ಭಾಷೆ, ಮತ, ಧರ್ಮ) ನಂತರದಲ್ಲಿ ವಿವಿಧ ವೃತ್ತಿಗಳಲ್ಲಿನ ಬೇಧವು ಸಾಮಾಜಿಕವಾಗಿ ಮೇಲುಕೀಳು ಎಂಬ ಭಾವನೆಗಳಿಂದ ಚಾತುರ್ವರ್ಣಗಳಿಗೆ ದಾರಿಮಾಡಿಕೊಟ್ಟಿದ್ದು, ಈ ವ್ಯವಸ್ಥೆ ಬ್ರಾಹ್ಮಣಗಳ ಕಾಲಕ್ಕೆ ಮತ್ತಷ್ಟು ಬಿಗಿಗೊಳಿಸಲು ವೃತ್ತಿ ವ್ಯತ್ಯಾಸ ಹಿಮ್ಮೆಟ್ಟಿ ವ್ಯಕ್ತಿಯ ಹುಟ್ಟು ಮತ್ತು ವರ್ಣವನ್ನು ನಿರ್ಧರಿಸುವಂತಾಯಿತು"[೪].

**ಬ್ರಾಹ್ಮಣರು:**

ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರಾಚೀನ ಕಾಲದ ವರ್ಣವ್ಯವಸ್ಥೆಯನ್ನು ಮೊದಲ ಸ್ಥಾನದಲ್ಲಿ ಇಟ್ಟು ನೋಡುವಾಗ ಬ್ರಾಹ್ಮಣ ವರ್ಗ ಅತ್ಯಂತ ಶ್ರೇಷ್ಠವಾದುದು. ಹೀಗಿರುವಾಗ ವಿದ್ಯಾಕ್ಷೇತ್ರದಲ್ಲಿ, ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ತಮ್ಮದೇ ಪ್ರಾಬಲ್ಯವನ್ನು ಮೀರಿ ವೇದ ಅಧ್ಯಯನ, ಸತ್ಕರ್ಮಗಳು, ಮುಖ್ಯ ಮಾರ್ಗಗಳು ಆಗಿದ್ದರೂ ರಾಜ್ಯದ

ಅಧಿಕಾರದಲ್ಲಿ ಅಮಾತ್ಯ, ಸಂಧಿ ವಿಗ್ರಹಿ, ದಂಡನಾಯಕ, ಸೈನ್ಯಾಧಿಕಾರಿ, ಕೋಶಾಧಿಕಾರಿ, ಶ್ಯಾನುಭೋಗ ಹೀಗೆ ಹಲವಾರು ಉದ್ಯಮಗಳಲ್ಲಿ ಸೇವೆ ಸಲ್ಲಿಸುತ್ತಿದ್ದರು.

ರಾಜ್ಯದಲ್ಲಿ ವೇದಾಧ್ಯಯನಗಳು ಸುಸೂತ್ರವಾಗಿ ನಡೆಯಬೇಕಾದರೆ ಅವರಿಗೆ ಯಾವುದೇ ತರಹದ ನ್ಯೂನ್ಯತೆಗಳು ಮುಖ್ಯವಾಗಿ ಆಹಾರ, ಮನೆ, ಜೀವನಕ್ಕೆ ಯಾವುದೇ ತೊಂದರೆಗಳು ಆಗಬಾರದೆಂದು ರಾಜನು ಹಲವಾರು ದತ್ತಿಗಳನ್ನು ನೀಡುತ್ತಿದ್ದನು. ಜೊತೆಗೆ ಇವರು ವಾಸಿಸುವ ಸ್ಥಳಗಳನ್ನು ಅಗ್ರಹಾರ ಅಥವಾ ಚತುರ್ವೇದಿ ಮಂಗಲಗಳೆಂದು ಹೇಳಲಾಗಿದೆ. ಇವರಿಗೆ ನೀಡುತ್ತಿದ್ದ ದಾನಗಳನ್ನು ಬ್ರಹ್ಮದ್ಯೇಯವೆಂದು ಕರೆಯಲಾಗುತ್ತಿತ್ತು. ಹೀಗಾಗಿ ಬ್ರಾಹ್ಮಣರು ಸಮಾಜದಲ್ಲಿ ಅತ್ಯುನ್ನತ ಸ್ಥಾನದಲ್ಲಿ ಇದ್ದರು. ಹೀಗಿರುವಾಗ ಹಾವೇರಿ ಜಿಲ್ಲೆಯನ್ನು ಒಳಗೊಂಡಂತೆ ಶಾಸನಗಳನ್ನು ಅವಲೋಕಿಸಿದಾಗ ಕ್ರಿ.ಶ. ೧೭೮೫ರ ಹಾವೇರಿ ತಾಲೂಕಿನ ಶಾಸನದಲ್ಲಿ[೫] ಶ್ರೀನಿವಾಸದೇವರ ಅಗ್ರಹಾರದಲ್ಲಿಯ ಬ್ರಾಹ್ಮಣ ವೃತ್ತಿಗಳ ಉಲ್ಲೇಖ ಕಂಡುಬರುತ್ತದೆ. ತೇದಿರಹಿತ ಹಾವೇರಿ ತಾಲೂಕಿನ ಕರಜಗಿ ಶಾಸನದಲ್ಲಿ[೬] ಬುಳ್ಳಪ್ಪ ದೇಸಾಯಿ, ಸುಬ್ರಹ್ಮಣ್ಯಾಚಾರ್ಯರಿಗೆ ನೀಡಿದ ಭೂದಾನ ವಿವರಿಸುತ್ತದೆ ಹಾಗೂ ಮತ್ತೊಂದು ತೇದಿರಹಿತ ನೂಲಗೇರಿ ಶಾಸನದಲ್ಲಿ[೭] ಎಮ್ಮೆಯರ ರೇಚನು ಕೆಲವು ಬ್ರಾಹ್ಮಣ ಕುಟುಂಬಗಳನ್ನು ನಿವೇಶನಗೊಳಿಸಿದ ಉಲ್ಲೇಖ ಕಂಡುಬರುತ್ತದೆ. ರಟ್ಟಿಹಳ್ಳಿ ಶಾಸನದಲ್ಲಿ[೮] ಬ್ರಾಹ್ಮಣನೊಬ್ಬನಿಗೆ ನೀಡಿದ ದಾನದ ಉಲ್ಲೇಖವಿದೆ. ಕ್ರಿ.ಶ. ೧೩ನೇ ಶತಮಾನದ ಹಿರೇಕೆರೂರ ಶಾಸನದಲ್ಲಿ[೯] ಯುದ್ಧದಲ್ಲಿ ಬ್ರಾಹ್ಮಣನೊಬ್ಬನ ಮರಣದ ವಿಷಯವನ್ನು ತಿಳಿಸುತ್ತದೆ.

ಕ್ರಿ.ಶ. ೧೨೧೪ರ ರಾಣೆಬೆನ್ನೂರ ಚೌಡದಾನಪುರದ ಶಾಸನದಲ್ಲಿ[೧೦] ಅರಸು, ಪ್ರಧಾನಿ ಮಾಯಿದೇವರ ವಂಶಾವಳಿ ಮತ್ತು ಬ್ರಾಹ್ಮಣರಿಗೆ ನೀಡಿದ ಗ್ರಾಮಗಳ ದಾನದ ಬಗ್ಗೆ ಮಾಹಿತಿ ನೀಡುತ್ತದೆ. ಕ್ರಿ.ಶ. ೧೨೮೮ರ ಹಾವೇರಿ ತಾಲೂಕಿನ ಕಿತ್ತೂರು ಶಾಸನದಲ್ಲಿ[೧೧] ಮಹಾಮಂಡಳೇಶ್ವರ ಚಾವುಗೆ ದೇವರಾಣೆಯನಿಂದ ಕಲಿನಾಥ ಮೂಲಸ್ಥಾನ ಜಕ್ಕೇಶ್ವರ ದೇವಾಲಯದ ಬ್ರಾಹ್ಮಣರಿಗಾಗಿ ಬಾಚದೇವನಿಗೆ ಭೂದಾನ ನೀಡಿದ ಬಗ್ಗೆ ಮಾಹಿತಿ ಲಭ್ಯವಾಗಿದೆ. ಕ್ರಿ.ಶ. ೧೨೪೫ರ ಶಿಗ್ಗಾಂವ್ ತಾಲೂಕಿನ ಹುಲಗೂರ ಶಾಸನದಲ್ಲಿ[೧೨] ಕದಂಬ ಮಲ್ಲದೇವನ ರಾಣಿ ಪದ್ಮಲ ದೇವಿಯಿಂದ ಹುಲ್ಲುಂಗುರದಲ್ಲಿ ಬ್ರಹ್ಮಪುರಿ ನಿರ್ಮಾಣ ಹಾಗೂ ಬ್ರಾಹ್ಮಣರಿಗೆ ದಾನ ನೀಡಿದ ವಿವರವಿದೆ.

**ಕ್ಷತ್ರಿಯ:**

ಬ್ರಹ್ಮನ ತೋಳುಗಳಿಂದ ಜನಿಸಿದವರು ಕ್ಷತ್ರಿಯರು ಎಂದು ಪುರುಷ ಸೂಕ್ತದಲ್ಲಿ ಉಲ್ಲೇಖಗೊಂಡಿದೆ. ಅಂದರೆ ಇವರು ತೋಳುಬಲವುಳ್ಳವರು. ವರ್ಣವ್ಯವಸ್ಥೆಯ ೨ನೇ ಸ್ಥಾನದಲ್ಲಿ ಕಂಡುಬರುತ್ತಾರೆ. ಪ್ರಾಚೀನ ಕಾಲದಲ್ಲಿ ರಾಜನನ್ನು "ರಾಜಾ ಪ್ರತ್ಯಕ್ಷ ದೇವತಾ" ಎಂದು ತಿಳಿದು ಅಂದರೆ ರಾಜನು ಭೂಮಿಯ ಮೇಲೆ ಇರುವ ಪ್ರತ್ಯಕ್ಷ ದೇವರಂತೆ. ಶುಕ್ರನೀತಿ

ಸಾರದಲ್ಲಿ ವೀರನು, ಶೂರನು, ಚತುರನೂ, ಶಕ್ತಿವಂತನೂ, ವಿದ್ಯಾವಂತನೂ, ರಾಜನೀತಿ ತಿಳಿದವನು ರಾಜನಾಗಬೇಕೆಂದು ಹೇಳಿದೆ. ಹೀಗಾಗಿ ರಾಜನ ಅಧಿಕಾರವನ್ನು ನೇರವಾಗಿ ನಿರ್ವಹಿಸಲು ಕರ್ತವ್ಯದ ಜೊತೆಗೆ ತಮ್ಮ ಸಾಮ್ರಾಜ್ಯದ ಸುಧಾರಣೆ, ವಿಸ್ತರಣೆ, ನ್ಯಾಯ ಪರಿಪಾಲನೆ ಮಾಡುವುದು, ಪ್ರಜೆಗಳನ್ನು ರಕ್ಷಿಸುವುದು ಇವರ ಬಹುಮುಖ್ಯ ಕರ್ತವ್ಯಗಳೆನ್ನಿಸಿದ್ದವು. ಈ ಕರ್ತವ್ಯಗಳ ಜೊತೆಗೆ ಧಾರ್ಮಿಕವಾಗಿ, ಕ್ಷತ್ರಿಯರಿಗೆ, ಯಜ್ಞಯಾಗಾದಿಗಳನ್ನು ಮಾಡುವ ಮತ್ತು ವೇದಗಳನ್ನು ಓದುವ ಅಧಿಕಾರವಿತ್ತು. ಇಂದಿನ ರಾಜ್ಯದಲ್ಲಿ ಅನೇಕರು ಯಜ್ಞಗಳನ್ನು ಮಾಡುವುದರಲ್ಲಿ ಆಸಕ್ತಿ[೧೩]ಯನ್ನು ತೋರುತ್ತಿದ್ದರು. ಕ್ರಿ.ಶ.೧೦೭೯ರ ಬಾಳಂಬೀಡು ಶಾಸನದಲ್ಲಿ[೧೪] ವಿಕ್ರಮಾದಿತ್ಯನ ತಮ್ಮ ಜಯಸಿಂಹ ಬನವಾಸಿ ಭಾಗದ ಅಧಿಕಾರಿಯಾಗಿದ್ದಾಗ ಅವನನ್ನು ಹೆಸರಿಸುತ್ತಾ ವಹಿವಲ್ಲಭ ಯುವರಾಜ . . . . ಮಹೇಶ್ವರಂ ವಿಕ್ರಮಾಕನಂ, ಶರಣಾಗತ ರಕ್ಷಮಣಿ ಚಾಲಯಕ್ಯ ಚೂಡಾಮಣಿ ಕದನತ್ರಿಣೇತ್ರ ಕ್ಷತ್ರಿಯ ಪವಿತ್ರ ಮುಕ್ತಂಕರಾಜರಿ – ಸಹಜ ಮನೋಜಂ ರಿಪುರಾಯ ಕಟಕ ಸುರೇಕಾರ, ನಕಾಕರಂ ಎಂದು ಹೇಳಿದೆ. ಕ್ರಿ.ಶ. ೧೦೫೫ರ ಶಿಗ್ಗಾಂವ್ ತಾಲೂಕಿನ[೧೫] ಶಾಸನದಲ್ಲಿ ಮಹಾಮಂಡಳೇಶ್ವರ ಹರಿಕೇಸರಿದೇವ ಮತ್ತು ಸ್ಥಳದ ಸಂಘಗಳಿಂದ ಕದಂಬೇಶ್ವರ ದೇವಾಲಯಕ್ಕೆ ಪಳ್ಳವೂರ ಗ್ರಾಮದಾನ ಬಗ್ಗೆ ತಿಳಿಸುತ್ತದೆ. ಕ್ರಿ.ಶ. ೧೦೭೨ರ ಹಾನಗಲ್ಲು ತಾಲೂಕಿನ ಗುಡಗುಡಿ ಶಾಸನದಲ್ಲಿ[೧೬] ಬಂಕಾಪುರದ ಲೋಕಸೆಟ್ಟಿಯಿಂದ ಕಲಿದೇವರಿಗೆ ದಾನ ನೀಡಿದ ಬಗ್ಗೆ ವಿವರವಿದೆ. ಕ್ರಿ.ಶ. ೧೧೧೯ರ ಹಾನಗಲ್ಲು ತಾಲೂಕಿನ ಹಾವಣಗಿ ಶಾಸನದಲ್ಲಿ[೧೭] ಸಂಗಿವಂಶದ ಬಮ್ಮಿಸೆಟ್ಟಿ ಮಾಡಿಸಿದ ಆದಿತ್ಯ ವಿಗ್ರಹದ ಉಲ್ಲೇಖವಿದೆ. ತೇದಿರಹಿತ ಹಿರೆಬಾಸೂರ ಶಾಸನದಲ್ಲಿ[೧೮] ಬಾಸವೂರ ಮುತ್ತಿಗೆಯಲ್ಲಿ ಮಲ್ಲಿಸೆಟ್ಟಿಯ ವೀರಮರಣ ಬಗ್ಗೆ ಉಲ್ಲೇಖವಿದೆ. ಕ್ರಿ.ಶ. ೧೧೩೮ರ ಹಿರೇಕೆರೂರು ತಾಲೂಕಿನ ಮತ್ತೂರ ಶಾಸನದಲ್ಲಿ[೧೯] ಕಮ್ಮನವಳ್ಳಿಯ ಜಕಿಸೆಟ್ಟಿ ಮತ್ತೂರ ಮೇಲೆ ದಾಳಿಮಾಡಿದಾಗ ಕಮ್ಮಾರ ಮಾಚನ ವೀರಮರಣ. ಜಕ್ಕಿಗೌಡಾದಿಗಳಿಂದ ಆತನ ಅಣ್ಣನಿಗೆ ಭೂದಾನ ನೀಡಿದ ಬಗ್ಗೆ ಮಾಹಿತಿ ತಿಳಿದು ಬರುತ್ತದೆ.

ಕ್ರಿ.ಶ.೧೧೪೬ರ ಹಾನಗಲ್ಲು ತಾಲೂಕಿನ ಕಲಕೇರಿ ಶಾಸನದಲ್ಲಿ[೨೦&೨೧] ಸಿರಿವೊಳಲಲ್ಲಿ ಕಾಗಿನೆಲೆಯ ಪ್ರಜೆಗಳೊಂದಿಗೆ ಕಾದುವಾಗ ನಾಟ್ಟಭು ಕೇತಿಸೆಟ್ಟಿ ಮತ್ತು ಕಮ್ಮರ ಸಾಂತೋಜರ ವೀರಮರಣವನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೧೪೯–೬೮ರ ಹಿರೇಕೆರೂರ ತಾಲೂಕಿನ ಎಮ್ಮಿಗನೂರು ಶಾಸನದಲ್ಲಿ[೨೨] ನಾಗರಖಂಡ ಎಮ್ಮಗನೂರಿನಲ್ಲಿ ಕೇತಿಶೆಟ್ಟಿಯ ಮಗ ಕಾಮಗಾವುಂಡನಿಂದ ರಾಮೇಶ್ವರ ದೇವಾಲಯ ನಿರ್ಮಾಣ ಹಾಗೂ ದಾನ ನೀಡಿರುವುದು ದಾಖಲಿಸುತ್ತದೆ. ಕ್ರಿ.ಶ. ೧೧೧೯ ಎಮ್ಮಿಗನೂರಿನ ಮತ್ತೊಂದು ಶಾಸನದಲ್ಲಿ[೨೩] ಬಮ್ಮರಸ ಮತ್ತು ಬೀರರಸರು ಗಿಣ್ಣಲಗುಂಡಿಯ ಕೋಟೆಯ ಮೇಲೆ ದಾಳಿ ಮಾಡಿದಾಗ ಕೇತಮಲ್ಲಸೆಟ್ಟಿಯ ಮಗ ಮಸಣಸೆಟ್ಟಿಯ ವೀರಮರಣದ ಮಾಹಿತಿ ಲಭ್ಯವಾಗಿದೆ. ಕ್ರಿ.ಶ. ೧೧೬೬ರ ಹಿರೇಕೆರೂರು ಶಾಸನದಲ್ಲಿ[೨೪] ದಾಳಿಯಲ್ಲಿ ಕೋಣವತ್ತಿಯ ಕೇತಿಸೆಟ್ಟಿಯ ವೀರಮರಣವನ್ನು ಪ್ರಸ್ತಾಪಿಸಿದೆ

ಶಾಸನದಲ್ಲಿ. ಕ್ರಿ.ಶ. ೧೧೭೬ರ ಹಿರೇಕೆರೂರು ತಾಲೂಕಿನ ಎಮ್ಮಿಗನೂರ ಶಾಸನದಲ್ಲಿ[೨೫] ಕೋಣಂಗೇರಿಯ ಮಗ ಸೋವಿಸೆಟ್ಟಿಯು ಅಣ್ಣಿಗೆರೆಯ ಹೊಲದಲ್ಲಿ ಸುಲಿಗೆಗಾರನೊಡನೆ ಕಾದಿ ಮಾಡಿದ ಉಲ್ಲೇಖ ಕಂಡುಬರುತ್ತದೆ. ಕ್ರಿ.ಶ. ೧೧೮೯ರ ಸುತಕೋಟೆ ಶಾಸನದಲ್ಲಿ[೨೬] ನಾಟ್ಟಿಭು ಕಾಲಗಾವುಂಡ, ಕುಮಾರ ಬೆಳಗಾವುಂಡ ಮತ್ತು ವರ್ತಕಾದಿಗಳಿಂದ ಬಯಲಬಳ್ಳಿಗಾವೆಯ ಮೂಲಸ್ಥಾನ ಬಾಲೇಶ್ವರ ದೇವರಿಗೆ ಭೂದಾನ ನೀಡಿದ್ದನ್ನು ದಾಖಲಿಸಿದೆ. ಕ್ರಿ.ಶ. ೧೧೮೯ರ ಹಾನಗಲ್ಲು ತಾಲೂಕಿನ ಶಾಸನದಲ್ಲಿ[೨೭] ಪ್ರಮುಖ ವ್ಯಕ್ತಿ ಮತ್ತು ವ್ಯಾಪಾರಿ ಸಂಘಗಳ ಸಮ್ಮುಖದಲ್ಲಿ ಅಮರೇಶ್ವರ ದೇವರ ಕೃಪೆಯಿಂದ ಬೊಮ್ಮಗೌಡ, ಸಂಬೊಳದ ಗೌಡಿಕೆ ಪಡೆದ ಉಲ್ಲೇಖವಿದೆ. ಕ್ರಿ.ಶ. ೧೨೦೪ರ ಹಿರೇಕೆರೂರು ತಾಲೂಕಿನ ಸಾತೇನಹಳ್ಳಿ ಶಾಸನದಲ್ಲಿ[೨೮] ಕಾಮಿಸೆಟ್ಟಿಯ ಹೆಂಡತಿ ವೆಣ್ಣಲೆಸೆಟ್ಟಿ ಕವ್ವೆಯಿಂದ ನಾಗರಖಂಡ – ೭೦ರ ಸಾತೇನಹಳ್ಳಿಯಲ್ಲಿ ಹರಿಹರೇಶ್ವರ ದೇವಾಲಯ ನಿರ್ಮಾಣ ಮತ್ತು ದಾನ ನೀಡಿದ ವಿವರವಿದೆ.

ಕ್ರಿ.ಶ. ೧೨೦೭ರ ಹಾನಗಲ್ಲು ತಾಲೂಕಿನ ಕಲಕೇರಿ ಶಾಸನದಲ್ಲಿ[೨೯] ಕಲುಕೆರೆಯ ನಾಟ್ಟಿಭು ಹರಿಯಮಸೆಟ್ಟಿಯು ಮೂರುಜಾವಿ ದೇವರ ಪಾದ ತೊಳೆದು ಸ್ವಯಂಭೂ ಸೋಮನಾಥ ದೇವಾಲಯಕ್ಕೆ ಬಿಟ್ಟ ಭೂದಾನವನ್ನು ಉಲ್ಲೇಖಿಸಿದೆ. ಕ್ರಿ.ಶ. ೧೨೨೪ರ ಶಿಗ್ಗಾವಿ ತಾಲೂಕಿನ ಚಿಕ್ಕಮಲ್ಲೂರ ಶಾಸನದಲ್ಲಿ[೩೦] ಹೊನ್ನಬೊಮ್ಮಿಸೆಟ್ಟಿಯಿಂದ ಧವಳೇಶ್ವರ ದೇವಾಲಯಕ್ಕೆ ಎಳಬಳ್ಳಿ ಗ್ರಾಮದಾನ ನೀಡಿದ ವಿಷಯವನ್ನು ತಿಳಿಸುತ್ತದೆ. ಕ್ರಿ.ಶ. ೧೨೩೭ರ ಹಿರೇಕೆರೂರ ತಾಲೂಕಿನ ರಟ್ಟಿಹಳ್ಳಿ ಶಾಸನದಲ್ಲಿ[೩೧] ಕರಣದ ಕಲ್ಲರಸ ಮತ್ತು ಹಲವು ವ್ಯಾಪಾರಸ್ಥರು ಮಲ್ಲಿನಾಥ ದೇವಾಲಯಕ್ಕಾಗಿ ಮೂರುಜಾವಿ ದೇವರಿಗೆ ಬಿಟ್ಟ ದಾನದ ವಿವರವಿದೆ. ಕ್ರಿ.ಶ. ೧೨೩೮ರ ರಟ್ಟಿಹಳ್ಳಿಯ ಮತ್ತೊಂದು ಶಾಸನದಲ್ಲಿ[೩೨] ರಾಮಸೆಟ್ಟಿ ಬಿರುದಿನ ಗುಬ್ಬಿಯ ಕಲ್ಲೆಯನಿಂದ ಕದಂಬೇಶ್ವರ ದೇವಾಲಯ ಸ್ಥಾನಾಚಾರ್ಯ ಮೂರುಜಾವಿ ದೇವರಿಗೆ ಸುಂಕದಾನ ನೀಡಿರುವ ಬಗ್ಗೆ ಉಲ್ಲೇಖವಿದೆ ಹಾಗೂ ಕ್ರಿ.ಶ. ೧೨೩೮ರ ರಟ್ಟಿಹಳ್ಳಿ ಶಾಸನದಲ್ಲಿ[೩೩] ಹೊನ್ನಬಮ್ಮಿಸೆಟ್ಟಿಯರು ಮಲ್ಲೇಶ್ವರ, ರಾಜೇಶ್ವರ ದೇವರಿಗಾಗಿ ಸ್ಥಾನಚಾರ್ಯ ರಾಜಗುರು ಮೂರುಜಾವಿದೇವರಿಗೆ ನೀಡಿದ ದಾನವನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೨೩೮ರ ಬ್ಯಾಡಗಿ ತಾಲೂಕಿನ ಹಿರೆಅಣಜಿ ಶಾಸನದಲ್ಲಿ[೩೪] ದೇವಂಗೇರಿ – ೧೪೦ರಲ್ಲಿಯ ಗೊಟ್ಟಗಡಿಯ ಗೋಗ್ರಹಣದಲ್ಲಿ ಗೊಗ್ಗಿಸೆಟ್ಟಿಯ ವೀರಮರಣ ತಿಳಿಯುತ್ತದೆ. ಕ್ರಿ.ಶ. ೧೨೪೧ರ ಹಿರೇಕೆರೂರು ತಾಲೂಕಿನ ಸಾತೇನಹಳ್ಳಿ ಶಾಸನದಲ್ಲಿ[೩೫] ನಾಗರಖಂಡದ ನಾಟ್ಟಿಭು ಬೊಮ್ಮಿಸೆಟ್ಟಿಯಿಂದ ಶಂಕರನಾರಾಯಣದೇವರ ಪ್ರತಿಷ್ಠಾಪನೆ ಮತ್ತು ದಾನವನ್ನು ವಿವರಿಸುತ್ತದೆ. ಕ್ರಿ.ಶ. ೧೨೫೨ರ ಹಾವೇರಿ ತಾಲೂಕಿನ ಕಬ್ಬೂರ ಶಾಸನದಲ್ಲಿ[೩೬] ಹರಿಪಾಲದೇವ ಮತ್ತು ಹಾವರಿಯ ಮಹಾಜನರಿಂದ ಸೇನಭೋವ ಲಕ್ಕಿಸೆಟ್ಟಿಯು ಕಬ್ಬೂರಿನ ಹೆಗ್ಗಡೆತನವನ್ನು ಪಡೆದ ಉಲ್ಲೇಖ ತಿಳಿಯುತ್ತದೆ. ಕ್ರಿ.ಶ. ೧೨೬೧ರ ರಾಣೆಬೆನ್ನೂರ ತಾಲೂಕಿನ ಕರೂರ ಶಾಸನದಲ್ಲಿ[೩೭] ಮಹಾಪ್ರಧಾನ ವೀರಶೆಟ್ಟಿಯಿಂದ ಕಲಿದೇವ, ವಿಘ್ನೇಶ್ವರ ಕ್ಷೇತ್ರಪಾಳ ಹಾಗೂ ನಾರಾಯಣ ದೇವಾಲಯಗಳಿಗೆ ಭೂದಾನ ನೀಡಿದ್ದನ್ನು ದಾಖಲಿಸುತ್ತದೆ.

ಕ್ರಿ.ಶ. ೧೨೮೩ರ ಹಿರೇಕೆರೂರ ತಾಲೂಕಿನ ಸುತಕೋಟಿ ಶಾಸನದಲ್ಲಿ[೩೮] ಬಯಲು ಬಳ್ಳಿಗಾವೆಯ ಬೋಗಾರ ಕತ್ತಿಯ ಬೊಮ್ಮೆಸೆಟ್ಟಿಯ ಮಗ ದೇವಿಸೆಟ್ಟಿಯ ಮರಣದ ಬಗ್ಗೆ ಮಾಹಿತಿ ಲಭ್ಯವಾಗಿದೆ. ಕ್ರಿ.ಶ. ೧೨ನೇ ಶತಮಾನದ ಬಾಳೆಹಳ್ಳಿ ಶಾಸನದಲ್ಲಿ[೩೯] ಬಮ್ಮಿಸೆಟ್ಟಿ ಬಾಳೆಹಳ್ಳಿಯಲ್ಲಿ ಪಾರ್ಶ್ವನಾಥ ಬಸದಿಯನ್ನು ಕಟ್ಟಿಸಿ ಮಲಧಾರಿ ದೇವನಿಗೆ ಬಿಟ್ಟ ದತ್ತಿಯನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೨ನೇ ಶತಮಾನದ ಹಾನಗಲ್ಲು ತಾಲೂಕಿನ ಬೆಳಗಾಲಪೇಟೆ ಶಾಸನದಲ್ಲಿ[೪೦] ಕೊಂಡಸಮುಮನೆತನದ ಮಲ್ಲಸೆಟ್ಟಿ ಸ್ಥಾಪಿಸಿದ ಶಿವಲಿಂಗಕ್ಕೆ ಬೆಳಗಾಲಿಯ ಸಾಸಿರ್ವರು ನೀಡಿದ ದಾನದ ಬಗ್ಗೆ ವಿವರವಿದೆ. ಕ್ರಿ.ಶ. ೧೧-೧೨ನೇ ಶತಮಾನದ ಬೆಳವತ್ತಿ ಶಾಸನದಲ್ಲಿ[೪೧] ಸವಣೂರ ಬಮ್ಮಿಸೆಟ್ಟಿಯಿಂದ ಬೆಳವಂತಿ ಗ್ರಾಮದಲ್ಲಿ ಬ್ರಹ್ಮಜಿನಾಲಯದ ನಿರ್ಮಾಣ ಹಾಗೂ ದಾನದ ವಿಷಯ ತಿಳಿದು ಬರುತ್ತದೆ. ಕ್ರಿ.ಶ. ೧೧-೧೨ನೇ ಶತಮಾನದ ಮಂತಗಿ ಶಾಸನದಲ್ಲಿ[೪೨] ಹಾನಗಲ್ಲಿನ ಕಲಿದೇವಸೆಟ್ಟಿ ಚತುರ್ವಿಂಶತೀರ್ಥಂಕರರನ್ನು ಸ್ಥಾಪಿಸಿ, ನಾಗಚಂದ್ರಭಟ್ಟಾರಕರಿಗೆ ನೀಡಿದ ದಾನದ ಪ್ರಸ್ತಾಪವಿದೆ. ಕ್ರಿ.ಶ. ೧೧-೧೨ನೇ ಶತಮಾನದ ಶೇಷಗಿರಿ ಶಾಸನದಲ್ಲಿ[೪೩] ಸಿಂಗರಸನು ಹಾನಗಲ್ಲು – ೫೦೦ ಆಳುವಾಗ ಮಂತಿಸೆಟ್ಟಿ, ಮಾಚಿಕಟ್ಟೆ ಮತ್ತು ಅಸಗಕಬ್ಬೆಯರು ಹತ್ತಿಗುಂದದಲ್ಲಿ ರೇವೇಶ್ವರ ಲಿಂಗವನ್ನು ಸ್ಥಾಪಿಸಿ ಗೊಮ್ಮಟಾಚಾರ್ಯನಿಗೆ ನೀಡಿದ ದತ್ತಿಯನ್ನು ತಿಳಿಸುತ್ತದೆ. ಹಾನಗಲ್ಲು ತಾಲೂಕಿನ ಶಾಸನದಲ್ಲಿ[೪೪] ಕ್ರಿ.ಶ. ಸುಮಾರು ೧೨ನೇ ಶತಮಾನದಲ್ಲಿ ತಮಿಳು ವರ್ತಕರ ಓಣಿಯ ಸೀಮಾದ ಉಲ್ಲೇಖವಿದೆ. ಕ್ರಿ.ಶ. ೧೨ನೇ ಶತಮಾನದ ಕುಂಚೂರ ಶಾಸನದಲ್ಲಿ[೪೫] ಜೋಗಿಸೆಟ್ಟಿಯ ಮಗ ಬೊಮಯನಿಂದ ವಿಗ್ರಹ ಪ್ರತಿಷ್ಠಾಪನೆ ತಿಳಿಸುತ್ತದೆ. ಕ್ರಿ.ಶ. ೧೨ನೇ ಶತಮಾನದ ಚಿನ್ನಮುಳಗುಂದ ಶಾಸನದಲ್ಲಿ[೪೬] ಭವಸೇನ ದೇವನ ಶಿಷ್ಯ ಹಾಗೂ ಬೆಳಿಸೆಟ್ಟಿಯ ಹೆಂಡತಿ ಸೋಮಬ್ಬೆಯ ಮರಣವನ್ನು ಉಲ್ಲೇಖಿಸಿದೆ. ಕ್ರಿ.ಶ. ತೇದಿರಹಿತ ದೊಡ್ಡಗುಬ್ಬಿ ಶಾಸನದಲ್ಲಿ[೪೭] ರಟ್ಟಿಹಳ್ಳಿಯ ಜನಾರ್ಧನಾಚಾರ್ಯನ ಮೊಮ್ಮಗ ವೆಂಕಟೇಶನ ಹೊಲದ ಉಲ್ಲೇಖ ಕಂಡುಬರುತ್ತದೆ.

ಕ್ರಿ.ಶ. ಹಾನಗಲ್ಲು ತಾಲೂಕಿನ ಕರಗುದರಿಯ ತೇದಿರಹಿತ ಶಾಸನದಲ್ಲಿ[೪೮] ಮಹಾವಡ್ಡ ವ್ಯವಹಾರಿ ಕಲ್ಲಿಸೆಟ್ಟಿ ಕರೆಗುದುರೆಯಲ್ಲಿ ವಿಜಯಪಾರ್ಶ್ವಜಿನೇಂದ್ರ ಬಸದಿಯನ್ನು ಕಟ್ಟಿಸಿ ನೀಡಿದ ದಾನದ ವಿವರವಿದೆ. ಹಾವೇರಿ ತಾಲೂಕಿನ ಕಬ್ಬೂರ ಗ್ರಾಮದ ತೇದಿರಹಿತ ಶಾಸನದಲ್ಲಿ[೪೯] ಮಹಾಮಂಡಳೇಶ್ವರ ಹರಿಪಾಲದೇವ ಹಾಗೂ ಹಾವೇರಿಯ ೪೦೦ ಮಹಾಜನರಿಂದ ಲಕ್ಕಿಸೆಟ್ಟಿಯ ಮಗಳಾದ ವಚ್ಚಂಬಾರ್ಯೆಗೆ ಭೂದಾನ ನೀಡಿದ ವಿವರವಿದೆ. ಕ್ರಿ.ಶ. ೧೨ನೇ ಶತಮಾನದ ಹಿರೆಬೆಂಡಿಗೇರಿ ಶಾಸನದಲ್ಲಿ[೫೦] ಗೊರವಬ್ಬೆಯ ಚಟ್ಟಸೆಟ್ಟಿ ಸ್ವಯಂಭೂ ದೇವರಿಗೆ ನಾಟ್ಯಶಾಲೆ ಕಟ್ಟಿಸಿದ ಉಲ್ಲೇಖ ಕಂಡುಬರುತ್ತದೆ. ಕ್ರಿ.ಶ. ೧೩ನೇ ಶತಮಾನ ಕಲಕೇರಿ ಶಾಸನದಲ್ಲಿ[೫೧] ನಾಟ್ಪ್ರಭು ಹರಿಮಮಸೆಟ್ಟಿಯು ಶಿವರಾತ್ರಿಯಂದು ಮೂರುಜಾವಿ ದೇವರಿಗೆ ನೀಡಿದ ಭೂದಾನದ ಬಗ್ಗೆ ತಿಳಿಯುತ್ತದೆ. ಕ್ರಿ.ಶ. ೧೫೦೭ರ ಬ್ಯಾಡಗಿ ತಾಲೂಕಿನ ಕೆರವಡಿ

ಶಾಸನದಲ್ಲಿ[೫೨] ಗಾಣಿಗರ ಮಲ್ಲಸೆಟ್ಟಿಯಿಂದ ತಿಪ್ಪಲಾಪುರದಲ್ಲಿ ಭೂದಾನ ನೀಡಿದ ಬಗ್ಗೆ ಮಾಹಿತಿ ಲಭ್ಯವಾಗಿದೆ.

### ವೈಶ್ಯರು:

ಸಮಾಜದ ಆರ್ಥಿಕ ವಿಕಸನ ಮತ್ತು ಪರಿಸ್ಥಿತಿಯು ಮುಖ್ಯ ಅಂಗವಾಗಿದ್ದರೆ ಇವರು ಸಾಮಾಜಿಕ ಜಾತಿವ್ಯವಸ್ಥೆಯ ಸ್ಥರವಿನ್ಯಾಸದಲ್ಲಿ ಮೂರನೇ ವರ್ಣದವರಾಗಿದ್ದು ವ್ಯಾಪಾರ ಮಾಡುವುದೇ ಇವರ ಮೂಲ ಕಸುಬು ಆಗಿತ್ತು. "ಕಮ್ಮಾರರು, ಅಕ್ಕಸಾಲಿಗರು, ಬಡಗಿಗಳು, ಕಂಚುಕಾರರು, ವಣಿಕ, ವ್ಯಾಪಾರ ವರ್ತಕ ಎಂಬ ಹೆಸರುಗಳಿಂದ ಇವರುಗಳನ್ನು ಕರೆಯಲಾಗುತ್ತಿತ್ತು"[೫೩]

ಹೀಗಿರುವಾಗ ಹಾವೇರಿ ಜಿಲ್ಲೆಯ ಶಾಸನಗಳಲ್ಲಿ ಕ್ರಿ.ಶ. ೧೦೮೧–೮೨ರ ಚಿಕ್ಕೆರೂರ ಶಾಸನದಲ್ಲಿ[೫೪] ಬಿಪ್ಪೇಶ್ವರ ದೇವರ ಪ್ರತಿಷ್ಠೆ ಮಾಡಲು ದೇವಚಿಕ್ಕೆರೂರ ಅಗ್ರಹಾರದಲ್ಲಿ ೫೦೦ ಜನ ಮಹಾಜನಗಳ ಮುಂದೆ ತೇಲುಂಗ ವಂಶ ಬಿಯಪಸೆಟ್ಟಿಯಿಂದ ಭೂಮಿಯನ್ನು ದಾನ ಮಾಡಿದ ವಿಷಯವಿದೆ. ಅಲ್ಲದೆ ದೇವರ ನೈವೇದ್ಯ ಪೂಜೆ, ಎಣ್ಣೆ ಮೊದಲಾದ ಕಾರ್ಯಗಳಿಗೆ ಹಲವಾರು ದಾನದತ್ತಿಗಳನ್ನು ನೀಡಿದರೆಂದು ತಿಳಿದುಬರುತ್ತದೆ. ಕ್ರಿ.ಶ. ೧೧೦೮ರ ಶಿಗ್ಗಾಂವಿ ತಾಲೂಕಿನ ಶಾಸನದಲ್ಲಿ[೫೫] ಉತ್ತವಸೆಟ್ಟಿ ಮತ್ತು ಮಲ್ಲಿಸೆಟ್ಟಿಯಾದಿಗಳಿಂದ ಮೂಲಸ್ಥಾನ ದೇವರಿಗೆ ಹಣದಾನ ನೀಡಿದ ಬಗ್ಗೆ ವಿವರವಿದೆ. ಕ್ರಿ.ಶ. ೧೧೨೩ರ ಬ್ಯಾಡಗಿ ತಾಲೂಕಿನ ಕಾಗಿನೆಲೆ ಶಾಸನದಲ್ಲಿ[೫೬] ಕಾಗಿನೆಲೆಯ ಕಾಳಿಸೆಟ್ಟಿ ಕಟ್ಟಿಸಿದ ಬ್ರಹ್ಮೇಶ್ವರ ದೇವಾಲಯಕ್ಕೆ ಮಹಾಪ್ರಭು ಕಾಳಗಾವುಂಡಾದಿಗಳಿಂದ ಭೂದಾನ ನೀಡಿದ ಉಲ್ಲೇಖವಿದೆ.

ಕ್ರಿ.ಶ. ೧೧೬೬ರ ಹಿರೇಕೆರೂರ ಶಾಸನದಲ್ಲಿ[೫೭] ದಾಳಿಯಲ್ಲಿ ಕೋಣವತ್ತಿಯ ಕೇತಿಸೆಟ್ಟಿಯ ವೀರಮರಣವನ್ನು ಪ್ರಸ್ತಾಪಿಸಿದೆ. ಕ್ರಿ.ಶ. ೧೧೮೯ರ ಸುತಕೋಟಿ ಶಾಸನದಲ್ಲಿ[೫೮] ನಾಡಪ್ರಭು ಕಾಲಗಾವುಂಡ, ಕುಮಾರ ಬಾಳಗಾವುಂಡ ಮತ್ತು ವರ್ತಕಾದಿಗಳಿಂದ ಬಯಲಬಳ್ಳಿಗಾವೆಯ ಮೂಲಸ್ಥಾನ ಬಾಲೇಶ್ವರ ದೇವರಿಗೆ ಭೂದಾನ ನೀಡಿದ್ದನ್ನು ದಾಖಲಿಸಿದೆ. ಕ್ರಿ.ಶ. ೧೧೮೯ರ ಹಾನಗಲ್ಲು ತಾಲೂಕಿನ ಶಾಸನದಲ್ಲಿ[೫೯] ಪ್ರಮುಖ ವ್ಯಕ್ತಿ ಮತ್ತು ವ್ಯಾಪಾರಿ ಸಂಘಗಳ ಸಮ್ಮುಖದಲ್ಲಿ ಅಮರೇಶ್ವರ ದೇವರ ಕೃಪೆಯಿಂದ ಬೊಮ್ಮಗೌಡ ಸೆಂಬೋಳದ ಗೌಡಿಕೆ ಪಡೆದ ಉಲ್ಲೇಖವಿದೆ. ಕ್ರಿ.ಶ. ೧೨೩೭ ಹಿರೇಕೆರೂರ ತಾಲೂಕಿನ ರಟ್ಟಿಹಳ್ಳಿ ಶಾಸನದಲ್ಲಿ[೬೦] ಕರಣದ ಕಲ್ಲರಸ ಮತ್ತು ಹಲವು ವ್ಯಾಪಾರಸ್ಥರು ಮಲ್ಲಿನಾಥ ದೇವಾಲಯಕ್ಕಾಗಿ ಮೂರುಜಾವಿ ದೇವರಿಗೆ ಬಿಟ್ಟ ದಾನವನ್ನು ತಿಳಿಯುತ್ತದೆ. ಕ್ರಿ.ಶ. ೧೨೩೮ರ ಮತ್ತೊಂದು ರಟ್ಟಿಹಳ್ಳಿ ಶಾಸನದಲ್ಲಿ[೬೧] ರಾಯಸೆಟ್ಟಿ ಬಿರುದಿನ ಗುಬ್ಬಿಯ ಕಲ್ಲೆಯನಿಂದ ಕದಂಬೇಶ್ವರ ದೇವಾಲಯಕ್ಕೆ ಸ್ಥಾನಾಚಾರ್ಯ ಮೂರುಜಾವಿ ದೇವರಿಗೆ ಸುಂಕದಾನ ನೀಡಿದ ಬಗ್ಗೆ ವಿವರವಿದೆ. ಕ್ರಿ.ಶ.೧೨೩೮ರ ರಟ್ಟಿಹಳ್ಳಿ ಶಾಸನದಲ್ಲಿ[೬೨] ಹೊನ್ನಬಮ್ಮಿಸೆಟ್ಟಿಯರು ಮಲ್ಲೇಶ್ವರ ರಾಜೇಶ್ವರ ದೇವರಿಗಾಗಿ ಸ್ಥಾನಾಚಾರ್ಯ

ರಾಜಗುರು ಮೂರುಜಾವಿ ದೇವರಿಗೆ ನೀಡಿದ ದಾನವನ್ನು ಉಲ್ಲೇಖಿಸಿದೆ. ಕ್ರಿ.ಶ.೧೨೩೮ರ ಬ್ಯಾಡಗಿ ತಾಲೂಕಿನ ಹಿರೆಅಣಜಿ ಶಾಸನದಲ್ಲಿ[೬೩] ದೇವಗೇರಿ – ೧೪೦ರಲ್ಲಿಯ ಗೊಟ್ಟಗಡಿಯ ಗೋಗ್ರಹಣದಲ್ಲಿ ಗೊಣ್ಣಿಸೆಟ್ಟಿಯ ವೀರಮರಣ ಹೊಂದಿದ ಬಗ್ಗೆ ಮಾಹಿತಿ ತಿಳಿಯುತ್ತದೆ. ಕ್ರಿ.ಶ. ೧೨೩೮ರ ಹಿರೇಕೆರೂರ ತಾಲೂಕಿನ ಸುತಕೋಟಿ ಶಾಸನದಲ್ಲಿ[೬೪] ಬಯಲ ಬಳ್ಳಿಗಾವೆಯ ಬೋಗಾರ ಕತ್ತಿಯ ಬೊಮ್ಮಿಸೆಟ್ಟಿಯ ಮಗ ದೇವಿಸೆಟ್ಟಿಯ ಮರಣದ ಬಗ್ಗೆ ಮಾಹಿತಿ ಲಭ್ಯವಾಗಿದೆ. ಕ್ರಿ.ಶ. ೧೨ನೇ ಶತಮಾನದ ಬಾಳೆಹಳ್ಳಿ ಶಾಸನದಲ್ಲಿ[೬೫] ಬಮ್ಮಿಸೆಟ್ಟಿ ಬಾಳೆಹಳ್ಳಿಯಲ್ಲಿ ಪಾರ್ಶ್ವನಾಥ ಬಸದಿಯನ್ನು ಕಟ್ಟಿಸಿ ಮಲಧಾರಿ ದೇವನಿಗೆ ಬಿಟ್ಟ ದತ್ತಿ ದೊರೆಯುತ್ತದೆ.

## ಶೂದ್ರರು:

ಶಾಸನಗಳಲ್ಲಿ ಚತುರ್ಥಕುಲದವರೆಂದು ಹೇಳಿಕೊಳ್ಳುವ ಉಲ್ಲೇಖವೇ ಶೂದ್ರರು. ಸಾಮಾನ್ಯವಾಗಿ ಶಾಸನಗಳು ನೇರವಾಗಿ ಶೂದ್ರ ಎಂಬ ಉಲ್ಲೇಖಗಳನ್ನು ನೀಡುವುದಿಲ್ಲ. ಅಂತಹ ದಾಖಲೆಗಳು ವಿಕ್ರಮಾದಿತ್ಯನ ಕಾಲಕ್ಕೆ ಪೂರಕವಾದಂತೆ ಶಾಸನೋಕ್ತವಾಗಿ ಕಂಡುಬಂದಿಲ್ಲ. ಆದರೆ ಸಮಕಾಲೀನ ಹೊಯ್ಸಳ ಶಾಸನಗಳಲ್ಲಿ ಹಾಗೂ ನಂತರದ ಕಾಲದ ಶಾಸನಗಳಲ್ಲಿ ಇವರನ್ನು ಚತುರ್ಥ ಶಾಖೆಯವರೆಂದು ಹೆಸರಿಸಿವೆ.

ಕ್ರಿ.ಶ. ೧೧–೧೨ ನೇ ಶತಮಾನದ ಶೇಷಗಿರಿ ಶಾಸನದಲ್ಲಿ[೬೬] ಸಿಂಗರಸನು ಹಾನಗಲ್ಲು – ೫೦೦ ಆಳುವಾಗ ಮಾತಿಸೆಟ್ಟಿ, ಮಾಚಿಕಬ್ಬೆ ಮತ್ತು ಅಸಗಿಕಬ್ಬೆಯರು ಹತ್ತಿಗುಂದದಲ್ಲಿ ರೇವೇಶ್ವರ ಲಿಂಗವನ್ನು ಗೊಮ್ಮಟಾಚಾರ್ಯನಿಗೆ ನೀಡಿದ ದತ್ತಿಯನ್ನು ತಿಳಿಸುತ್ತದೆ. ಕ್ರಿ.ಶ. ಸುಮಾರು ೧೨ನೇ ಶತಮಾನದಲ್ಲಿ ಹಾನಗಲ್ಲು ತಾಲೂಕಿನ ಶಾಸನದಲ್ಲಿ[೬೭] ತಮಿಳು ವರ್ತಕರ ಓಣಿಯ ಸೀಮಾದ ಉಲ್ಲೇಖವಿದೆ. ತೇದಿರಹಿತ ದೊಡ್ಡಗುಬ್ಬಿ ಶಾಸನದಲ್ಲಿ[೬೮] ರಟ್ಟಿಹಳ್ಳಿಯ ಜನಾರ್ಧನಾಚಾರ್ಯನ ಮೊಮ್ಮಗ ವೆಂಕಟೇಶನ ಹೊಲದ ಉಲ್ಲೇಖ ಕಂಡುಬರುತ್ತದೆ. ಹಾನಗಲ್ಲು ತಾಲೂಕಿನ ತೇದಿರಹಿತಶಾಸನದಲ್ಲಿ[೬೯] ಮಹಾವಡ್ಡ ವ್ಯವಹಾರಿ ಕಲ್ಲಸೆಟ್ಟಿ ಕರಗುದುರೆಯಲ್ಲಿ ವಿಜಯ ಪಾರ್ಶ್ವಜಿನೇಂದ್ರ ಬಸದಿಯನ್ನು ಕಟ್ಟಿಸಿ ದಾನ ನೀಡಿದ ವಿವರಿಸುತ್ತದೆ. ತೇದಿ ರಹಿತ ಹಾವೇರಿ ತಾಲೂಕಿನ ಕಬ್ಬೂರ ಶಾಸನದಲ್ಲಿ[೭೦] ಮಹಾಮಂಡಳೇಶ್ವರ ಹರಿಪಾಲದೇವ ಹಾಗೂ ಹಾವೇರಿಯ ೪೦೦ ಮಹಾಜನರಿಂದ ಲಕ್ಕಿಸೆಟ್ಟಿಯ ಮಗಳಾದ ವಚ್ಛಂಬಾರ್ಯಗೆ ಭೂದಾನ ನೀಡಿದ ವಿವರವಿದೆ. ಕ್ರಿ.ಶ. ೧೨ನೇ ಶತಮಾನದ ಕಲಕೇರಿ ಶಾಸನದಲ್ಲಿ[೭೧] ನಾಟ್ಪ್ರಭು ಹರಿಯಮಸೆಟ್ಟಿಯು ಶಿವರಾತ್ರಿಯಂದು ಮೂರುಜಾವಿದೇವರಿಗೆ ನೀಡಿದ ಭೂದಾನ ಬಗ್ಗೆ ತಿಳಿಸುತ್ತದೆ.

## ಸ್ತ್ರೀಯರ ಸ್ಥಾನಮಾನ:

ಪ್ರಾಚೀನ ಕಾಲದಿಂದ ಹಿಡಿದು ಪ್ರಸ್ತುತದವರೆಗೂ ಅನೇಕ ಏಳು–ಬೀಳುಗಳನ್ನು ಅನುಭವಿಸುತ್ತಾ ಬಂದಿದೆ. ಅಂದರೆ ಭಾರತದಲ್ಲಿ ಮಹಿಳೆಯರ ಸ್ಥಾನಮಾನಕ್ಕೆ ನಡೆಯುತ್ತಿದ್ದ

ಮಾತೃದೇವ ಪೂಜೆ ಹಾಗೂ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಜಾರಿಯಲ್ಲಿದ್ದ ಸಿಂಧೂನದಿ ತೀರದ ಸಂಸ್ಕೃತಿಯಲ್ಲೂ, ವೇದಗಳ ಕಾಲದಲ್ಲಿಯೂ, ಮಹಿಳೆಯರ ಸ್ಥಾನಮಾನಗಳು ಊರ್ಜಿತವಾಗಿಯೇ ಇದ್ದವು. ಹಾಗೆಯೇ ಪುರುಷರ ಜೊತೆಯಲ್ಲಿ ಸರಿಸಮಾನವಾಗಿ ಜೀವಿಸುತ್ತಿದ್ದರು.[೨] ಸ್ತ್ರೀಯರ ವಿದ್ಯಾಭ್ಯಾಸಕ್ಕೆ ಅರ್ಹರಾಗಿದ್ದರು. ಋಗ್ವೇದ ಮಂತ್ರದ ದೃಷ್ಟಾರ ಪಟ್ಟಿಯಲ್ಲಿ ಹಲವು ಮಂದಿ ಸ್ತ್ರೀ ದೃಷ್ಟಾರ ಪಟ್ಟಿಯಲ್ಲಿ ಕಂಡುಬರುತ್ತವೆ. (ದೃಷ್ಟ ಮಂತ್ರಗಳನ್ನು ರಚಿಸಿದವರು) ಉದಾ – ಲೋಪಮುದ್ರ, ವಿಶ್ವವರಾ, ನಿಗಾರ್ಗಿ ಮತ್ತು ಘೋಷ ಎಂಬುವವರು ಕ್ರಮವಾಗಿ ೧೭೯, ೨೮, ೯೧, ೮೧, ೧೦–೨೦ ಮತ್ತು ೩೯–೪೦) ಈ ಮಂತ್ರಗಳನ್ನು ರಚಿಸಿದವರೆಂದು ಪ್ರತೀತಿ ಇದೆ[೩]. ಹೀಗೆ ಸ್ತ್ರೀಯು ಒಂದು ಬಲವಾದ ಕಾಲಕ್ಕೆ ಅನುಗುಣವಾಗಿ ಸಾಮಾಜಿಕ ವ್ಯವಸ್ಥೆಯ ಹಲವಾರು ಕಾರ್ಯಗಳಲ್ಲಿ ಭಾಗಿಯಾಗಿ ತನ್ನತನವನ್ನು ಮೆರೆದಿದ್ದಾಳೆ. ರಾಜಕೀಯ, ಸಾಮಾಜಿಕ, ಧಾರ್ಮಿಕ, ವಿವಾಹ, ದಾನ–ಧರ್ಮಗಳಲ್ಲಿ ಪುರುಷ ಸರಿಸಮಾನವಾಗಿ ಸಾಮಾಜಿಕ ಕಾರ್ಯಗಳನ್ನು ಮಾಡಿದಂತೆ ತಿಳಿದು ಬರುತ್ತದೆ. ಇದಕ್ಕೆ ದೊರೆತಿರುವ ಶಾಸನಗಳೇ ಆಧಾರಗಳು ಎನಿಸಿವೆ. ಪ್ರಾಚೀನ ಕಾಲದಲ್ಲಿ ಭಾರತದ ಮಹಿಳೆಯರಿಗೆ ಅತ್ಯುತ್ತಮ ಸ್ಥಾನಮಾನಗಳು ದೊರೆತಿರುವುದನ್ನು ಕಾಣಬಹುದು. ಭಾರತೀಯ ಸಮಾಜ ಪುರಷ ಪ್ರಧಾನವಾದದ್ದು ಎಂದು ಒಂದು ಕಡೆ ಆರೋಪ ಬರುತ್ತಿವೆ. ಇದಕ್ಕೆ ಪೂರಕವಾಗಿ ಇಲ್ಲಿನ ಶಾಸನಗಳನ್ನು ಅಧ್ಯಯನ ಮಾಡಿದಾಗ ಅಂದಿನ ಮಹಿಳೆಯರ ಸ್ಥಾನಮಾನಗಳು ಉತ್ತಮವಾಗಿರುವುದನ್ನು ಗಮನಿಸಬಹುದು. ಮಹಿಳೆಯರು ಮಮತಾಮಯಿ, ದಯಾಮಯಿಯಾದ ತಾಯಿ, ನಿಸ್ವಾರ್ಥಳಾಗಿ ಕುಟುಂಬದ ಏಳಿಗೆಗಾಗಿ ದುಡಿಯುತ್ತಿದ್ದರಿಂದಲೇ ಆಕೆಯನ್ನು ದೇವತೆ ಎನ್ನಲಾಗಿದೆ. ಇದರ ಹಿನ್ನೆಲೆಯಲ್ಲಿ ಈಕೆಯನ್ನು ಭೂಮಿ, ಜಲ, ಪ್ರಕೃತಿ, ಶಕ್ತಿ ಮುಂತಾದವುಗಳಿಗೆ ಹೋಲಿಕೆ ಮಾಡಿದ್ದಾರೆ. ಹಾಗೆಯೇ ಭಾರತದಲ್ಲಿ ಪರಂಪರೆ ಪ್ರಪ್ರಥಮವಾಗಿ 'ಮಾತೃ ದೇವೋ ಭವ' ಎಂದು ಗೌರವಿಸುತ್ತದೆ. ಅಲ್ಲದೆ ಆಕೆ 'ಯತ್ರನಾರ್ಯಸ್ತು ಪೂಜ್ಯಂತೇ, ರಮಂತೆ, ತತ್ರ ದೇವತಾಃ' ಎಂಬ ಉಕ್ತಿಯನ್ನು ಒಳಗೊಂಡಿದೆ. ಹೀಗಿರುವಾಗ ಮಹಿಳೆಯು ಸಾಮಾಜಿಕವಾಗಿ ವಿವಿಧ ಕ್ಷೇತ್ರಗಳಲ್ಲಿ ಭಾಗವಹಿಸಿ ತನ್ನ ಪ್ರತಿಭೆ ಸಾಮರ್ಥ್ಯಗಳನ್ನು ಎತ್ತಿ ಹಿಡಿಯುವಲ್ಲಿ ಸಮರ್ಥಳಾಗಿದ್ದಾಳೆ. ಇಂತಹ ಮಹಿಳೆಯರನ್ನು ಈ ಕೆಳಗಿನ ಉಕ್ತಿಯೊಂದಿಗೆ ಸ್ಮರಿಸಬಹುದು.

**"ಕುಲಪುತ್ರನೋದಿ ತಿಳಿದು ನಡೆದಲ್ಲದೇ**
**ಕುಲವನುದ್ಧರಿಸಲರಿಯನು**
**ಕುಲಪುತ್ರಿಯೊಳ್ಳುವರನಿಗಿತ್ತ ಮಾತ್ರಕೆ**
**ಕುಲಕೋಟಿಯನ್ನುದ್ಧರಿಸುವಳು"**

ಒಂದು ನಾಡಿನ ಸಂಸ್ಕೃತಿಯ ಅಧ್ಯಯನಕ್ಕೆ ತೊಡಗಿದ್ದರೂ, ಅಲ್ಲಿಯ ಸಂಸ್ಕೃತಿ ವಿಕಾಸಗೊಳ್ಳಲು ಆ ಪರಿಸರದಲ್ಲಿ ನೆಲೆಸಿರುವ ಜನ–ಜೀವನವೇ ಕಾರಣವಾಗುತ್ತದೆ[೪]. ಹೀಗಿರುವಾಗ ಹಾವೇರಿ ಜಿಲ್ಲೆಯ ಶಾಸನಗಳಲ್ಲಿ ಸ್ತ್ರೀಯರಿಗೆ ಇದ್ದ ಸ್ಥಾನಮಾನಗಳನ್ನು

ತಿಳಿಯುವಾಗ ಕ್ರಿ.ಶ. ೭೦೭ರ ಶಿಗ್ಗಾವಿ ಶಾಸನದಲ್ಲಿ[೨೫] ಅಲುಪ ಚಿತ್ರವಾಹನ ಅರಸನ ವಿನಂತಿಯ ಮೇರೆಗೆ ಚಕ್ರವರ್ತಿ ವಿಜಯಾದಿತ್ಯನಿಂದ ಪುಲಿಗೆರೆಯಲ್ಲಿ ಕುಂಕುಮದೇವಿ ಕಟ್ಟಿಸಿದ ಜೈನಬಸದಿಗೆ ಗುಡ್ಡಿಗೆರೆ ಗ್ರಾಮದಾನ ನೀಡಿದ ಬಗ್ಗೆ ವಿವರವಿದೆ. ಕ್ರಿ.ಶ. ೯ನೇ ಶತಮಾನದ ಹಾವೇರಿ ತಾಲೂಕಿನ ದೇವಗೇರಿ ಶಾಸನದಲ್ಲಿ[೨೬] ಗೋವಿಂದಬ್ಬೆಯು ದೇವಂಗೇರಿಯನ್ನಾಳುವಾಗ ತಿವುಳರ ಮಾರಮ್ಮ ಗೋಸಾಸಿಮೇಂಟೆ ನಿಲ್ಲಿಸಿದ ಉಲ್ಲೇಖವಿದೆ. ಕ್ರಿ.ಶ. ೧೧೧೮ರ ಹಾನಗಲ್ಲು ತಾಲೂಕಿನ ಬಾಳಂಬೀಡಿನ ಶಾಸನದಲ್ಲಿ[೨೭] ಮಹಾಮಂಡಳೇಶ್ವರ ತೈಲದೇವ ಅರಸನು ಆಳುತ್ತಿರುವಾಗ ತೈಲಭೂಪಾಳದೇವನ ಧರ್ಮಪತ್ನಿ ಕಂಚಿಕಬ್ಬೆಯ ಉಲ್ಲೇಖ ಕಂಡುಬರುತ್ತದೆ. ಅದೇ ತಾಲೂಕಿನ ಬೆಟ್ಟದೂರುನ ಶಾಸನದಲ್ಲಿ[೨೮] ವೈದಿಕ ಬ್ರಾಹ್ಮಣರ ವಿವರವನ್ನು ನೀಡುತ್ತಾ ಹಾಗೂ ಹಲವು ದಾನದತ್ತಿಗಳ ವಿವರಗಳನ್ನು ನೀಡುತ್ತಾ ಅಲ್ಲಿನ ಮಹಾಜನಗಳ ಮಹಾದೇವಷಣಂಗಿಯರು ಬ್ರಾಹ್ಮಣಿ ಸ್ತ್ರೀ ಕಂಚಿಕಬ್ಬೆಗೆ ಹಲವಾರು ದಾನದತ್ತಿಗಳನ್ನು ನೀಡಿದರೆಂದು ತಿಳಿದು ಬರುತ್ತದೆ. ವಿಶೇಷವೆಂದರೆ ಬ್ರಾಹ್ಮಣ ಶ್ರೀ ಕಂಚಿಕಬ್ಬೆಯನ್ನು ಬ್ರಾಹ್ಮಣಿ ಎಂದೇ ಸಂಬೋಧಿಸಿರುವುದು ಕುತೂಹಲಕಾರಿಯಾಗಿದೆ. ಬಾಳಂಬೀಡಿನ ಮತ್ತೊಂದು ಶಾಸನದಲ್ಲಿ[೨೯] ಹಲವಾರು ಸ್ತ್ರೀಯರ ಉಲ್ಲೇಖ ಕಂಡುಬರುತ್ತದೆ. ಶಾಸನದಲ್ಲಿ ಉಲ್ಲೇಖಿತ ಚಿಕ್ಕೇಶ್ವರ ದೇವರಮಠ ಬ್ರಹ್ಮೇಶ್ವರ ದೇವಾಲಯ ಹಾಗೂ ಜೀರ್ಣೋದ್ಧಾರ ಕಾರ್ಯಗಳಿಗೆ ದಾನದತ್ತಿಗಳನ್ನು ನೀಡುವಾಗ ಗುರುಗಳ ಮಗಳು ಕುರುವರ ಬಾಗಿಯಕ್ಕನು ದೇವರ ಗರ್ಭಗೃಹದ ಸುಖನಾಸಿಯ ಕೆಲಸಕ್ಕೆಂದು ದಾನ ಕೊಟ್ಟಳು. ಗುರುಗಳ ಮಗಳಾದಂತಹ ಉತ್ತರಕಬ್ಬೆಯು ದೇವಕಾರ್ಯಕ್ಕೆಂದು ದಾನ ನೀಡಿದ ವಿವರ ತಿಳಿದು ಬರುತ್ತದೆ.

ಕ್ರಿ.ಶ. ೧೦೨೮ರ ಹಾವೇರಿ ತಾಲೂಕಿನ ಕುಳೇನೂರ ಶಾಸನದಲ್ಲಿ[೩೦] ಕುಂದರಾಜನ ಕುಲವಧು ಕುಂದಲದೇವಿಯಿಂದ ದೇವರಿಗಾಗಿ ಸಂಕರಾಶಿಜೀಯರಿಗೆ ಭೂದಾನ ನೀಡಿದ ವಿವರವಿದೆ. ಕ್ರಿ.ಶ. ೧೦೨೮ರ ಹಾನಗಲ್ಲು ತಾಲೂಕಿನ ಉಪ್ಪುಹುಣಸಿ ಶಾಸನದಲ್ಲಿ[೩೧] ಕುಂದರಾಜನ ಮಹಾದೇವಿ ಕುಂದಬ್ಬರಸಿಯಿಂದ ಕಲ್ಮೇಶ್ವರ ದೇವಾಲಯದ ಮಠಕ್ಕೆ ದಾನ ನೀಡಿದ ಉಲ್ಲೇಖವಿದೆ. ಕ್ರಿ.ಶ. ೧೦೩೫ರ ಹಾವೇರಿ ತಾಲೂಕಿನ ಕಳ್ಳಿಹಾಳ ಶಾಸನದಲ್ಲಿ[೩೨] ಚಕ್ರವರ್ತಿಯ ಪೊಟ್ಟಳಕೆರೆಯಲ್ಲಿ ಆಳುವಾಗ ಲಕ್ಷ್ಮಿದೇವಿಯಿಂದ ಶ್ರೀಕಂಠಭಟ್ಟಾರಕರಿಗೆ ನೀಡಿದ ಭೂದಾನದ ವಿವರವಿದೆ.

ಕ್ರಿ.ಶ. ೧೦೩೭ರ ಶಿಗ್ಗಾವಿ ತಾಲೂಕಿನ ಹೊಟ್ಟೂರ ಶಾಸನದಲ್ಲಿ[೩೩] ಅಕ್ಕಾದೇವಿ ಮತ್ತು ಮಯೂರವರ್ಮರು ಬನವಾಸಿನಾಡನ್ನಾಳುವಾಗ ಪೊಟ್ಟೆಯೂರ ಕೆಂಗೆರೆಗೆ ಸುಂಕಾಧಿಕಾರಿಗಳಿಂದ ಸುಂಕದಾನ ನೀಡಿದ ಬಗ್ಗೆ ಮಾಹಿತಿ ಇದೆ. ಕ್ರಿ.ಶ. ೧೦೪೫ರ ಹಾವೇರಿ ತಾಲೂಕಿನ ಕೋಳೂರ ಶಾಸನದಲ್ಲಿ[೩೪] ಕಲಿಯಮ್ಮರಸ, ಬಾಸವೂರ – ೧೪೦, ಆಳುವಾಗ ರಾಜಗುರುದೇವ ಹಾಗೂ ಕಲಿಯಮ್ಮರಸರಿಂದ ಕೋಳೂರ ಕಲಿದೇವರ ದೇವಾಲಯಕ್ಕೆ ಗೃಹ ಮತ್ತು ಭೂಮಿದಾನ ನೀಡಿದ್ದನ್ನು ದಾಖಲಿಸಿದೆ. ಕ್ರಿ.ಶ. ೧೦೫೨–೫೩ರ ಹಾನಗಲ್ಲು ತಾಲೂಕಿನ ತಿಳುವಳ್ಳಿ

ಶಾಸನದಲ್ಲಿ[೮೫] ಪಿರಿಯರಸಿ ಮೈಳಲಾದೇವಿ ಬನವಾಸಿನಾಡನ್ನಾಳುವಾಗ ಸುಂಕಾಧಿಕಾರಿಗಳು ನೀಡಿದ ದಾನವನ್ನು ವಿವರಿಸುತ್ತದೆ. ಕ್ರಿ.ಶ. ೧೦೫೫ರ ಶಿಗ್ಗಾವಿ ತಾಲೂಕಿನ ಶಾಸನದಲ್ಲಿ ಲಚ್ಚಲದೇವಿಯ ವರ್ಣನೆ ಕಂಡು ಬಂದಿದ್ದು

**"ವಿನಯದ ಮೇರೆ ಧರ್ಮ್ಮದ ತವರ್ಮ್ಮನ ಸತ್ಯದ ಜನ್ಮಭೂಮಿ ಮಾಂ**
**ತನದ ಗುನ್ತಿ ಚಾಗದ ಮಹಾನಿಧಿ ಪೆಂಪಿನ ರತ್ನರಾಶಿ ಸ**
**ಜ್ಜನಿಕೆಯ ರಮ್ಯ ಹರ್ಮ್ಯ ಮರವಿಂಗೆರೆವೆಟ್ಟು ವಿದಗ್ಧಮುಗ್ಧ ಸ**
**ಜ್ಜನನುತೆಯೆಂದು ಬಣ್ಣಿಪುದು ಲಚ್ಚಲದೇವಿಯ ನೀ ಜಗಜ್ಜನ ॥"**

ಎಂದು ಶಾಸನ ಉಲ್ಲೇಖಿಸುತ್ತದೆ[೮೬].

ಕ್ರಿ.ಶ. ೧೦೬೦ರ ಬ್ಯಾಡಗಿ ತಾಲೂಕಿನ ಮಲ್ಲೂರ ಶಾಸನದಲ್ಲಿ[೮೭] ನಾರ್ಗಾವುಂಡ ರಾಜಾದಿತ್ಯರಸ, ಆತನ ಸತಿ ಪಂಪಾದೇವಿ ಮತ್ತು ದಂಡನಾಯಕ ಗುಂಡಮಯ್ಯರಿಂದ ಕೆರೆಗೆ ಭೂದಾನ ನೀಡಿದ ಉಲ್ಲೇಖವಿದೆ. ಕ್ರಿ.ಶ. ೧೦೬೭ರ ಬ್ಯಾಡಗಿ ತಾಲೂಕಿನ ಹೆಡಿಗೊಂಡ ಶಾಸನದಲ್ಲಿ[೮೮] ತಡಸೂರಿನ ಕಲಿದೇವ ದೇವಾಲಯಕ್ಕೆ ಆಯ್ತಮ್ ಗಾವುಂಡನಿಂದ ದಾನ ನೀಡಿದ ವಿವರವಿದೆ. ತೇದಿರಹಿತ ಬ್ಯಾಡಗಿ ತಾಲೂಕಿನ ಸಿಡೇನೂರ ಶಾಸನದಲ್ಲಿ[೮೯] ಬಿನವತಿಯಬ್ಬೆ ಸಿಡಿಯನ್ನೂರನ್ನಾಳುವಾಗ ನಡೆದ ಗಂಗರ ಯುದ್ಧದ ಉಲ್ಲೇಖ ಕಂಡುಬರುತ್ತದೆ. ಕ್ರಿ.ಶ. ೧೦೭೬ರ ಹಾನಗಲ್ಲು ತಾಲೂಕಿನ ಕಲಕೇರಿ ಶಾಸನದಲ್ಲಿ[೯೦] ವೀರನೊಳಂಬನ ಪತ್ನಿ ಮಚಲಾದೇವಿಯು ಬೌದ್ಧವಿಹಾರ ಮತ್ತು ಮಹಾಭವನಗಳನ್ನು ನಿರ್ಮಿಸಿದರೆಂದು ತಿಳಿಸುತ್ತದೆ. ಇದರಿಂದ ಸ್ತ್ರೀಯರು ಅಂದಿನ ಧಾರ್ಮಿಕ ಚಟುವಟಿಕೆಯಲ್ಲಿ ಭಾಗವಹಿಸಿ ಧರ್ಮ ಇಷ್ಟದ ಧರ್ಮವನ್ನು ಪರಿಪಾಲಿಸುತ್ತಿದ್ದರು ಅಂದರೆ ಆ ಕಾಲದಲ್ಲಿ ಶೈವ, ವೈಷ್ಣವ, ಜೈನ ಹಾಗೂ ಬೌದ್ಧಧರ್ಮಗಳು ಪ್ರಚಲಿತದಲ್ಲಿದ್ದು ಈ ಧರ್ಮದ ದೇವತೆಗಳಿಗೆ ದಾನ ದತ್ತಿಗಳನ್ನು ನೀಡುತ್ತಿದ್ದರೆಂದು ನಮಗೆ ಮನವರಿಕೆಯಾಗುತ್ತದೆ. ಕ್ರಿ.ಶ. ೧೧೦೩ರ ಹಾನಗಲ್ಲು ತಾಲೂಕಿನ ಗೆಜ್ಜೆಹಳ್ಳಿ ಶಾಸನದಲ್ಲಿ[೯೧] ವಿಕ್ರಮಾದಿತ್ಯನ ಮಹಾಮಂಡಳೇಶ್ವರನಾದ ಕದಂಬ ತೈಲಪನು ಆಳುತ್ತಿರುವಾಗ ಗೆಜ್ಜೆಹಳ್ಳಿಕೆರೆಯ ನಿರ್ವಹಣೆಗೋಸ್ಕರವಾಗಿ ಗೊಪ್ಪಗಾವುಂಡ ಎಂಬುವನು ಭೂದಾನ ಮಾಡಿರುವುದು ಕಂಡುಬರುತ್ತದೆ. ಇದರಿಂದ ಆ ಕಾಲದಲ್ಲಿ ನೀರಾವರಿಯ ನಿರ್ವಹಣೆಗಾಗಿ ಸಂಘಗಳು ಇರುತ್ತಿದ್ದು ಈ ಸಂಘಗಳು ರಾಜನಿಂದ ಅಥವಾ ಅಧಿಕಾರಿಯಿಂದ ನಿಯೋಜಿಸಲ್ಪಟ್ಟಿದ್ದು ಅವುಗಳ ಕೆರೆಯ ಜೀರ್ಣೋದ್ಧಾರ ಮುಂತಾದ ಕಾರ್ಯಗಳನ್ನು ಕೈಗೊಳ್ಳುತ್ತಿದ್ದರು. ಕ್ರಿ.ಶ. ೧೧೦೮–೦೯ರ ಹಾನಗಲ್ಲು ತಾಲೂಕಿನ ಕರಗುದರಿ ಶಾಸನದಲ್ಲಿ[೯೨] ಮಹಾಮಂಡಲೇಶ್ವರ ತೈಲಪದೇವ ೧೧ ಹಾಗೂ ಆತನ ರಾಣಿ ಬಾಚಲದೇವಿಯಿಂದ ಕರಗುದುರೆಯಲ್ಲಿ ದಂಡನಾಯಕಿತಿ ಮಲ್ಲಯಕ್ಕ ಪ್ರತಿಷ್ಠೆ ಮಾಡಿಸಿದ ಶಂಕರದೇವ, ಕೇಶವದೇವ ಮತ್ತು ಭಾಸ್ಕರದೇವರ ದೇವಾಲಯಗಳಿಗೆ ಭೂದಾನ ನೀಡಿದ್ದನ್ನು ಉಲ್ಲೇಖಿಸಿದೆ.

ಕ್ರಿ.ಶ. ೧೧೧೪ರ ಹಾನಗಲ್ಲು ತಾಲೂಕಿನ ಯಳವಟ್ಟಿ ಶಾಸನದಲ್ಲಿ[೯೩] ಮಹಾದೇವಿ ಮೈಳಲಾದೇವಿಯಿಂದ ಮಾಳಭೇಶ್ವರ ದೇವಾಲಯ ನಿರ್ಮಾಣ ಹಾಗೂ ದಾನ ನೀಡಿದ ಬಗ್ಗೆ ವಿವರವಿದೆ. ಕ್ರಿ.ಶ. ೧೧೩೪ರ ಹಾನಗಲ್ಲು ತಾಲೂಕಿನ ದೇವಗೇರಿ ಶಾಸನದಲ್ಲಿ[೯೪] ಕಲಿಯಮ್ಮರಸನಿಂದ ಕಂಕಾಳೇಶ್ವರ ದೇವರಿಗೆ ಭೂದಾನ ನೀಡಿದ ಬಗ್ಗೆ ಮಾಹಿತಿ ಲಭ್ಯವಿದೆ. ಇದೇ ಗ್ರಾಮದ ಕ್ರಿ.ಶ. ೧೧೩೯ರ ಶಾಸನದಲ್ಲಿ[೯೫] ಮಹಾಸಾಮಂತ ಕಲಿಯಮ್ಮರಸ ಹಾಗೂ ತಂತ್ರಪಾಳ ಬಾಚಣ್ಣಾದಿಗಳಿಂದ ಶಾಂತಿನಾಥ ಜಿನಾಲಯಕ್ಕೆ ಭೂದಾನ ನೀಡಿದ ಉಲ್ಲೇಖವಿದೆ ಹಾಗೂ ಇನ್ನೊಂದು ತೇದಿರಹಿತ ದೇವಗೇರಿ ಶಾಸನದಲ್ಲಿ[೯೬] ಮಹಾಸಾಮಂತ ಕಲಿಯಮ್ಮರಸ ಬಾಸೂರ – ೧೪೦ ಆಳುತ್ತಿದ್ದ ಉಲ್ಲೇಖ ಕಂಡುಬರುತ್ತದೆ. ಕ್ರಿ.ಶ. ೧೧ನೇ ಶತಮಾನದ ಹಾನಗಲ್ಲು ತಾಲೂಕಿನ ಹೊಸಳ್ಳಿ ಶಾಸನದಲ್ಲಿ[೯೭] ಕಾಳಗದಲ್ಲಿ ಪಡೆವಳ ಎರೆಯಮ್ಮನ ವೀರಮರಣವು ಉಲ್ಲೇಖಿಸುತ್ತದೆ. ತೇದಿರಹಿತ ಬಂಕಾಪುರ ಶಾಸನದಲ್ಲಿ[೯೮] ಅರಸ, ಕಾಳಲಾದೇವಿ ಮತ್ತು ಮಹಾಪ್ರಧಾನ ಕುಮಾರ ಮುಲ್ಲರಸರಿಂದ ಇಂದ್ರೇಶ್ವರ ದೇವಾಲಯಕ್ಕೆ ತೋಟದ ಸುಂಕದಾನ ನೀಡಿದ ವಿವರವಿದೆ. ಕ್ರಿ.ಶ. ೧೧೮೭ರ ರಾಣೆಬೆನ್ನೂರ ತಾಲೂಕಿನ ಹುಲ್ಲತ್ತಿ ಶಾಸನದಲ್ಲಿ[೯೯] ಮಹಾಮಂಡಳೇಶ್ವರ ವಿಕ್ರಮಾದಿತ್ಯ ದೇವರಸ ಮತ್ತು ಆತನ ರಾಣಿ ಸೋಮಲದೇವಿಯವರಿಂದ ಕಲಿದೇವಸ್ವಾಮಿ ದೇವಾಲಯಕ್ಕೆ ಭೂದಾನ ನೀರಿನ ಬಗ್ಗೆ ವಿವರವಿದೆ. ಕ್ರಿ.ಶ. ೧೧–೧೨ನೇ ಶತಮಾನದ ಹಾನಗಲ್ಲು ತಾಲೂಕಿನ ನಿಡಸಿಂಗಿ ಶಾಸನದಲ್ಲಿ[೧೦೦] ಪಿರಿಯರಸಿ ಲಕ್ಷ್ಮಾದೇವಿ, ನಿಟ್ಟಿಸಿಂಗಿಯನ್ನಾಳುವಾಗ ಉಗುರಮುನ್ನೂರ್ವರು ಕೊಯ್ಲುಳೇಶ್ವರ ದೇವರಿಗಾಗಿ ಸ್ಥಾನಾಚಾರ್ಯ ಸೋಮೇಶ್ವರ ಪಂಡಿತರಿಗೆ ನೀಡಿದ ದಾನದ ಬಗ್ಗೆ ಮಾಹಿತಿ ಲಭ್ಯವಾಗಿದೆ. ಕ್ರಿ.ಶ. ೧೩ನೇ ಶತಮಾನದ ಶಿಗ್ಗಾವಿ ತಾಲೂಕಿನ ಹೂವಿನಸಿಗ್ಗಿ ಶಾಸನದಲ್ಲಿ[೧೦೧] ಸಿಗ್ಗಲಿಯಲ್ಲಿ ಸ್ತ್ರೀಯೊಬ್ಬಳು ಕಟ್ಟಿಸಿದ ಚೈತ್ಯಾಲಯ ಹಾಗೂ ಮಹಾಪ್ರಧಾನ ಮನ್ನೆಯಕಾರರು, ಎಂಟು ಹಿಟ್ಟುಗಳು ಬಸದಿಯ ಶಾಂತಿನಾಥ ದೇವರಿಗೆ ನೀಡಿದ ದತ್ತಿಯ ಉಲ್ಲೇಖ ಕಂಡುಬರುತ್ತದೆ. ಸಾತೇನಹಳ್ಳಿ ಶಾಸನದಲ್ಲಿ[೧೦೨] ಮಡದಿಯ ರಾಗವಂ, ಕೆರಸಿ, ಕಾವಲಿ ತಂಬುಗೆ, ಹುಟು–ಸಟ್ಟುಗಂ, ಕೋಪವರಳಹಕ್ಕಿ ಎಂಬವನು ಚಿಂತಿಸಿ ಕೋಟಲೆಗೊಂಬರು ಎಂದು ಶಾಸನದಲ್ಲಿ ಕಂಡುಬರುತ್ತದೆ.

ಕ್ರಿ.ಶ. ೧೨೪೫ರ ಶಿಗ್ಗಾವಿ ತಾಲೂಕಿನ ಹುಲಗೂರ ಶಾಸನದಲ್ಲಿ[೧೦೩] ಕದಂಬ ಮಲ್ಲದೇವನ ರಾಣಿ ಪದ್ಮಲಾದೇವಿಯಿಂದ ಪುಲ್ಲುಂಗುರದಲ್ಲಿ ಬ್ರಹ್ಮಪುರಿ ನಿರ್ಮಾಣ ಹಾಗೂ ಬ್ರಾಹ್ಮಣರಿಗೆ ದಾನ ನೀಡಿದ ಬಗ್ಗೆ ಉಲ್ಲೇಖ ತಿಳಿದುಬರುತ್ತದೆ. ಕ್ರಿ.ಶ. ೧೨೪೬ರ ಮಲ್ಲೂರ ಶಾಸನದಲ್ಲಿ[೧೦೪] ವೀರ ಪಂಡಿತ, ಲಕ್ಷ್ಮೀಪಾಳದೇವರಸ, ಜೋವಿದೇವರಸ ಹಾಗೂ ಎಂಟುಜನ ಗೌಡರಿಂದ ಕೆರೆಗೆ ಭೂದಾನ ನೀಡಿದ ವಿಷಯವನ್ನು ತಿಳಿಸುತ್ತದೆ. ಕ್ರಿ.ಶ. ೧೨೮೩ರ ರಾಣೆಬೆನ್ನೂರ ತಾಲೂಕಿನ ಹಿರೆಬಿದರಿ ಶಾಸನದಲ್ಲಿ[೧೦೫] ಗುಪ್ತ ವಿಕ್ರಮಾದಿತ್ಯನ ರಾಣಿ ಪದ್ಮಲಾದೇವಿಯಿಂದ ಕಲಿನಾಥ ದೇವರಿಗೆ ದಾನ ನೀಡಿದ್ದನ್ನು ಉಲ್ಲೇಖಿಸಿದೆ. ಕ್ರಿ.ಶ. ೧೪೦೫ರ ರಾಣೆಬೆನ್ನೂರ ತಾಲೂಕಿನ

ಹೇಡಿಹಾಳ ಶಾಸನದಲ್ಲಿ[೧೦೬] ಹೇಡಿಯಾಲದ ರಾಮನಾಯಕ ಲಿಂಗೈಕ್ಯನಾದಾಗ ಆತನ ಹೆಂಡತಿ ಮಲಿದೇವಿ ಸಮಾಧಿ ಮರಣ ಹೊಂದಿದ ವಿಷಯವನ್ನು ತಿಳಿಸುತ್ತದೆ. ಕ್ರಿ.ಶ. ೧೧೨೧ರ ಹಾನಗಲ್ಲು ತಾಲೂಕಿನ ಶಾಸನದಲ್ಲಿ[೧೦೭] ಹಾನಗಲ್ಲು ಗಾವುಂಡರುಗಳು ಸೋಮೇಶ್ವರ ದೇವಸ್ಥಾನದ ಪಂಡಿತರಿಗೆ ತಪೋಧನರ ಆಹಾರಧಾನಕ್ಕೆ ದೇವರ ನೈವೇದ್ಯಕ್ಕೆ ಗದ್ದೆಯ ಸೀಮೆಯ ನೀರಾವರಿ ಭೂಮಿಯನ್ನು ಕೆರೆಯ ಕೆಳಗಿನ ಹೂತೋಟವನ್ನು ಮುಮ್ಮರಿದಂಡ ಮತ್ತು ಒಕ್ಕಲಿಗರು ದೇವರ ಚೈತ್ರಪವಿತ್ರಕ್ಕೆ, ಅಂಗಭೋಗಕ್ಕೆ, ಗಂಧಧೂಪಕ್ಕೆ ತಪೋದನರಿಗೆ ಮತ್ತು ಕೌಪನಕ್ಕೆ ಕೊಟ್ಟಂತಹ ಯರ್ಜುಂಕ, ಕಾರಡಕ್ಕೆ ಮೆಣಸಿನ ಏರುನೂರಕ್ಕೆ – ೫, ಎಣ್ಣೆ ನೂರಕ್ಕೆ – ೩, ಉಪ್ಪಿಏರುನೂರಕ್ಕೆ – ೫, ಅಲ್ಲದೆ ಮನೆದೆರೆ ಚಿಕ್ಕದೆರೆ, ಕೊಟ್ಟಿಗೆದೆರೆ ಹಾಗೂ ಹೊಗದೆರೆ, ತೆರೆಒಕ್ಕಲು ಎಂಬ ನಾನಾ ರೀತಿಯ ವಿಧವಾದ ತೆರಿಗೆಗಳನ್ನು ಬಿಟ್ಟಂತಹ ವಿವರವನ್ನು ನೀಡುತ್ತದೆ.

**ವಿವಾಹ:**

ಸಾಮಾಜಿಕ ಸಂಸ್ಥೆಗಳಲ್ಲಿ ಒಂದಾದ ಕುಟುಂಬವು ಸಮಾಜದ ಒಂದು ಭಾಗವಾಗಿದ್ದು ಕುಟುಂಬವನ್ನೇ ಪ್ರಥಮ ಸಮಾಜವೆಂದು ಕರೆಯಬಹುದು. ಇದಕ್ಕೆ ಪ್ರಮುಖ ಮೂಲ ಗಂಡು-ಹೆಣ್ಣುಗಳ ಸಂಬಂಧ, ಇದರ ಉದ್ದೇಶ ಮಾನವನ ಲೈಂಗಿಕ ಜೀವನವನ್ನು ವ್ಯವಸ್ಥೆಗೊಳಿಸಿ ಇದನ್ನೇ ಇಂದು ಸಂಸ್ಕಾರಗಳು, ಮದುವೆ ಅಥವಾ ವಿವಾಹ ಎಂದು ಕರೆಯುತ್ತಾರೆ"[೧೦೮] ಇದರಲ್ಲಿ ಎಂಟು ವಿಧಗಳಿವೆ. ೧. ಬ್ರಹ್ಮವಿವಾಹ, ೨. ದೈವವಿವಾಹ, ೩. ಆರ್ಷ ವಿವಾಹ ೪. ಪ್ರಜಾಪತ್ಯವಿವಾಹ ೫. ಅಸುರ ವಿವಾಹ ೬. ಗಂಧರ್ವ ವಿವಾಹ ೭. ರಾಕ್ಷಸ ಮತ್ತು ಪೈಶಾಚ ಎಂಬ ಎಂಟು ಪದ್ಧತಿಯ ವಿವಾಹಗಳು ಕರ್ನಾಟಕದಲ್ಲಿ ರೂಢಿಯಲ್ಲಿದ್ದವು[೧೦೯].

೧. **ಬ್ರಾಹ್ಮವಿವಾಹ :** ಕುಲಶೀಲ ಸಂಪನ್ನನಾದ ಯುವಕನಿಗೆ ಚಿನ್ನಾಭರಣಗಳಿಂದ ಅಲಂಕೃತಳಾದ ಸುಯೋಗ್ಯ ಕನ್ಯೆಯನ್ನು ನೀಡಿ ಹೋಮ ಪ್ರಾರ್ಥನೆಗಳೊಡನೆ ಮದುವೆ ಮಾಡುವುದು.

೨. **ದೈವ ವಿವಾಹ :** ಯಜ್ಞ ಮಾಡುತ್ತಾ ಋತ್ವಿಜನಿಗೆ ಸಾಲಂಕೃತಳಾದ ಕನ್ಯೆಯನ್ನು ನೀಡುವುದು.

೩. **ಆರ್ಷವಿವಾಹ:** ವಧುವಿನ ಪಿತೃವು ವರನಿಂದ ಒಂದು ಅಥವಾ ಎರಡು ಗೋವುಗಳನ್ನು ಪಡೆದು ಆನಂತರ ವರನಿಗೆ ಕನ್ಯೆಯನ್ನು ಕೊಡುವುದು.

೪. **ಪ್ರಾಜಾಪತ್ಯ ವಿವಾಹ:** ಧರ್ಮವನ್ನು ಇವಳೊಡನೆ ಕೂಡಿ ಆಚರಿಸು ಎಂದು ಹೇಳಿ ಪ್ರಜಾಧರ್ಮಪಾಲನೆಯನ್ನು ಬಯಸಿ ಕನ್ಯೆಯನ್ನು ವರನಿಗೆ ವಿಧಿಯುಕ್ತವಾಗಿ ಕೊಡುವುದು.

೫. **ಅಸುರ ವಿವಾಹ** : ಹಣವನ್ನು ಪಡೆದುಕೊಂಡು ಕನ್ಯೆಯನ್ನು ಕೊಡುವುದು.

೬. **ಗಾಂಧರ್ವ ವಿವಾಹ** : ವಧೂ ವರರು ಪರಸ್ಪರ ಪ್ರೀತಿಯಿಂದ ಪ್ರಣಯಿಗಳಾಗಿ ವಿವಾಹಿತರಾಗುವುದು.

೭. **ರಾಕ್ಷಸ ವಿವಾಹ** : ಕನ್ಯೆಯನ್ನು ಸಮರದಿಂದ ಇಲ್ಲವೇ ಬಲತ್ಕಾರದಿಂದ ಅಪಹರಿಸಿಕೊಂಡು ಹೋಗಿ ಮದುವೆಯಾಗುವುದು.

೮. **ಪೈಶಾಚ ವಿವಾಹ** : ಕನ್ಯೆಯು ನಿದ್ರೆ ಮಾಡುತ್ತಿದ್ದಾಗ ಅಥವಾ ಕಪಟ ಉಪಾಯಗಳಿಂದ ಅವಳ ಶರೀರ ಸಂಬಂಧವನ್ನು ಪುರುಷನು ಮಾಡಿಕೊಳ್ಳುವುದು.

ಇವುಗಳಲ್ಲಿ ಬ್ರಹ್ಮವಿವಾಹವೇ ಶ್ರೇಷ್ಠವಾದುದೆಂದು ಮೊದಲಿನ ನಾಲ್ಕು ವಿವಾಹಗಳು ಪ್ರಾಶಸ್ತ್ಯವಾದವುಗಳೆಂದು ಕೊನೆಯ ನಾಲ್ಕು ವಿಧದ ವಿವಾಹಗಳು ಅಪ್ರಾಶಸ್ತ್ಯಗಳೆಂದು, ಹಿಂದೂ ಧರ್ಮಗ್ರಂಥಗಳಲ್ಲಿಯೂ ಒಂದಾದ ಗೃಹ್ಯಸೂತ್ರ ತಿಳಿಸುತ್ತದೆ[೧೧೦]. ಇದರ ಹಿನ್ನೆಲೆಯಲ್ಲಿ ಹಾವೇರಿ ಜಿಲ್ಲೆಯ ಶಾಸನಗಳನ್ನು ಅವಲೋಕಿಸಿದಾಗ ಯಾವುದೇ ಶಾಸನಗಳಲ್ಲಿ ವಿವಾಹಕ್ಕೆ ಸಂಬಂಧಪಟ್ಟಂತೆ ಉಲ್ಲೇಖವಿಲ್ಲದಿರುವುದು ಒಂದು ದುರ್ದೈವದ ಸಂಗತಿಯಾಗಿದೆ.

### ವೀರಗಲ್ಲುಗಳು:

ಕನ್ನಡನಾಡಿನ ಶಾಸನಗಳ ಸಾಂಸ್ಕೃತಿಯ ಪರಂಪರೆಯಲ್ಲಿ ಮಾನವನ ಜೀವನ ಏಳು ಬೀಳಿನ ಮೌಲ್ಯಗಳನ್ನು ಪ್ರತಿಬಿಂಬಿಸುವಂತಹ ಇತಿಹಾಸವನ್ನು ಒದಗಿಸುವಲ್ಲಿ ವೀರಗಲ್ಲುಗಳು ಪ್ರಮುಖ ಪಾತ್ರವಹಿಸುತ್ತವೆ. ಊರಿನ ಹಿತಕ್ಕಾಗಿಯೂ ದುಷ್ಟಸಂಹಾರಕ್ಕಾಗಿಯೂ ಸ್ವಾಮಿನಿಷ್ಠೆಯಿಂದಲೂ ಹೋರಾಡಿ ಮಡಿದ ವೀರಪುರುಷನ ಸ್ಮಾರಕಕ್ಕಾಗಿ ರಚಿತವಾದ ಶಾಸನಗಳನ್ನು ವೀರಗಲ್ಲುಗಳೆಂದು ಕರೆಯುತ್ತೇವೆ[೧೧೧]. ಯಾವುದೋ ಒಂದು ಹೋರಾಟದಲ್ಲಿ ಮಡಿದ ವ್ಯಕ್ತಿಯ ಜ್ಞಾಪಕಾರ್ಥವಾಗಿ ನಿಲ್ಲಿಸಿದ ಕಲ್ಲುಗಳೇ ವೀರಗಲ್ಲುಗಳು[೧೧೨].

ಇತಿಹಾಸದ ಪುಟಗಳನ್ನು ತಿರುವಿ ಹಾಕಿದಾಗ ಅಂದಿನ ಕಾಲದಲ್ಲಿ ವೀರರು ಜೀವನರಂಗವನ್ನು ತೊರೆದು ಊರನ್ನು ಕಳ್ಳಕಾಕರಿಂದ ರಕ್ಷಿಸಿ ಗೋವು ಕಳ್ಳರ ಜೊತೆ ಹೋರಾಡಿ ಅಬಲೆಯ ಮೇಲೆ ಎರಗುವ ಕಾಮುಖರ ವಿರುದ್ಧ ಹೋರಾಡಿ ಹಾಗೂ ತಮ್ಮ

ರಾಜರ ಪರ ಹೋರಾಡಿ ಮಡಿದ ವೀರ ಪುರುಷ ಸ್ಮರಣಾರ್ಥ ಹಾಕಿಸಿದ ಕಲ್ಲುಗಳಿಗೆ ವೀರಗಲ್ಲುಗಳೆಂದು ಕರೆಯುತ್ತಾರೆ[೧೧೩].

ಈ ವೀರರು ತಮ್ಮ ಸ್ವಾರ್ಥಕ್ಕಾಗಿ ಮಡಿಯದ ಸಮಾಜ ಹಿತದೃಷ್ಟಿಯಿಂದ ಪ್ರಾಣ ಅರ್ಪಣೆ ಮಾಡಿದ್ದರಿಂದ ಇವರ ಸ್ಮರಣಾರ್ಥವಾಗಿ ತೀರ್ಮಾನ ಮಾಡಿರುವ ಕಲ್ಲುಗಳೇ ವೀರಗಲ್ಲುಗಳು[೧೧೪]. ಈ ಎಲ್ಲಾ ಅಂಶಗಳ ಆಧಾರದಿಂದ ಈ ಕೆಳಗಿನ ಶ್ಲೋಕವು ಸ್ಫೂರ್ತಿ ಎಂದೆನಿಸುವುದು.

**"ಜೀತೇನ ಲಭ್ಯತೇ ಲಕ್ಷ್ಮೀಃ ಮೃತೇನಾಪಿ ಸುರಂಗನಾ**
**ಕ್ಷಣ ವಿಧ್ವಂಸೀ ಕಾಯೇ ಕಾ ಚಿಂತ್ಯಾಮರಣೇ ರಣೇ"**

ಪ್ರಾಚೀನ ಕನ್ನಡಿಗ ಯೋಧರ ಮನಸ್ಸಿನಲ್ಲಿ ತುಂಬಿಕೊಂಡಿದ್ದ ಭಾವನೆ ಇದು. ಯುದ್ಧದಲ್ಲಿ ಮಡಿದರೆ ಲಕ್ಷ್ಮಿ ದೊರಕುವಳು ಸತ್ತರೆ (ಸ್ವರ್ಗದಲ್ಲಿ) ಸುರಾಂಗನೆಯರು ದೊರಕುವರು. ದೇಹವು ಕ್ಷಣದಲ್ಲಿ ವಿಧ್ವಂಸವಾಗುವ ವಸ್ತುವಾದುದರಿಂದ ಉತ್ತೇಜನಗೊಂಡ ಅವರು ಧರ್ಮದಿಂದ ರಣರಂಗದಲ್ಲಿ ಮುನ್ನುಗ್ಗಿ ಜೀವವನ್ನು ಹುಲ್ಲಿಗಿಂತ ಕಡೆಯಾಗಿ ಎನಿಸಿ ಹೋರಾಡಿ, ಗೆದ್ದು ಹಿಂದಕ್ಕೆ ಬರುತ್ತಿದ್ದರು ಅಥವಾ ಸೋತು ಯುದ್ಧದಲ್ಲಿ ಒರಗುತ್ತಿದ್ದರು"[೧೧೫]. ಹೀಗೆ ತನ್ನ ರಾಜನ ಹಿತಕ್ಕಾಗಿ ಊರಿನ ಹಿತಕ್ಕಾಗಿ ಆತ್ಮಬಲಿದಾನವನ್ನು ಮಾಡಿದ ವೀರನ ನೆನಪಿಗಾಗಿ ನಿಲ್ಲಿಸುವ ಫಲಕಗಳನ್ನು ವೀರಗಲ್ಲುಗಳೆಂದು ಕರೆಯುತ್ತಾರೆ. ಕ್ರಿ.ಶ. ೭೬೫ರ ಹಾವೇರಿ ತಾಲೂಕಿನ ಹತ್ತಿಮತ್ತೂರ ಶಾಸನದಲ್ಲಿ[೧೧೬] ಊರಳವಿನಲ್ಲಿ ದಾಸಮ್ಮ ಮತ್ತು ಎರೆಯರ ವೀರಮರಣವನ್ನು ಶಾಸನ ಉಲ್ಲೇಖಿಸುತ್ತದೆ. ಕ್ರಿ.ಶ. ೮ನೇ ಶತಮಾನ ಹಾವೇರಿ ತಾಲೂಕಿನ ದೇವಿಹೊಸೂರ ಶಾಸನದಲ್ಲಿ[೧೧೭] ಶ್ರೀಮಾರನುನಾಡನ್ನಾಳುವಾಗ ನಡೆದ ಗೋಗ್ರಹಣದಲ್ಲಿ ಗೋವಂತಿಯಕುಮಾರನ ಮರಣವನ್ನು ತಿಳಿಸುತ್ತದೆ. ಕ್ರಿ.ಶ. ೮ನೇ ಶತಮಾನ ಹಾನಗಲ್ಲು ತಾಲೂಕಿನ ಹೊಂಬಳಿ ಶಾಸನದಲ್ಲಿ[೧೧೮] ಮಾರಕ್ಕರಸ, ಬನವಾಸಿ - ೧೨೦೦೦ ಆಳುವಾಗ ಬಾದುಗಿಳ್ತಿ ಗಾಮುಂಡನ ವೀರಮರಣವನ್ನು ವಿವರಿಸುತ್ತದೆ. ಕ್ರಿ.ಶ. ೮೫೭-೭೯ರ ರಾಣೆಬೆನ್ನೂರು ತಾಲೂಕಿನ ಹಿರೆಬಿದರಿ ಶಾಸನದಲ್ಲಿ[೧೧೯] ಗೋಗ್ರಹಣದಲ್ಲಿ ದುಗ್ಗತಿಗಾವುಂಡನ ಮಗ ನಾಗತಿಯ ಮರಣ ಉಲ್ಲೇಖಿಸಿದೆ. ಕ್ರಿ.ಶ. ೯ನೇ ಶತಮಾನದ ಹಾನಗಲ್ಲು ತಾಲೂಕಿನ ಮಂತಗಿ ಶಾಸನದಲ್ಲಿ[೧೨೦] ಊರಳಿವಿನ ಪ್ರಸಂಗದಲ್ಲಿ ನೀತಿಗೆ ಮತ್ತು ಪರಶುರಾಮರ ವೀರಮರಣ ಬಗ್ಗೆ ಮಾಹಿತಿ ದೊರಕುತ್ತದೆ.

ಕ್ರಿ.ಶ. ೯೭೬ರ ಕಿತ್ತೂರ ಶಾಸನದಲ್ಲಿ[೧೨೧] ಗೋಗ್ರಹಣ ಪ್ರಸಂಗದಲ್ಲಿ ಬೀರಣಾಗೀಯ ಮತ್ತು ಬರೆವಿಟರ ವೀರಮರಣವನ್ನು ಉಲ್ಲೇಖಿಸಿದೆ. ಕ್ರಿ.ಶ. ೯-೧೦ ನೇ ಶತಮಾನದ ಹಿರೇಕೆರೂರ ತಾಲೂಕಿನ ಸಿರಗಂಬಿ ಶಾಸನದಲ್ಲಿ[೧೨೨] ಗೊಂಡವನ ಎಂಬುವನು ನೇಗಿಲ ಇರಿತದಿಂದ ಮರಣಹೊಂದಿದ ಉಲ್ಲೇಖ ಕಂಡುಬರುತ್ತದೆ. ಕ್ರಿ.ಶ. ೧೦೬೬ರ ಹಾವೇರಿ ತಾಲೂಕಿನ ಹಿರೆಮುಗದೂರ ಶಾಸನದಲ್ಲಿ[೧೨೩] ಗೋಗ್ರಹಣದಲ್ಲಿ ಮುಗದೂರ ಬಾಚಗಾವುಂಡನ ಆಳು

ವೀರಭೋವನ ವೀರಮರಣವನ್ನು ದಾಖಲಿಸಿದೆ. ಕ್ರಿ.ಶ. ೧೦೯೦ರ ಶಿಗ್ಗಾವಿ ತಾಲೂಕಿನ ಬಂಕಾಪುರ ಶಾಸನದಲ್ಲಿ[೧೨೪] ಪಟ್ಟಗಾರರು ಬಂಕಾಪುರದ ಮೇಲೆ ದಾಳಿ ಮಾಡಿದಾಗ ಮೂರಸಿಂಗನಾಯಕನ ವೀರಮರಣವನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೦೯೨ರ ಹಿರೆಕೆರೂರು ತಾಲೂಕಿನ ಚಿಕ್ಕೆರೂರ ಶಾಸನದಲ್ಲಿ[೧೨೫] ಕಳ್ಳರು ತುಂಬಲಿಗರ ಎತ್ತುಗಳನ್ನು ಕೊಂದಾಗ ಅವರೊಡನೆ ಹೋರಾಡಿದ ಗೊಜ್ಜಿಗನ ವೀರಮರಣದ ವಿವರ ತಿಳಿಸುತ್ತದೆ. ಕ್ರಿ.ಶ. ೧೧೨೬ರ ತಿಳುವಳ್ಳಿ ಶಾಸನದಲ್ಲಿ[೧೨೬] ತಿಳುವಳ್ಳಿಯ ಗೋಗ್ರಹಣದಲ್ಲಿ ಮೊಸಳೆ ಗ್ರಾಮದ ಬೊಮ್ಮನ ವೀರಮರಣವನ್ನು ಉಲ್ಲೇಖಿಸಿದೆ. ಕ್ರಿ.ಶ. ೧೧೪೬ರ ಉಪ್ಪಹುಣಸಿ ಶಾಸನದಲ್ಲಿ[೧೨೭] ಪುಳ್ಳಾಸೆಯ ಬೊಮ್ಮೆಯ ನಾಯಕನ ವೀರಮರಣ ದಾಖಲೆ ನೀಡುತ್ತದೆ. ಹಾಗೂ ಇದೇ ಗ್ರಾಮದ ತೇದಿ ರಹಿತ ಉಪ್ಪುಹುಣಸಿ ಶಾಸನದಲ್ಲಿ ಕಲುಕೆರೆಯ ಮನ್ನೆಯ ಮಂದಿಸೆಟ್ಟಿ ಹಾಗೂ ದೇವಂಗೆರೆಯ ತೈಲಹದೇವರು ಒಪ್ಪುಣಿಸಿಯಲ್ಲಿ ಕಾದುವಾಗ ದಾಸಣನ ವೀರಮರಣವನ್ನು ವಿವರಿಸುತ್ತದೆ. ಕಲಕೇರಿ ನಾಳ್ಪ್ರಭು ಕೇತಿಸೆಟ್ಟಿಯು ಕ್ರಿ.ಶ. ೧೧೪೬ ಜುಲೈ ೬ ರಲ್ಲಿ ಕಾಗಿನೆಲೆಯವರೊಡನೆ 'ಸಿರಿವೊಳಲು' ಗ್ರಾಮದಲ್ಲಿ ಹೋರಾಡಿ ವೀರಸ್ವರ್ಗವನ್ನು ಸೇರುತ್ತಾನೆ. ಈ ಕೇತಿ ಸೆಟ್ಟಿಯ ಬಂಟನಾದ ಕಮ್ಮಾರ ಸಾಂತೋಜನು ಜಗಮೆಚ್ಚುವಂತೆ ಹೋರಾಡಿ ವೀರಮರಣವನ್ನು ಅಪ್ಪುತ್ತಾನೆ. ಇನ್ನೊಂದು ವೀರಗಲ್ಲಿನಲ್ಲಿ ಈ ಕೇತಿಸೆಟ್ಟಿಯ ಇನ್ನೊಬ್ಬ ಬಂಟನು ಇದೇ ಯುದ್ಧದಲ್ಲಿ ಹೋರಾಡುತ್ತಾ ಮರಣಿಸುತ್ತಾನೆ. ಅವನನ್ನು ಸೇಣಿಗ ಜಕೆಯ ಕೇತನಮ' ಎಂದು ಕರೆಯಲಾಗುತ್ತದೆ. ಕೇತನ ಮಗ ಜಕೆಯ್ಯನೊ ಅಥವಾ ಸೇಣಿಗಜಕೆಯ ಕೇತನ ಮಗನೋ, ಎರಡೂ ಅರ್ಥವಾಗುತ್ತದೆ. ಬಹುಶಃ ಸೇಣಿಗ ಮನೆತನದ ಹೆಸರಿದ್ದು "ಜಕೆಯ" ಎಂಬುದು ವೀರನ ಹೆಸರಾಗಿದ್ದು 'ಕೇತನ' ಎಂಬುವದು ವೀರನ ತಂದೆಯಾಗಿರಬೇಕು ಎಂದು ತಿಳಿಯುತ್ತದೆ[೧೨೮]. ಕ್ರಿ.ಶ. ೧೧೬೪ರ ಹಿರೇಕೆರೂರ ತಾಲೂಕಿನ ಮೇದೂರ ಶಾಸನದಲ್ಲಿ[೧೨೯] ಸಿಂಗೆಯ ದಣ್ಣಾಯಕನು ಹಣಜೆಯ ಮೇಲೆ ದಾಳಿಮಾಡಿದಾಗ ಮೇಜೂರ ನಾಟ್ಪ್ರಭು ಸಾಮಂತ ಕಾಳಗೌಡ ಬಿಡಗೂರವನ್ನಾಲಿ ಸೀಮೆಯಲ್ಲಿ ಹೋರಾಡಿ ಮರಣಹೊಂದಿದ ಉಲ್ಲೇಖವಿದೆ. ಕ್ರಿ.ಶ. ೧೧೬೫ರ ಎಮ್ಮಿಗನೂರ ಶಾಸನದಲ್ಲಿ[೧೩೦] ಬಮ್ಮರಸ ಮತ್ತು ಬೀರರಸರು ಗಿಣ್ಣಲಗುಂಡಿಯ ಕೋಟೆಯ ಮೇಲೆ ದಾಳಿಮಾಡಿದಾಗ ಕೇತಮಲ್ಲಿಸೆಟ್ಟಿಯ ಮಗ ಮಸಣಸೆಟ್ಟಿಯ ವೀರಮರಣದ ಉಲ್ಲೇಖವಿದೆ. ಕ್ರಿ.ಶ. ೧೧೬೬ರ ಹಿರೇಕೊಣತಿ ಶಾಸನದಲ್ಲಿ[೧೩೧] ದಾಳಿಯಲ್ಲಿ ಕೋಣವತ್ತಿಯ ಕೇತಿಸೆಟ್ಟಿಯ ವೀರಮರಣದ ದಾಖಲೆ ನೀಡುತ್ತದೆ. ಕ್ರಿ.ಶ. ೧೧೭೬ರ ಎಮ್ಮಿಗನೂರ ಶಾಸನದಲ್ಲಿ[೧೩೨] ಕೋಣಂಗೇರಿಯ ಬೊಮ್ಮಿಸೆಟ್ಟಿಯ ಮಗ ಸೋವಿಸೆಟ್ಟಿಯು ಅಣ್ಣಿಗೆರೆಯ ಹೊಲದಲ್ಲಿ ಸುಲಿಗೆಗಾರರೊಡನೆ ಕಾದಿ ಮಡಿದ ಉಲ್ಲೇಖ ಕಂಡುಬರುತ್ತದೆ.

ಕ್ರಿ.ಶ. ೧೧೭೬ರ ಜಾವಳ್ಳಿ ಶಾಸನದಲ್ಲಿ[೧೩೩] ಮಹಾಮಂಡಳೇಶ್ವರ ಬೊಪ್ಪದೇವರಸು ಜಾವಳಿಯ ಮೇಲೆ ದಾಳಿಮಾಡಿದಾಗ ದಾಕಗೌಡನ ವೀರಮರಣವನ್ನು ವಿವರಿಸುತ್ತದೆ. ಕ್ರಿ.ಶ. ೧೧೮೩ರ ಕಲಕೇರಿ ಶಾಸನವು ಮಾದಿಶೆಟ್ಟಿಯ ಶ್ರೇಷ್ಠ ರಾಹುತನಾದ ಬಮ್ಮರಾವುತನು

ವೀರಾವೇಶದಿಂದ ಹೋರಾಡಿ ಮರಣವನ್ನು ಅಪ್ಪುತ್ತಾನೆ. ಈ ವಿಷಯವನ್ನು ಶಾಸನವು "ತನಗಿದಿರಾಂತ ವೈರಿಗಳನ್ನು ಪರಾಕ್ರಮದಿಂದ ಕೊಂದು ಭೂವನಿತೆಗಧೀಶನಪ್ಪ ಚಲದಂಕನ ಮಜ್ಜಿಸಿ ರಾಟ್ಟಹಳ್ಳಿಯೊಳು ಕನಕವಿಮಾನಮೇಱಿದ ಎಂದು ತಿಳಿಸುತ್ತದೆ. ಇವನ ಹೋರಾಟದ ರೀತಿಯನ್ನು ಶಾಸನವು ಈ ರೀತಿಯಲ್ಲಿ ತಿಳಿಸಿದೆ[೧೩೪]. ಕ್ರಿ.ಶ. ೧೧೮೫ರ ಕಲಕೇರಿ ಶಾಸನದಲ್ಲಿ ಕಲಕೇರಿ ನಾಳ್ಪ್ರಭು ಮಾದಿಸೆಟ್ಟಿಯ ಮೆಚ್ಚಿನ ಬಂಟನಾದ. 'ಸೆಟ್ಟಿಮನಾಯ್ಕನು' ಹೋರಾಡಿ ಮರಣಿಸುತ್ತಾನೆ. ಇವನು "ಸಂದುಭಯಬಲಂಗಳೆರಡು ಮೆಚ್ಚಲು ನಿನ್ದಿಱಿದು ಹೊನ್ದಿದಾಗಳು ಸುರದುಂದುಭಿಯೆಸೆಯುಲುಕೆ ದೇವಕಂನೆಯರೊಯ್ದರ್" ಎಂದು ಶಾಸನದಲ್ಲಿ ಹೇಳಿರುವುದರಿಂದ ಎರಡೂ ಬಲಗಳು ಮೆಚ್ಚುವಂತೆ ಹೋರಾಡಿ ಮಣಿಸಿದ್ದಾನೆ.

ಈ ತುರುಗಾಳದಲ್ಲಿ 'ಬೊಪ್ಪಣ'ನೆಂಬ ಇನ್ನೊಬ್ಬ ಬಂಟನು ಹೋರಾಡಿ ಯುದ್ಧದಲ್ಲಿ ಜಯ ಸಾಧಿಸಿ ವೀರ ಸ್ವರ್ಗವನ್ನೇರಿದುದನ್ನು ಶಾಸನ ತಿಳಿಸುತ್ತದೆ. ಇದೇ ಶಾಸನದಲ್ಲಿ ಬೊಪಣ್ಣನು ಹೋರಾಡಿದ ರೀತಿಯನ್ನು ಈ ಕೆಳಗಿನಂತೆ ತಿಳಿಯಬಹುದು.

**"ಪರಬಳಮನಿಱಿದು ಗೆಲುದುಂ**
**ಪೊರೆದಾಳ್ದಂ ಮೆಚ್ಚೆಕಾದಿ ರಣದೊಳು ಮಡಿದುಂ**
**ಸುರವನಿತೆಯರೊಳು ನೆರೆದಂ**
**ಧರೆಯೊಳು ಬೊಪ್ಪಣನೆ ವೀರದಾಗ ಮಂದ"**

ಎಂದು ವರ್ಣಿಸಿದೆ. ಈತನ ಬಿರುದಾವಳಿಗಳನ್ನು ಶಾಸನದಲ್ಲಿ "ಆಳಿಂ ಮುಂನಿಱಿವಂ ಸಿತಗರಗಂಡಂ ತೆಗೆಬೀಯ ಚಲದಂಕರಾಮನ ಗಂಧವಾರಣಂ ಮಲೆವರ ಮಾರಿ ಕೊಂಡೆಯರಗಂ"[೧೩೫] ಎಂದು ಹೇಳಲಾಗಿದೆ.

ಕ್ರಿ.ಶ. ೧೧೯೩ರ ಕುಂಚೂರ ಶಾಸನದಲ್ಲಿ[೧೩೬] ಗೌಡನೊಬ್ಬನು ಕುಂಚೂರು ಮೇಲೆ ದಾಳಿಮಾಡಿದಾಗ ಯುದ್ಧದಲ್ಲಿ ಗಂಗಕುಲದ ಚಿಕ್ಕಸೆಟ್ಟಿಯ ಮಗನ ಮರಣ ಎಂಬ ಉಲ್ಲೇಖವು ಕಂಡುಬರುತ್ತದೆ. ಕ್ರಿ.ಶ. ೧೧-೧೨ ನೇ ಶತಮಾನ ಅರಿಷಿಣ ಗುಡ್ಡಿ ಶಾಸನದಲ್ಲಿ[೧೩೭] ಅರಿಷಿಪಳ್ಳಿಯ ಗೋಗ್ರಹಣ ಪ್ರಸಂಗದಲ್ಲಿ ಬಲಕಗಾವುಂಡನ ವೀರಸ್ವರ್ಗ ಈ ಶಾಸನ ತಿಳಿಸುತ್ತದೆ. ಕ್ರಿ.ಶ. ೧೨ನೇ ಶತಮಾನದ ತಿಳುವಳ್ಳಿ ಶಾಸನದಲ್ಲಿ[೧೩೮] ಅಗ್ರಹಾರ ತಿಳವಳ್ಳಿಯ ಸಾಸಿರ್ವರ ಬೆಸದಿಂದ ಯುದ್ಧ ಮಾಡಿದ ವೀರನೊಬ್ಬ ಮರಣವನ್ನು ಉಲ್ಲೇಖಿಸಿದೆ. ಕ್ರಿ.ಶ. ೧೨ನೇ ಶತಮಾನದ ಅಣಜಿ ಶಾಸನದಲ್ಲಿ[೧೩೯] ಮಾರೆಯ ನಾಯಕನ ಮಗ ಬೊಮ್ಮೆಯನಾಯಕನು ಹುಲಿಯನ್ನು ಕೊಂದು ಸ್ವರ್ಗವನ್ನಪ್ಪಿದ ಉಲ್ಲೇಖವಿದೆ. ಕ್ರಿ.ಶ. ೧೨ನೇ ಶತಮಾನದ ಹಂಸಬಾವಿ ಶಾಸನದಲ್ಲಿ[೧೪೦] ತುಯ್ಯಲಬೇಗೂರದ ಕೇತಗಾವುಂಡನ ಆಜ್ಞೆಯ ಮೇರೆಗೆ ಬಮ್ಮೆಯನಾಯಕನ ವೀರಮರಣ ವಿವರವನ್ನು ನೀಡುತ್ತದೆ. ಕ್ರಿ.ಶ. ೧೨೦೩ರ ಸಾತೇನಹಳ್ಳಿ ಶಾಸನದಲ್ಲಿ[೧೪೧] ಮಹಾಮಂಡಳೇಶ್ವರ ಕಾವದೇವರಸ ಕೊಲ್ಲಿಗೊಡ್ಡೆಯ ಮೇಲೆ ದಂಡೆತ್ತಿ ಬಂದಾಗ ವೀರನೊಬ್ಬನ

ಮರಣ ಉಲ್ಲೇಖವಿದೆ. ಕ್ರಿ.ಶ. ೧೨೧೭ರ ಕೋಡಮಗ್ಗಿ ಶಾಸನದಲ್ಲಿ[೧೪೨] ವೀರಬಲ್ಲಾಳದೇವನು ಬೆಳವತ್ತಿಯ ಮೇಲೆ ದಾಳಿ ಮಾಡಿದಾಗ ವೀರನೊಬ್ಬನ ಮರಣ ದಾಖಲಿಸಿದೆ. ಕ್ರಿ.ಶ. ೧೨೧೮ರ ಎಮ್ಮಗನೂರ ಶಾಸನದಲ್ಲಿ[೧೪೩] ಬೆಳಗವತ್ತಿ ಕೋಟೆಕಾಳಗದಲ್ಲಿ ಬಲದಣಿಕಿಯ ಬೊಮ್ಮಿದೇವರಸನ ಆಳು ಮಲ್ಲೆಯನಾಯಕನ ವೀರಮರಣ ದಾಖಲಿಸುತ್ತದೆ.

ಕ್ರಿ.ಶ. ೧೨೧೯ರ ಅಬಲೂರ ಶಾಸನದಲ್ಲಿ[೧೪೪] ಬೆಳಗವತ್ತಿಯ ಈಶ್ವರದೇವನ ಅಬ್ಬಲೂರು ಗೋಗ್ರಹಣದಲ್ಲಿ ಮಂಚ ಮತ್ತು ಗೋಮರ ವೀರಮರಣವನ್ನು ಉಲ್ಲೇಖಿಸಿದೆ. ಕ್ರಿ.ಶ. ೧೨೨೩ರ ಇಟಗಿ ಶಾಸನದಲ್ಲಿ[೧೪೫] ಇಟ್ಟಿಗೆಯ ಗೋಗ್ರಹಣದ ಪ್ರಸಂಗದಲ್ಲಿ ಕಂದಲೆಯ ಮಲೆಯ ನಾಯಕನೊಡನೆ ಹೋರಾಡಿದ ಮಾದಯನಾಯಕನ ವೀರಮರಣ, ಮಾಹಿತಿ ಲಭ್ಯವಾಗಿದೆ. ಕ್ರಿ.ಶ. ೧೨೨೩ರ ಚಿಕ್ಕೆರೂರ ಶಾಸನದಲ್ಲಿ[೧೪೬] ಈಶ್ವರದೇವನು ಚಿಕ್ಕಕೆರೆ ಊರಿನ ಮೇಲೆ ದಾಳಿ ಮಾಡಿದಾಗ ಸನ್ನೆಯ ಸೋಮನ ವೀರಮರಣವನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೨೩೪ರ ರಾಣೆಬೆನ್ನೂರ ತಾಲೂಕ ಅಂತರವಳ್ಳಿ ಶಾಸನದಲ್ಲಿ[೧೪೭] ವುಲಿಹಳ್ಳಿಯ ಗೋಗ್ರಹಣದಲ್ಲಿ ಪಾಂಡ್ಯದೇವನಿಂದ ಅಂತರವಳ್ಳಿಯ ಬೊಮ್ಮಗೌಡನ ವೀರಮರಣ ಬಗ್ಗೆ ದಾಖಲೆಯಿದೆ ಹಾಗೂ ಇದೇ ಗ್ರಾಮದ ಇನ್ನೊಂದು ಶಾಸನದಲ್ಲಿ ಬೆಳುಗಲಿ ಸೀಮೆಯ ಕಾಳಗದಲ್ಲಿ ರಾಮೋಜನ ವೀರಮರಣ ಬಗ್ಗೆ ಮಾಹಿತಿಯಿದೆ. ಕ್ರಿ.ಶ. ೧೨೩೬ರ ಕಳ್ಳಿಹಾಳ ಶಾಸನದಲ್ಲಿ[೧೪೮] ಪಾಂಡ್ಯದೇವನು ಅಜ್ಜಡಿಯ ಮೇಲೆ ದಾಳಿ ಮಾಡಿದಾಗ ಹರಿಪನ ವೀರ ಮರಣದ ಬಗ್ಗೆ ಮಾಹಿತಿ ನೀಡುತ್ತದೆ ಹಾಗೂ ಇದೇ ಗ್ರಾಮದ ಇನ್ನೊಂದು ಶಾಸನದಲ್ಲಿ ಪಾಂಡ್ಯದೇವನು ಅಜ್ಜಡಿಯ ಮೇಲೆ ಮಡಿದಾಗ ಬಡಿಗ ಲಕ್ಕೋಜನ ವೀರಮರಣದ ಉಲ್ಲೇಖವಿದೆ. ೧೨೩೮ರ ಹಿರೆಅಣಜಿ ಶಾಸನದಲ್ಲಿ[೧೪೯] ದೇವಂಗೇರಿ – ೧೪೦ರಲ್ಲಿಯ ಗೊಟ್ಟಗಡಿಯ ಗೋಗ್ರಹಣದಲ್ಲಿ ಗೊಗ್ಗಿಸೆಟ್ಟಿಯ ವೀರಮರಣವನ್ನು ದಾಖಲಿಸುತ್ತದೆ. ಕ್ರಿ.ಶ. ೧೨೪೯ರ ಹೊಸಳ್ಳಿ ಶಾಸನದಲ್ಲಿ[೧೫೦] ಹೊಸಹಳ್ಳಿ ಗ್ರಾಮದ ಗೌಡರ ಆದೇಶದ ಮೇರೆಗೆ ಕಾಳದಲ್ಲಿ ಮಸನಭೋವನ ಮರಣದ ಬಗ್ಗೆ ಮಾಹಿತಿ ನೀಡುತ್ತದೆ.

ಕ್ರಿ.ಶ. ೧೨೬೧ರ ಇಟಗಿ ಶಾಸನದಲ್ಲಿ[೧೫೧] ರಟ್ಟಹಳ್ಳಿ ಯುದ್ಧದಲ್ಲಿ ಡಬ್ಬಣ ರಾವುತನ ಸಂಬಂಧಿಕನೊಬ್ಬನ ವೀರಮರಣದ ಉಲ್ಲೇಖ ಕಂಡುಬರುತ್ತದೆ ಹಾಗೂ ಇದೇ ಗ್ರಾಮದ ಇನ್ನೊಂದು ಕ್ರಿ.ಶ. ೧೨೬೮ರ ಶಾಸನದಲ್ಲಿ ಇಟ್ಟಿಗೆಯ ಕುರುವ ಬಸವಗೌಡನ ಮಗ ವೈಧಯನ ವೀರಮರಣದ ಉಲ್ಲೇಖವನ್ನು ತಿಳಿಯಬಹುದು. ಕ್ರಿ.ಶ. ತೇದಿರಹಿತ ನಿಟ್ಟೂರು ಶಾಸನದಲ್ಲಿ[೧೫೨] ಹೆಬ್ಬೂರಿನ ಅಳಿವಿನಲ್ಲಿ ನಿಟ್ಟೂರದ ಕೇತಭೋವನ ವೀರಮರಣವನ್ನು ದಾಖಲಿಸಿದೆ. ಕ್ರಿ.ಶ ತೇದಿರಹಿತ ಮೂಕನೂರ ಶಾಸನದಲ್ಲಿ[೧೫೩] ವಿಜಯಪಾಂಡ್ಯನೊಡನೆ ನಡೆದ ಯುದ್ಧದಲ್ಲಿ ದಾಸಿಗನ ವೀರಮರಣ ತೇದಿರಹಹಿತ ಮೆಣಸಿನಹಾಳ ಶಾಸನದಲ್ಲಿ[೧೫೪] ವಿಜಯಪಾಂಡ್ಯನೊಡನೆ ನಡೆದ ಯುದ್ಧದಲ್ಲಿ ದಾಸಿಗನ ವೀರಮರಣ ಹಾಗೂ ತೇದಿರಹಿತ ಮೆಣಸಿನಹಾಳ ಶಾಸನದಲ್ಲಿ ಮೆಣಸಿನ ಕೆರೆಯ ಅಳಿವಿನಲ್ಲಿ ಕಲಿಗ ಮತ್ತು ಸಿರಿಗರಿಂದ ಮಾದನ ವೀರಮರಣ ತಿಳಿಯುತ್ತದೆ

ಹಾಗೂ ಇದೇ ತಾಲೂಕಿನ ಸರ್ವಂದ ಗ್ರಾಮದ ತೇದಿ ರಹಿತ ಶಾಸನದಲ್ಲಿ ಸರವೂರಿನ ಅಳಿವಿನಲ್ಲಿ ಜಕ್ಕಯ್ಯನ ವೀರಮರಣ ಹೊಂದಿದ ಮಾಹಿತಿಯ ದಾಖಲೆಯಿದೆ. ಕ್ರಿ.ಶ. ೧೨೮೦ರ ಹಾವೇರಿ ತಾಲೂಕಿನ ಹಿರೆಲಿಂಗದಹಳ್ಳಿ ಶಾಸನದಲ್ಲಿ[೧೫೫] ತಿಳುವಳ್ಳಿ ಕೋಟೆಯನ್ನು ಜಯಿಸುವಾಗ ಹದಿನೆಂಟು ಸಮಯದ ಆಳು ಮಲ್ಲನಾಯಕನ ವೀರಮರಣವನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೨೮೨ರ ಬ್ಯಾಡಗಿ ತಾಲೂಕಿನ ಕದರಮಂಡಲಗಿ ಶಾಸನದಲ್ಲಿ[೧೫೬] ಶಾಂತಿಭಟ್ಟಾರಕರ ಅನುಯಾಯಿ ಸುರಗೌಡನ ಮರಣದ ಮಾಹಿತಿ ಇದೆ ಹಾಗೂ ಇದೇ ತಾಲೂಕಿನ ಮತ್ತೊಂದು ಕ್ರಿ.ಶ. ೧೨೮೩ರ ಕಾಗಿನೆಲೆ ಶಾಸನದಲ್ಲಿ ಬಂದನಿಕೆಯ ಮಹಾಮಂಡಳೇಶ್ವರ ಸೋಯಿದೇವನು ತರವೂರಿನ ಮೇಲೆ ದಾಳಿಮಾಡಿದಾಗ ಕಾಗಿನೆಲೆಯ ಬುಗುಡರ ಸಿದ್ದಯ್ಯನ ವೀರಮರಣವನ್ನು ದಾಖಲಿಸುತ್ತದೆ. ಕ್ರಿ.ಶ. ೧೨೮೮ರ ಹಿರೇಕೆರೂರ ತಾಲೂಕಿನ ಕಡೂರ ಶಾಸನದಲ್ಲಿ[೧೫೭] ರಾಜಗುರು ಮೂರು ಬಾವಿದೇವರ ಶಿಷ್ಯ ಮತ್ತು ಮೂಲಿಗ ಸೋಮಗೌಡನ ಮಗನಾದ ಬಾಚಿಗೌಡನ ಯುದ್ಧಮರಣವನ್ನು ಉಲ್ಲೇಖಿಸುತ್ತದೆ.

ಕ್ರಿ.ಶ. ೧೩೫೮ರ ಹಾನಗಲ್ಲು ತಾಲೂಕಿನ ಅಕ್ಕಿ ಆಲೂರ ಶಾಸನದಲ್ಲಿ[೧೫೮] ಗೋಗ್ರಹಣ ಪ್ರಸಂಗದಲ್ಲಿ ಲೋಕೆಯನಾಯಕನ ವೀರಮರಣದ ವಿವರವಿದೆ. ಕ್ರಿ.ಶ. ೧೩ನೇ ಶತಮಾನದ ಶಿಗ್ಗಾಂವ ತಾಲೂಕಿನ ಹುರುಳಿಕುಪ್ಪಿ ಶಾಸನದಲ್ಲಿ[೧೫೯] ಯುದ್ಧದಲ್ಲಿ ಚೂರಿಯ ನವಿಲೆಯನಾಯಕನ ವೀರಮರಣವನ್ನು ದಾಖಲಿಸುತ್ತದೆ. ಕ್ರಿ.ಶ. ೧೩ನೇ ಶತಮಾನದ ಅರಳಿಕಟ್ಟೆ ಶಾಸನದಲ್ಲಿ[೧೬೦] ಊರಳಿವಿನಲ್ಲಿ ವೀರಪುಲಿಯ ಮಗ ಮಾರಮ್ಮನ ವೀರಮರಣವನ್ನು ವಿವರಿಸುತ್ತದೆ ಹಾಗೂ ಕ್ರಿ.ಶ. ೧೪ನೇ ಶತಮಾನದ ಹಾನಗಲ್ಲು ತಾಲೂಕಿನ ವೀರಾಪುರ ಶಾಸನದಲ್ಲಿ[೧೬೧] ನಾಗರಹಳ್ಳಿಯ ಚಂದೋಜನ ಮಗ ಚಿಕ್ಕಚಂದಪ್ಪನ ವೀರ ಮರಣದ ಉಲ್ಲೇಖವಿದೆ.

**ಮಾಸ್ತಿಕಲ್ಲುಗಳು:**

ಜಗತ್ತಿನ ಇತಿಹಾಸದಲ್ಲಿ ಸತಿಪದ್ಧತಿಯು ನಡೆದು ಬಂದ ಹಾದಿ ಅತ್ಯಂತ ಮಹತ್ವದೆನಿಸಿದೆ. ಹೀಗಾಗಿ ಪತಿಯೊಡನೆ ಸಹಗಮನ ಮಾಡಿದ ಸ್ತ್ರೀಯರ ಸ್ಮಾರಕಕ್ಕಾಗಿ ನಿಲ್ಲಿಸಿದ ಕಲ್ಲುಗಳನ್ನು ಮಹಾಸತಿಕಲ್ಲು ಎಂದು ಕರೆಯುತ್ತಾರೆ. ಹೀಗೆ ಪ್ರಾಣವನ್ನೆ ಅರ್ಪಿಸುವವಳೇ ಮಹಾಸತಿ. ಮಾಸ್ತಿ ಎಂಬುದು ಇದರ ತದ್ಭವರೂಪ[೧೬೨]. ಸತಿ ಅಥವಾ ಸಹಗಮನ ಪದ್ಧತಿ ಸಾರ್ವತ್ರಿಕವಾಗಿರಲಿಲ್ಲ ಹಾಗೂ ಬಲಾತ್ಕಾರವು ಅಲ್ಲಿ ಇರಲಿಲ್ಲವೆಂಬುದು ಗಮನಿಸಬೇಕಾದ ಸಂಗತಿ. ಪತಿಯೇ ಪರದೈವ ಎಂಬ ಭಾವನೆಯಲ್ಲಿ ಬೆಳೆದ ಹೆಣ್ಣು ಪತಿಯ ಮರಣವನ್ನು ಸಹಿಸಲಾಗದೇ ಸ್ವಇಚ್ಛೆಯಿಂದ ಆತನನ್ನು ಹಿಂಬಾಲಿಸಿ ಸ್ವ–ಸಂತೋಷದಿಂದ ಸಹಗಮನವನ್ನು ಮಾಡುತ್ತಿದ್ದರು[೧೬೩]. ಏಕೆಂದರೆ ಯಾವ ಧರ್ಮಶಾಸ್ತ್ರಗಳಲ್ಲಿಯೂ ಬಲಾತ್ಕಾರದ ಸಹಗಮನಕ್ಕೆ ಒಪ್ಪಿಗೆಯನ್ನು ನೀಡಿಲ್ಲ. ಆದರೂ ಕೆಲವು ಕಡೆಗಳಲ್ಲಿ ಅಪರೂಪವಾಗಿ ಹೆಣ್ಣು ಇಷ್ಟವಿಲ್ಲದಿದ್ದರೂ ಆ ವಿಧಿ ನಡೆಯುತ್ತಿದ್ದಂತೆ

ತೋರುತ್ತದೆ. ಆದರೆ ಕೆಲವು ಸಮಯದಲ್ಲಿ ಪತಿಯ ಸಾವನ್ನು ಕೇಳಿ ಸ್ತ್ರೀಯರೆ ಸಹಗಮನ ಮಾಡಿಕೊಳ್ಳುತ್ತಿದ್ದರು[೧೬೪].

"ಒಟ್ಟಾರೆ ಸಹಗಮನದ ಉದ್ದೇಶವೆಂದರೆ ಪತಿನಿಷ್ಠೆ ಹಾಗೂ ಮುಕ್ತಿ" ಪ್ರಾರಂಭದಲ್ಲಿ ಬೇರೊಂದು ಲೋಕದ ಬಗ್ಗೆ ಅಚಲ ನಂಬಿಕೆ ಹೊಂದಿದ್ದ ಜನ ಮಡಿದ ವ್ಯಕ್ತಿಯ ಜೊತೆಯಲ್ಲಿ ಅವನಿಗೆ ಇಷ್ಟಭೋಗ ವಸ್ತುಗಳನ್ನು ಕಳುಹಿಸಿಕೊಡುವ ಸಂಪ್ರದಾಯ ಹಿಂದೆ ಇತ್ತು. ಅವುಗಳಲ್ಲಿ ಪತ್ನಿ ಕೂಡ ಒಬ್ಬಳು. ಮರಣದ ನಂತರ ಅವಳು ತನ್ನನ್ನು ಅಗಲಿಸಬಾರೆಂಬ ಅಥವಾ ಮತ್ತೊಬ್ಬರ ವಶವಾಗಬಾರದೆಂಬ ತನ್ನ ಒಡವೆ ಕರೆದೊಯ್ಯುವಂತೆ ಮಾಡಿದ ವ್ಯವಸ್ಥೆ ಮಾಸ್ತಿ ಪದ್ಧತಿಗೆ ದಾರಿ ಮಾಡಿಕೊಟ್ಟಿತು. ಈ ಮಾಸ್ತಿಗಳನ್ನು ಸಹಾನುಭೂತಿ ಕಲ್ಲು, ಮದವಳಿಗಕಲ್ಲು, ವ್ಯಾಸನತೋಳು ಮುಂತಾದ ಹೆಸರುಗಳಿಂದ ಕರೆಯುತ್ತಾರೆ"[೧೬೫].

ಈ ದೃಷ್ಠಿಯಿಂದ ಹಾವೇರಿ ಜಿಲ್ಲೆಯಲ್ಲಿ ದೊರೆಯುವ ಶಾಸನಗಳನ್ನು ಆಧರಿಸಿ ಮಾಹಿತಿಯನ್ನು ತಿಳಿಯುವಾಗ ತೇದಿರಹಿತ ಆಲದಕಟ್ಟಿ ಶಾಸನದಲ್ಲಿ[೧೬೬] ಆಲದಕಟ್ಟೆಯ ತಳವರ ಕನಕನ ಹೆಂಡತಿಯ ಮರಣವನ್ನು ವಿವರಿಸುತ್ತದೆ. ತೇದಿರಹಿತ ಕುಂದೂರು ಶಾಸನದಲ್ಲಿ[೧೬೭] ಕಲಾಯಿ ಪತಿಯೊಂದಿಗೆ ಚಿತೆಯೇರಿದ ಉಲ್ಲೇಖ ಕಂಡುಬರುತ್ತದೆ. ತೇದಿರಹಿತ ಶಿಗ್ಗಾಂವ ತಾಲೂಕಿನ ತಡಸ ಶಾಸನದಲ್ಲಿ[೧೬೮] ದ್ಯಾವಮ್ಮನ ಗುಡಿ ಹೊರಗೆ ಮಾಸ್ತಿಕಲ್ಲು ದೊರೆಯುತ್ತದೆ. ಅದರಲ್ಲಿ ಸತಿಕಲ್ಲು ನಿಲ್ಲಿಸಿದ ಉಲ್ಲೇಖ ಕಂಡುಬರುತ್ತದೆ.

ಕ್ರಿ.ಶ. ೧೩ನೇ ಶತಮಾನದ ಹಾನಗಲ್ಲು ತಾಲೂಕಿನ ಕೆಳವರಕೊಪ್ಪ ಶಾಸನದಲ್ಲಿ[೧೬೯] ಕೆಲವೂರಿನ ಬೊಮ್ಮಗೌಡನ ಹೆಂಡತಿ ಬೊಮ್ಮಕ್ಕನ ಸಹಗಮನ ಕಂಡುಬರುತ್ತದೆ. ತೇದಿರಹಿತ ಬಾಳೂರ ಶಾಸನದಲ್ಲಿ[೧೭೦] ಬಾಳೂರ ಮುದ್ದಗೌಡನ ಹೆಂಡತಿಯ ಸಹಗಮನವನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೩ನೇ ಶತಮಾನದ ಮಲ್ಲಿಗಾರ ಶಾಸನದಲ್ಲಿ[೧೭೧] ಈ ಊರ ಗ್ರಾಮದ ಸಿದ್ದರಾಮ ದೇವಾಲಯ ಹತ್ತಿರ ಮಾಸ್ತಿಗಲ್ಲಿನಲ್ಲಿ ಹಾನಗಲ್ಲದ ತೈಲೇಶ್ವರ ದೇವರ ಹಾಗೂ ವ್ಯಕ್ತಿಯೊಬ್ಬನ ವೀರಮರಣದ ಉಲ್ಲೇಖವಿದೆ. ತೇದರಹಿತ ಬ್ಯಾಡಗಿ ತಾಲೂಕಿನ ಚಿನ್ನಿಕಟ್ಟಿ ಶಾಸನದಲ್ಲಿ[೧೭೨] ಪೊಲೆನಾಯಕನ ಮರಣ ಹಾಗೂ ಆತನ ಮೂವರು ಸತಿಯರ ಸಹಗಮನದ ಉಲ್ಲೇಖವಿದೆ. ಕ್ರಿ.ಶ. ೧೩ – ೧೪ ನೇ ಶತಮಾನದ ಸಿಡೇನೂರ ಶಾಸನದಲ್ಲಿ[೧೭೩] ಚನ್ನಪ್ಪನ ವೀರಮರಣ ಹಾಗೂ ಆತನ ಹೆಂಡತಿಯ ಸಹಗಮನದ ತಿಳಿಯುತ್ತದೆ. ತೇದಿ ರಹಿತ ರಾಣೆಬೆನ್ನೂರು ತಾಲೂಕಿನ ಇಟಗಿ ಶಾಸನದಲ್ಲಿ[೧೭೪] ಬೊಪ್ಪಯ್ಯನ ಮರಣ ಮತ್ತು ಆತನ ಹೆಂಡತಿ ಲಿಂಗಮಾಸತಿ ಚಿಮ್ಮಾಯಿಯ ಸಹಗಮನ ಉಲ್ಲೇಖಿಸಿದೆ. ಕ್ರಿ.ಶ. ೧೩೮೧ರ ಭೈರವನಪಾದ ಶಾಸನದಲ್ಲಿ[೧೭೫] ಪಾಲೆಯನಾಯಕ ಮತ್ತು ಸಿಂಗಣದ ಪತ್ನಿಯರ ಸಹಗಮನ ತಿಳಿಯುತ್ತದೆ ಹಾಗೂ ಇದೇ ಗ್ರಾಮದ ಇನ್ನೊಂದು ಮಾಸ್ತಿಗಲ್ಲಿನಲ್ಲಿ ಪೋಚೆಯನಾಯಕನ ಹೆಂಡತಿ ಅಬೆನಾಗತಿಯ ಸಹಗಮನದ ವಿವರವಿದೆ.

ಕ್ರಿ.ಶ. ೧೪೦೫ರ ಹೆಡಿಹಾಳ ಶಾಸನದಲ್ಲಿ[೧೭೬] ನಿಟ್ಟೂರಿನ ಗೋಪಗಾವುಂಡನ ಮಗ ಮರಗಾವುಂಡನ ಸತಿಯ ಸಹಗಮನವನ್ನು ತಿಳಿಸುತ್ತದೆ. ಕ್ರಿ.ಶ. ೧೩ನೇ ಶತಮಾನದ ನಿಡನೇಗಿಲ ಶಾಸನದಲ್ಲಿ[೧೭೭] ಬೀರಗೌಡನ ಮಗ ಮಲೆನಾಯಕನ ಸ್ಮರಣಾರ್ಥವಾಗಿ ನಿಲ್ಲಿಸಿದ ಕಲ್ಲು ಕಂಡುಬರುತ್ತದೆ. ಕ್ರಿ.ಶ. ೧೪೩೮ ಹಿರೇಕೆರೂರು ತಾಲೂಕಿನ ಶಾಸನದಲ್ಲಿ[೧೭೮] ಮಾಕಗೌಡನ ಹೆಂಡತಿಯ ಸಹಗಮನ ಉಲ್ಲೇಖ ಕಂಡುಬರುತ್ತದೆ.

**ನಿಷಧಿಕಲ್ಲು:**

ಜೈನಧರ್ಮದಲ್ಲಿ ಸಲ್ಲೇಖನ ವ್ರತವನ್ನು ಕೈಗೊಂಡು ಆಹಾರವನ್ನು ಸ್ವೀಕರಿಸದೇ ದೇಹವನ್ನು ಬಿಟ್ಟು ಮೋಕ್ಷವನ್ನು ಪಡೆದುದರ ಸ್ಮಾರಕಕ್ಕಾಗಿ ನೆಟ್ಟಿರುವ ಕಲ್ಲುಗಳನ್ನು ನಿಷಧಿಕಲ್ಲು ಎಂದು ಕರೆಯುತ್ತಾರೆ[೧೭೯]. ನಿಷಧಿಕಲ್ಲುಗಳ ಮೇಲೆ ಬರಹ, ಚಿತ್ರ, ಕೇವಲ ಬರಹಗಳು ಕಂಡುಬರುತ್ತವೆ. ಹೀಗಿರುವಾಗ ಇದರಲ್ಲಿ ಮುಖ್ಯವಾಗಿ ಗುರು ಶಿಷ್ಯರ ಸಂಬಂಧ ಕಂಡುಬರುತ್ತದೆ. ಒಂದು ಕಡೆಗೆ ಭೋದಿಸುತ್ತಿರುವ ಗುರು ಮತ್ತೊಂದು ಕಡೆಗೆ ಆಲಿಸುತ್ತಿರುವ ಶಿಷ್ಯ ಇವರ ಇಬ್ಬರ ನಡುವೆ ತೆರೆದ ಪುಸ್ತಕವನ್ನು ಹೊತ್ತ ವ್ಯಾಸಪೀಠ ಈ ರೀತಿಯ ಚಿತ್ರ ಸರ್ವಸಾಮಾನ್ಯವಾಗಿ ಕಂಡುಬರುತ್ತದೆ[೧೮೦].

ಹೀಗೆ ಗುರು ಶಿಷ್ಯರ ನಡುವೆ ಅವಿನಾಭಾವ ಸಂಬಂಧ ಸೂಚಿಸುವ ಇಂತಹ ನಿಷಧಿಕಲ್ಲು ಹಾವೇರಿ ಜಿಲ್ಲೆಯ ಅನೇಕ ಶಾಸನಗಳಲ್ಲಿ ದೊರೆತಿರುವುದನ್ನು ಕಾಣಬಹುದು. ತೇದಿರಹಿತ ಹಾನಗಲ್ಲು ತಾಲೂಕಿನ ಗುಡಗುಡಿ ಶಾಸನದಲ್ಲಿ[೧೮೧] ಸೂರಸ್ತಗಣದ ನಾಗವೆಯ ನಿಷಧಿ ಉಲ್ಲೇಖ ಕಂಡುಬರುತ್ತದೆ. ತೇದಿ ರಹಿತ ಬಾದಮಗಟ್ಟಿ ಶಾಸನದಲ್ಲಿ[೧೮೨] ಬೊಮ್ಮಿಸೆಟ್ಟಿಯ ನಿಷಧಿ ಉಲ್ಲೇಖವಿದೆ.

ಕ್ರಿ.ಶ. ೧೨೦೫ರ ಹಾನಗಲ್ಲು ತಾಲೂಕಿನ ಬಾಳೂರ ಶಾಸನದಲ್ಲಿ[೧೮೩] ಮೇಘಚಂದ್ರ ಭಟ್ಟಾರಕನ ಶಿಷ್ಯಕಸಪಗಾವುಂಡನ ನಿಷಧಿ ದಾಖಲಿಸಿದೆ. ತೇದಿರಹಿತ ಬಾಳೆಹಳ್ಳಿ ಶಾಸನದಲ್ಲಿ[೧೮೪] ಮಾಧವಚಂದ್ರದೇವನ ಶಿಷ್ಯ ಹಾಗೂ ಬಾಳೆಹಳ್ಳಿಯ ನಾಗಗೌಡನ ಹೆಂಡತಿಯಾದ ಸಾಯಿಗೌಡಿಯ ಸಮಾಧಿ ಮರಣದ ವಿವರಿಸಿದೆ. ತೇದಿರಹಿತ ಮಂತರಗಿ ಶಾಸನದಲ್ಲಿ[೧೮೫] ಮಲ್ಲಿಗುಂಡದ ಮಹಾಪ್ರಭು ಮತ್ತು ಸಹಸ್ರಕೀರ್ತಿ ದೇವನ ಶಿಷ್ಯ ವಿದ್ಯಗೌಡನ ಸಮಾಧಿಮರಣ ಉಲ್ಲೇಖವಿದೆ ಹಾಗೂ ಇದೇ ಗ್ರಾಮದ ಇನ್ನೊಂದು ತೇದಿರಹಿತ ಶಾಸನದಲ್ಲಿ ಹರಿಕೇಸರಿ, ಹರಿಕಾಂತ, ತೋಯಿಮರಸರು ಬೇರೆ ಬೇರೆ ಬಸದಿಗಳಿಗೆ ಇಟ್ಟದಾನವನ್ನು ಉಲ್ಲೇಖಿಸಿದೆ. ಬ್ಯಾಡಗಿ ತಾಲೂಕಿನ ಕ್ರಿ.ಶ. ೧೨೭೩ ಹಿರೆಅಣಜಿ ಶಾಸನದಲ್ಲಿ[೧೮೬] ಸ್ತ್ರೀಯೊಬ್ಬಳ ನಿಷಧಿಯ ಮಾಹಿತಿಯ ವಿವರವಿದೆ. ಕ್ರಿ.ಶ. ೧೨೮೧ರ ಹಿರೇಕೆರೂರು ತಾಲೂಕಿನ ಸುತಕೋಟಿ ಶಾಸನದಲ್ಲಿ[೧೮೭] ಬಯಲಬಳ್ಳಿಗಾವೆಯ ಬೋಗಾರ ಕತ್ತಿಯಬೊಮ್ಮಿಸೆಟ್ಟಿಯ ಮಗ ದೇವಿಸೆಟ್ಟಿಯ ಮರಣ ದಾಖಲೆಯಿದೆ. ತೇದಿರಹಿತ ಹಿರೇಕೋಣತಿ ಶಾಸನದಲ್ಲಿ[೧೮೮] ಕಲ್ಯಾಣಕೀರ್ತಿ ಭಟ್ಟಾರಕರ

ಶಿಷ್ಯನೊಬ್ಬನ ಸಮಾಧಿ ಮರಣ ಕುಶಾಸನಚಂದ ತಿಳಿದುಬರುತ್ತದೆ. ಕ್ರಿ.ಶ. ೧೩ನೇ ಶತಮಾನದ ಆಲದಗೇರಿ ಶಾಸನದಲ್ಲಿ[೧೮೯] ಮಾಣಿಕದೇವ ಹಾಗೂ ಮಲ್ಲಯ್ಯಗಳು ಸನ್ಯಾಸನ ವಿಧಿಯಿಂದ ಮರಣ ಹೊಂದಿದ ಉಲ್ಲೇಖವಿದೆ ಹಾಗೂ ಇದೇ ಗ್ರಾಮದ ಮತ್ತೊಂದು ಶಾಸನದಲ್ಲಿ ನಯಕೀರ್ತಿ ಮುನೀಂದ್ರರ ಶಿಷ್ಯ ಮಾಯಕ್ಕಳ ಸಮಾಧಿ ಮರಣ ಹೊಂದಿದ ಉಲ್ಲೇಖ ದೊರೆಯುತ್ತದೆ. ಕ್ರಿ.ಶ. ೧೩೭೬ರ ಸಾವಿಕೇರಿ ಶಾಸನದಲ್ಲಿ[೧೯೦] ಬಾಳೆಹಳ್ಳಿಯ ಬೇಳಪ್ಪನ ನಿಷಧಿ ಇದೆ. ಕ್ರಿ.ಶ. ೧೪ನೇ ಶತಮಾನದ ಹಿರೆಅಣಜಿ ಶಾಸನದಲ್ಲಿ[೧೯೧] ಅಕ್ಕಸಾಲಿ ಸೀಮಾಂಜನ ನಿಷಧಿ ವಿವರವಿದೆ.

ಹೀಗೆ ಮೇಲೆ ತಿಳಿಸಿದ ಎಲ್ಲಾ ಅಂಶಗಳನ್ನು ಗಮನಿಸಿದಾಗ ಹಾವೇರಿ ಜಿಲ್ಲೆಯ ಶಾಸನಗಳಲ್ಲಿ ದೊರೆತ ಮಾಹಿತಿಯನ್ವಯ ಸಾಮಜಿಕ ವ್ಯವಸ್ಥೆಯಲ್ಲಿ ಜಾತಿಪದ್ಧತಿ, ವರ್ಣವ್ಯವಸ್ಥೆ, ಸ್ತ್ರೀಯರ ಸ್ಥಾನಮಾನ, ವಿವಾಹ, ವೀರಗಲ್ಲು, ಮಾಸ್ತಿಕಲ್ಲು ಮತ್ತು ನಿಷಧಿಕಲ್ಲುಗಳ ಬಗ್ಗೆ ವಿವರವಾಗಿ ಚರ್ಚಿಸಲಾಗಿದೆ.

**ಟಿಪ್ಪಣಿಗಳು:**

೧. ಚಿದಾನಂದ ಮೂರ್ತಿ ಎಂ., ೨೦೦೮, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ. ೪೫೪.

೨. ತಿಪ್ಪೇರುದ್ರಸ್ವಾಮಿ ಎಚ್., ೨೦೧೧, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಮೈಸೂರು, ಪುಟ. ೨೦೬-೨೦೭.

೩. ಶರ್ಮ ಆರ್.ಎಸ್., ೧೯೫೮, ಶೂದ್ರ ಇನ್ ಎನಿಷಿಯಂಟ್ ಇಂಡಿಯಾ, ಪುಟ. - ೨೮.

೪. ಕೊಪ್ಪ ಎಸ್. ಕೆ., ೧೯೯೯, ತರ್ದವಾಡಿನಾಡು - ಒಂದು ಅಧ್ಯಯನ, ಪ್ರತಿಭಾ ಪ್ರಕಾಶನ, ಇಂಡಿ, ಪುಟ. - ೧೫೨.

೫. ದಾ.ಜಿ.ಶಾ.ಸೂ, ಶಾ.ಸಂ. ೧೮೮, ಪುಟ. ೪೯.

೬. ದಾ.ಜಿ.ಶಾ.ಸೂ, ಶಾ.ಸಂ. ೨೮, ಪುಟ. ೪೪.

೭. ದಾ.ಜಿ.ಶಾ.ಸೂ, ಶಾ.ಸಂ. ೧೫೫, ಪುಟ. ೭೫ ಹಾಗೂ ಕೆ.ಆರ್.ಐ. ಪಿ.ಆರ್. ೧೯೫೩-೫೭, ಪುಟ. ೭೩.

೮. ಕ.ಇ.ಸಂ.VI. ಪುಟ ೫೩.

೯. ಧಾ.ಜಿ.ಶಾ.ಸೂ., ಶಾ.ಸಂ. ೬೬, ಪುಟ. ೮೦.

೧೦. ಕ.ಇ.ಸಂ.VI. III ಪುಟ. ೪೧.

೧೧. ಧಾ.ಜಿ.ಶಾ.ಸೂ., ಶಾ.ಸಂ. - ೩೮, ಪು. ೪೪.

೧೨. ಕ.ಇ.ಸಂ. VI. ಪುಟ ೫೬.

೧೩. ತಿಪ್ಪೇರುದ್ರಸ್ವಾಮಿ ಎಚ್., ೨೦೧೧, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಮೈಸೂರು, ಪುಟ. ೨೦೭-೨೦೮.

೧೪. ಕ.ಇ.ಸಂ.೪, ಪು. - ೩೩, ಕ್ರಿಶ. ೧೦೭೯.

೧೫. ಕ.ಇ.ಸಂ. II. ಪುಟ ೧೭, ಎಫಿ.ಇಂ.ಸಂ. XIII, .ಪುಟ. ೧೭೦.

೧೬. ಧಾ.ಜಿ.ಶಾ.ಸೂ. ಶಾ.ಸಂ. ೮೯, ಪುಟ ೬೧.

೧೭ ಧಾ.ಜಿ.ಶಾ.ಸೂ. ಶಾ.ಸಂ., ೩೨೨, ಪುಟ. ೬೯.

೧೮. ಧಾ.ಜಿ.ಶಾ.ಸೂ., ಶಾ.ಸಂ., ೩೩೨, ಪುಟ. ೬೯.

೧೯. ಕ.ಇ.ಸಂ. - IV ಪುಟ 53.

೨೦. ಎಸ್.ಎಸ್.ಐ.ಸಂ. XX, ಪುಟ 113

೨೧. ಎಸ್.ಎಸ್.ಐ.ಸಂ. XX, 114

೨೨. ಕ.ಇ.ಸಂ. - IV 15, M.A.R 1928, ಪುಟ. 77.

೨೩. ಕ.ಇ.ಸಂ. - IV 20, M.A.R 1928, ಪುಟ. 80.

೨೪. ಕ.ಇ.ಸಂ. - IV ಪುಟ 34.

೨೫. ಕ.ಇ.ಸಂ. - VI ಪುಟ 18.

೨೬. ಧಾ.ಜಿ.ಶಾ.ಸೂ. ಶಾ.ಸಂ., ೨೪೩, ಪುಟ. ೭೯.

೨೭. K.K. ಪುಟ. 454-56, ಧಾ.ಜಿ.ಶಾ.ಸೂ. ಶಾ.ಸಂ., ೩೦೧, ಪುಟ. ೬೮.

೨೮. ಕ.ಇ.ಸಂ. IV, ಪುಟ 1.

೨೯. ಎಸ್.ಎಸ್.ಐ.ಸಂ. XX. ಪುಟ 228.

೩೦. ಧಾ.ಜಿ.ಶಾ.ಸೂ. ಶಾ.ಸಂ., ೩೧, ಪುಟ. ೨೮.

೩೧. ಕ.ಇ.ಸಂ.VI 42, K.K. ಪುಟ. 460-65.

೩೨. ಕ.ಇ.ಸಂ.VI. 43, K.K. ಪುಟ. 46-65.

೩೩. ಕ.ಇ.ಸಂ.VI ಪುಟ 44.

೩೪. ಧಾ.ಜಿ.ಶಾ.ಸೂ. ಶಾ.ಸಂ., ೧೦೨, ಪುಟ. ೫೨.

೩೫. ಕ.ಇ.ಸಂ.VI ಪುಟ 2.

೩೬. ಧಾ.ಜಿ.ಶಾ.ಸೂ. ಶಾ.ಸಂ., ೨೩, ಪುಟ. ೪೩.

೩೭. ಧಾ.ಜಿ.ಶಾ.ಸೂ. ಶಾ.ಸಂ., ೨೨, ಪುಟ. ೪೫.

೩೮. ಧಾ.ಜಿ.ಶಾ.ಸೂ. ಶಾ.ಸಂ., ೨೪೪, ಪುಟ. ೭೯.

೩೯. ಧಾ.ಜಿ.ಶಾ.ಸೂ. ಶಾ.ಸಂ., ೧೮೬, ಪುಟ. ೬೪.

೪೦. ಧಾ.ಜಿ.ಶಾ.ಸೂ. ಶಾ.ಸಂ., ೧೯೫, ಪುಟ. ೬೪.

೪೧. ಧಾ.ಜಿ.ಶಾ.ಸೂ. ಶಾ.ಸಂ., ೨೦೫, ಪುಟ. ೬೫.

೪೨. ಧಾ.ಜಿ.ಶಾ.ಸೂ. ಶಾ.ಸಂ., ೨೩೨, ಪುಟ. ೬೬.

೪೩. ಧಾ.ಜಿ.ಶಾ.ಸೂ. ಶಾ.ಸಂ., ೨೭೨, ಪುಟ. ೬೭.

೪೪. ಧಾ.ಜಿ.ಶಾ.ಸೂ. ಶಾ.ಸಂ., ೩೦೩, ಪುಟ. ೬೮.

೪೫. ಧಾ.ಜಿ.ಶಾ.ಸೂ. ಶಾ.ಸಂ., ೭೩, ಪುಟ. ೭೨.

೪೬. ಧಾ.ಜಿ.ಶಾ.ಸೂ. ಶಾ.ಸಂ., ೧೨೩, ಪುಟ. ೭೪.

೪೭. ಧಾ.ಜಿ.ಶಾ.ಸೂ. ಶಾ.ಸಂ., ೧೪೪, ಪುಟ. ೭೫.

೪೮. ಧಾ.ಜಿ.ಶಾ.ಸೂ. ಶಾ.ಸಂ., ೩೩, ಪುಟ. ೫೯.

೪೯. ಧಾ.ಜಿ.ಶಾ.ಸೂ. ಶಾ.ಸಂ., ೨೩, ಪುಟ. ೪೩.

೫೦. ಧಾ.ಜಿ.ಶಾ.ಸೂ. ಶಾ.ಸಂ., ೧೫೦, ಪುಟ. ೩೨.

೫೧. ಎಸ್.ಎಸ್.ಐ.ಸಂ. XX , ಪುಟ 332.

೫೨. ಧಾ.ಜಿ.ಶಾ.ಸೂ. ಶಾ.ಸಂ., ೫೩, ಪುಟ. ೫೧.

೫೩. ಕೃಷ್ಣರಾವ್ ಎಂ.ವಿ., ಕೇಶವಭಟ್ಟ, ೧೯೭೦, ಕರ್ನಾಟಕ ಇತಿಹಾಸ ದರ್ಶನ, ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಬೆಂಗಳೂರು, ಪುಟ. ೯೬೭.

೫೪. ಧಾ.ಜಿ.ಶಾ.ಸೂ. ಶಾ.ಸಂ., ೧೦೨, ಪುಟ. ೭೩.

೫೫. ಕ.ಇ.ಸಂ.I. ಪುಟ. ೧೯.

೫೬. ಧಾ.ಜಿ.ಶಾ.ಸೂ. ಶಾ.ಸಂ., ೧೮, ಪುಟ. ೫೪.

೫೭. ಕ.ಇ.ಸಂ.VI 34.

೫೮. ಧಾ.ಜಿ.ಶಾ.ಸೂ. ಶಾ.ಸಂ., ೨೪೩, ಪುಟ. ೭೯.

೫೯. ಅದೇ. ಶಾ.ಸಂ., ೩೦೧, ಪುಟ. ೬೮.

೬೦. ಕ.ಇ.ಸಂ.VI 42, K.K. ಪುಟ. 460-65.

೬೧. ಕ.ಇ.ಸಂ.VI 43, K.K. ಪುಟ. 460-65.

೬೨. ಕ.ಇ.ಸಂ.VI ಪುಟ. 44.

೬೩. ಧಾ.ಜಿ.ಶಾ.ಸೂ. ಶಾ.ಸಂ., ೧೦೨, ಪುಟ. ೫೩.

೬೪. ಧಾ.ಜಿ.ಶಾ.ಸೂ. ಶಾ.ಸಂ., ೨೨೪, ಪುಟ. ೭೯.

೬೫. ಧಾ.ಜಿ.ಶಾ.ಸೂ. ಶಾ.ಸಂ., ೧೮೬, ಪುಟ. ೬೪.

೬೬. ಧಾ.ಜಿ.ಶಾ.ಸೂ. ಶಾ.ಸಂ., ೨೭೨, ಪುಟ. ೬೭.

೬೭. ಧಾ.ಜಿ.ಶಾ.ಸೂ. ಶಾ.ಸಂ., ೩೦೩, ಪುಟ. ೬೮.

೬೮. ಧಾ.ಜಿ.ಶಾ.ಸೂ. ಶಾ.ಸಂ., ೧೨೩, ಪುಟ. ೭೪.

೬೯. ಧಾ.ಜಿ.ಶಾ.ಸೂ. ಶಾ.ಸಂ., ೧೪೪, ಪುಟ. ೭೫.

೭೦. ಧಾ.ಜಿ.ಶಾ.ಸೂ. ಶಾ.ಸಂ., ೨೩, ಪುಟ. ೧೪೩.

೭೧. ಎಸ್.ಎಸ್.ಐ.ಸಂ. XX 332.

೭೨. ಫಣೀಕರ್ ಕೆ.ಎಂ. – ಭಾರತದ ಮಹಿಳೆಯರು ಉಲ್ಲೇಖ, ಕೃಷ್ಣಮೂರ್ತಿ ಎನ್. ೧೯೮೫, ಭಾರತಿಯನಾರಿ ಮತ್ತು ಸಮಾನತೆ, ಪುಟ. ೧೪.

೭೩. ಚಿದಾನಂದ ಮೂರ್ತಿ ಎಂ., ೨೦೦೮, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ. ೪೫೪.

೭೪. ಮಾನವಿಕ ಕರ್ನಾಟಕ, ಸಂಪುಟ – ೩೭, ಸಂಚಿಕೆ – ೪, ೨೦೦೯, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪುಟ–೬.

೭೫. ಎಫಿ.ಇಂ.ಸಂ. XXXIII, ಪುಟ. ೩೧೭–೨೪.

೭೬. ದಾ.ಜಿ.ಶಾ.ಸೂ.ಶಾ.ಸಂ. – ೭೬, ಪುಟ. ೪೫.

೭೭. ಎಸ್.ಎಸ್.ಐ.ಸಂ. XX, ಪುಟ – ೭೬, ಕ್ರಿ.ಶ. ೧೦೧೮.

೭೮. ಅದೇ, ಸಂ.ಪುಟ – ೮೨, ಕ್ರಿ.ಶ. ೧೦೧೨.

೭೯. ಅದೇ, ಸಂ.ಪುಟ– ೮೪, ಕ್ರಿ.ಶ. ೧೦೨೩.

೮೦. ಎಫಿ.ಇಂ.ಸಂ.XV, ಪುಟ.. 331-36, ಧಾ.ಜಿ.ಶಾ.ಸೂ. ಶಾ.ಸಂ., ೪೨, ಪುಟ. ೪೪.

೮೧. ಧಾ.ಜಿ.ಶಾ.ಸೂ. ಶಾ.ಸಂ., ೨೮, ಪುಟ. ೫೯.

೮೨. ಧಾ.ಜಿ.ಶಾ.ಸೂ. ಶಾ.ಸಂ., ೩೦, ಪುಟ. ೪೪.

೮೩. ಎಫಿ.ಇಂ.ಸಂ. XVI ಪುಟ. 75-81.

೮೪. ಎಫಿ.ಇಂ.ಸಂ.XIX ಪುಟ. – 180-83, KK ಪುಟ. 434-37.

೮೫. ಧಾ.ಜಿ.ಶಾ.ಸೂ. ಶಾ.ಸಂ., ೧೦೨, ಪುಟ. ೬೧.

೮೬. ಹಿರೇಮಠ ಬಿ.ಆರ್., ೨೦೧೨, ಶಾಸನ ಅಧ್ಯಯನ, ಕನ್ನಡ ವಿಶ್ವವಿದ್ಯಾನಿಲಯ ಹಂಪಿ, ಪುಟ ೪೩–೪೪.

೮೭. ಧಾ.ಜಿ.ಶಾ.ಸೂ. ಶಾ.ಸಂ., ೬೫, ಪುಟ. ೫೨.

೮೮. ಧಾ.ಜಿ.ಶಾ.ಸೂ. ಶಾ.ಸಂ., ೧೦೫, ಪುಟ. ೫೩.

೮೯. ಎಸ್.ಎಸ್.ಐ.ಸಂ. XX 10, ಧಾ.ಜಿ.ಶಾ.ಸೂ. ಶಾ.ಸಂ., ೯೩.

೯೦. ಎಸ್.ಎಸ್.ಐ.ಸಂ. XX ಧಾ.ಜಿ.ಶಾ.ಸೂ. ಶಾ.ಸಂ., ೪೯, ೧೦೭೬.

೯೧. A.R.I.E 1949-50, ಪುಟ. – 72, 1103.

೯೨. I.A.X ಪುಟ. 249 – 55.

೯೩. ಧಾ.ಜಿ.ಶಾ.ಸೂ. ಶಾ.ಸಂ., ೨೫೫, ಪುಟ. ೭೬.

೯೪. ಎಫಿ.ಇಂ.ಸಂ. XIX ಪುಟ. 183-87.

೯೫. ಧಾ.ಜಿ.ಶಾ.ಸೂ. ಶಾ.ಸಂ., ೮೬, ಪುಟ. ೪೬.

೯೬. ಅದೇ, ಶಾ.ಸಂ. ೮೭, ಪುಟ. ೪೬.

೯೭. ಧಾ.ಜಿ.ಶಾ.ಸೂ. ಶಾ.ಸಂ., ೨೦೧, ಪುಟ. ೪೯.

೯೮. ಧಾ.ಜಿ.ಶಾ.ಸೂ. ಶಾ.ಸಂ., ೪೯, ಪುಟ. ೨೮.

೯೯. ಧಾ.ಜಿ.ಶಾ.ಸೂ. ಶಾ.ಸಂ., ೮೨, ಪುಟ. ೫೭.

೧೦೦. ಧಾ.ಜಿ.ಶಾ.ಸೂ. ಶಾ.ಸಂ., ೧೪೯, ಪುಟ. ೬೩.

೧೦೧. ಧಾ.ಜಿ.ಶಾ.ಸೂ. ಶಾ.ಸಂ., ೧೮೩, ಪುಟ. ೩೩.

೧೦೨. ಕ.ಇ.ಸಂ. ೪೧, ಸಾತೇನಹಳ್ಳಿ ೧೨೦೪.

೧೦೩. ಕ.ಇ.ಸಂ. VI ಪುಟ. 54.

೧೦೪. ಧಾ.ಜಿ.ಶಾ.ಸೂ. ಶಾ.ಸಂ., ೬೯, ಪುಟ. ೫೨.

೧೦೫. ಎಸ್.ಎಸ್.ಐ.ಸಂ. XX 221.

೧೦೬. ಧಾ.ಜಿ.ಶಾ.ಸೂ. ಶಾ.ಸಂ., ೯೩, ಪುಟ. ೫೭

೧೦೭. ಕ.ಇ.ಸಂ. ೫, ಸ-೧೯, ೧೧೨೧.

೧೦೮. ಕೊಪ್ಪ ಎಸ್.ಕೆ, ೧೯೯೯, ತರ್ಧವಾಡಿನಾಡು – ಒಂದು ಅಧ್ಯಯನ, ಪ್ರತಿಭಾ ಪ್ರಕಾಶನ, ಇಂಡಿ, ಪುಟ ೧೬೧.

೧೦೯. ಚನ್ನಕ್ಕ ಎಲಿಗಾರ, ೧೯೯೦, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪುಟ 15.

೧೧೦. ಎದುರ್ಕಳೆ ಕೆ. ಶಂಕರಾಯಭಟ್ಟ – ೧೯೮೨, ಹಿಂದೂ ಧರ್ಮದ ಪರಿಚಯ, ರಾಮಕೃಷ್ಣ ಪ್ರಕಾಶನ, ಭಾಗಮಂಡಲ, ಪುಟ – ೨೪೦.

೧೧೧. ತಿಪ್ಪೇರುದ್ರಸ್ವಾಮಿ ಎಚ್., ೨೦೧೦, ಕರ್ನಾಟಕ ಸಾಂಸ್ಕೃತಿಕ ಸಮೀಕ್ಷೆ, ಬೆಂಗಳೂರು, ಪುಟ. ೨೪೦.

೧೧೨. ಆಚಾರ್ಯ ಪಿ.ಕೆ–೧೯೨೭, ಎ ಡಿಕ್ಷನರಿ ಆಫ್ ಹಿಂದೂ ಆರ್ಕಿಟೆಕ್ಚರ್, ಆಕ್ಸ್‌ಫರ್ಡ್ ಯೂನಿವರ್ಸಟಿ ಪ್ರೆಸ್, ಮದ್ರಾಸ್, ಪುಟ. ೫೬೧.

೧೧೩. ಶೇಷಶಾಸ್ತ್ರಿ ಆರ್. ೨೦೦೪, ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ಪುಟ. ೫.

೧೧೪. ಪರಮಶಿವಮೂರ್ತಿ ಡಿ.ವಿ. ೨೦೦೯, ಕನ್ನಡ ಶಾಸನ ಶಿಲ್ಪ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪುಟ. ೭೭.

೧೧೫. ಚಿದಾನಂದ ಮೂರ್ತಿ ಎಂ., ೨೦೦೮, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ. ೩೩೦.

೧೧೬. ಎಫಿ.ಇಂ.ಸಂ.VI ಪುಟ. 160-62.

೧೧೭. ಧಾ.ಜಿ.ಶಾ.ಸೂ. ಶಾ.ಸಂ., ೯೫, ಪುಟ. ೪೪.

೧೧೮. ಎಫಿ.ಇಂ.ಸಂ.XXXIII ಪುಟ. 257-58.

೧೧೯. ಎಸ್.ಎಸ್.ಐ.XX ಪುಟ. 14.

೧೨೦. ಧಾ.ಜಿ.ಶಾ.ಸೂ.ಶಾ.ಸಂ., ೨೨೭, ಪುಟ. ೬೪.

೧೨೧. ಧಾ.ಜಿ.ಶಾ.ಸೂ.ಶಾ.ಸಂ., ೩೮, ಪುಟ. ೪೪.

೧೨೨. ಧಾ.ಜಿ.ಶಾ.ಸೂ.ಶಾ.ಸಂ., ೨೩೫, ಪುಟ. ೭೮.

೧೨೩. ಧಾ.ಜಿ.ಶಾ.ಸೂ.ಶಾ.ಸಂ., ೧೮೯, ಪುಟ. ೪೯.

೧೨೪. ಧಾ.ಜಿ.ಶಾ.ಸೂ.ಶಾ.ಸಂ., ೫೧, ಪುಟ. ೨೮.

೧೨೫. ಧಾ.ಜಿ.ಶಾ.ಸೂ.ಶಾ.ಸಂ., ೧೦೩, ಪುಟ. ೭೩.

೧೨೬. ಕ.ಇ.ಸಂ.III 17, ಕ.ಇ.ಸಂ.V. 22.

೧೨೭. ಧಾ.ಜಿ.ಶಾ.ಸೂ. ಶಾ.ಸಂ., ೨೮, ೨೯, ಪುಟ. ೫೯.

೧೨೮. ನಾಗಯ್ಯ ಜೆ.ಎಂ., ೧೯೯೫, ಕಲಕೇರಿ, ಬಸವೇಶ್ವರ ದೇವಸ್ಥಾನ ಜೀರ್ಣೋದ್ಧಾರ ಕಮಿಟಿ, ಕಲಗೇರಿ, ಪುಟ. ೫೫.

೧೨೯. ಕ.ಇ.ಸಂ.IX ಪುಟ. 43.

೧೩೦. ಕ.ಇ.ಸಂ.IV ಪುಟ. 20, M.A.R. 1928, ಪುಟ.. 80.

೧೩೧. ಕ.ಇ.ಸಂ.VI. ಪುಟ. 34.

೧೩೨. ಕ.ಇ.ಸಂ.IV. ಪುಟ. 19.

೧೩೩. ಧಾ.ಜಿ.ಶಾ.ಸೂ. ಶಾ.ಸಂ., ೧೩೨, ಪುಟ. ೭೪.

೧೩೪. ನಾಗಯ್ಯ ಜೆ.ಎಂ., ಕಲಕೇರಿ, ೧೯೯೫, ಬಸವೇಶ್ವರ ಟ್ರಸ್ಟ್ (ರಿ.) ಕಲಕೇರಿ, ಹಾನಗಲ್ಲು ತಾಲೂಕು, ಹಾವೇರಿ ಜಿಲ್ಲೆ, ಪುಟ. ೫೭.

೧೩೫. ಅದೇ, ಪುಟ. ೫೪.

೧೩೬. ಧಾ.ಜಿ.ಶಾ.ಸೂ. ಶಾ.ಸಂ., ೭೧, ಪುಟ. ೭೩.

೧೩೭. ಧಾ.ಜಿ.ಶಾ.ಸೂ. ಶಾ.ಸಂ., ೧೭, ಪುಟ. ೫೯.

೧೩೮. ಕ.ಇ.ಸಂ.V. ಪುಟ. ೧೦೩.

೧೩೯. ಧಾ.ಜಿ.ಶಾ.ಸೂ. ಶಾ.ಸಂ., ೫, ಪುಟ. ೭೦.

೧೪೦. ಧಾ.ಜಿ.ಶಾ.ಸೂ. ಶಾ.ಸಂ., ೨೫೦, ಪುಟ. ೭೯.

೧೪೧. ಕ.ಇ.ಸಂ.IV. ಪುಟ. ೪.

೧೪೨. ಧಾ.ಜಿ.ಶಾ.ಸೂ. ಶಾ.ಸಂ., ೮೦, ಪುಟ. ೭೩.

೧೪೩. ಕ.ಇ.ಸಂ.IV ಪುಟ. ೧೯.

೧೪೪. ಎಫಿ.ಇಂ.ಸಂ.V ಪುಟ. ೨೬೧-೬೫.

೧೪೫. ಧಾ.ಜಿ.ಶಾ.ಸೂ. ಶಾ.ಸಂ., ೧೧, ಪುಟ. ೫೪.

೧೪೬. ಧಾ.ಜಿ.ಶಾ.ಸೂ. ಶಾ.ಸಂ., ೧೦೯, ಪುಟ. ೭೪.

೧೪೭. ಧಾ.ಜಿ.ಶಾ.ಸೂ. ಶಾ.ಸಂ., ೨, ೩, ಪುಟ. ೫೫.

೧೪೮. ಧಾ.ಜಿ.ಶಾ.ಸೂ. ಶಾ.ಸಂ., ೩೨, ೩೩, ಪುಟ. ೪೪.

೧೪೯. ಧಾ.ಜಿ.ಶಾ.ಸೂ. ಶಾ.ಸಂ., ೧೦೨, ಪುಟ. ೫೩.

೧೫೦. ಧಾ.ಜಿ.ಶಾ.ಸೂ. ಶಾ.ಸಂ., ೨೦೨, ಪುಟ. ೪೯.

೧೫೧. ಧಾ.ಜಿ.ಶಾ.ಸೂ. ಶಾ.ಸಂ., ೧೨, ೧೩, ಪುಟ. ೫೪.

೧೫೨. ಧಾ.ಜಿ.ಶಾ.ಸೂ. ಶಾ.ಸಂ., ೫೩, ಪುಟ. ೫೫.

೧೫೩. ಧಾ.ಜಿ.ಶಾ.ಸೂ. ಶಾ.ಸಂ., ೫೭, ೬೩, ೭೩ ಪುಟ. ೫೬.

೧೫೪. ಧಾ.ಜಿ.ಶಾ.ಸೂ. ಶಾ.ಸಂ., ೧೯೨, ಪುಟ. ೪೯.

೧೫೫. ಧಾ.ಜಿ.ಶಾ.ಸೂ. ಶಾ.ಸಂ., ೭, ೨೨, ಪುಟ. ೫೦.

೧೫೬. ಧಾ.ಜಿ.ಶಾ.ಸೂ. ಶಾ.ಸಂ., ೬೫, ಪುಟ. ೭೨.

೧೫೭. ಕ.ಇ.ಸಂ.V ಪುಟ. ೬೧.

೧೫೮. ಕ.ಇ.ಸಂ.II ಪುಟ. ೧.

೧೫೯. ಧಾ.ಜಿ.ಶಾ.ಸೂ. ಶಾ.ಸಂ., ೧೬೨, ಪುಟ. ೩೨.

೧೬೦. ಧಾ.ಜಿ.ಶಾ.ಸೂ. ಶಾ.ಸಂ., ೯, ಪುಟ. ೪೩.

೧೬೧. ಧಾ.ಜಿ.ಶಾ.ಸೂ. ಶಾ.ಸಂ., ೨೭೧, ಪುಟ. ೬೭.

೧೬೨. ಚನ್ನಕ್ಕ ಎಲಿಗಾರ–೧೯೯೦, ಕರ್ನಾಟಕ ಶಾಸನಗಳಲ್ಲಿ ಸ್ತ್ರೀ ಸಮಾಜ, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪುಟ. ೨೩೩.

೧೬೩. ಶೇರೆ ಬಿ.ಎಸ್–೧೯೯೧, ಕರ್ನಾಟಕದಲ್ಲಿ ಸತಿ ಪದ್ಧತಿ, ವೀರಶೈವ ಅಧ್ಯಯನ ಅಕಾಡೆಮಿ, ನಾಗನೂರು ರುದ್ರಾಕ್ಷಿಮಠ, ಬೆಳಗಾವಿ, ಪುಟ ೧೧–೩೬.

೧೬೪. ನಿರಂಜನ, ಜ್ಞಾನಗಂಗೋತ್ರಿ, ಸಂಪುಟ – ೧, ಪುಟ. ೪೮೮.

೧೬೫. ರಾಧ ಆರ್.ಕೆ., ಕನ್ನಡನುಡಿ, ಪುಟ. ೧೯.

೧೬೬. ಧಾ.ಜಿ.ಶಾ.ಸೂ. ಶಾ.ಸಂ., ೩೭, ಪುಟ. ೭೧.

೧೬೭. ಧಾ.ಜಿ.ಶಾ.ಸೂ. ಶಾ.ಸಂ., ೧೬, ಪುಟ. ೨೭.

೧೬೮. ಧಾ.ಜಿ.ಶಾ.ಸೂ. ಶಾ.ಸಂ., ೩೫, ಪುಟ. ೨೮.

೧೬೯. ಧಾ.ಜಿ.ಶಾ.ಸೂ. ಶಾ.ಸಂ., ೭೩, ಪುಟ. ೬೦.

೧೭೦. ಧಾ.ಜಿ.ಶಾ.ಸೂ. ಶಾ.ಸಂ., ೧೭೮, ಪುಟ. ೬೪.

೧೭೧. ಧಾ.ಜಿ.ಶಾ.ಸೂ. ಶಾ.ಸಂ., ೨೪೬, ಪುಟ. ೬೬.

೧೭೨. ಧಾ.ಜಿ.ಶಾ.ಸೂ. ಶಾ.ಸಂ., ೫೦, ಪುಟ. ೫೧.

೧೭೩. ಧಾ.ಜಿ.ಶಾ.ಸೂ. ಶಾ.ಸಂ., ೫೦, ಪುಟ. ೫೧, ಎಸ್.ಎಸ್.ಐ.ಸಂ. XX ಪುಟ. 356.

೧೭೪. ಧಾ.ಜಿ.ಶಾ.ಸೂ. ಶಾ.ಸಂ., ೧೫, ಪುಟ. ೫೪.

೧೭೫. ಧಾ.ಜಿ.ಶಾ.ಸೂ. ಶಾ.ಸಂ., ೧೫೭, ಪುಟ. ೭೬.

೧೭೬. ಧಾ.ಜಿ.ಶಾ.ಸೂ. ಶಾ.ಸಂ., ೯೩, ಪುಟ. ೫೭.

೧೭೭. ಧಾ.ಜಿ.ಶಾ.ಸೂ. ಶಾ.ಸಂ., ೧೫೩, ಪುಟ. ೭೫.

೧೭೮. ಧಾ.ಜಿ.ಶಾ.ಸೂ. ಶಾ.ಸಂ., ೨೭೩, ಪುಟ. ೮೦, ಕ.ಇ.ಸಂ.IV.27

೧೭೯. ಚಿದಾನಂದ ಮೂರ್ತಿ ಎಂ., ೨೦೦೮, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ. ೧೦೭.

೧೮೦. ಚನ್ನಕ್ಕ ಎಲಿಗಾರ, ಕೆ. ಶಾಸ್ತ್ರಿ, ಪುಟ. ೨೩೦.

೧೮೧. ಧಾ.ಜಿ.ಶಾ.ಸೂ. ಶಾ.ಸಂ., ೯೧, ಪುಟ. ೬೧.

೧೮೨. ಧಾ.ಜಿ.ಶಾ.ಸೂ. ಶಾ.ಸಂ., ೧೬೦, ಪುಟ. ೬೩.

೧೮೩. ಕ.ಇ.ಸಂ.V. ಪುಟ ೪೭.

೧೮೪. ಧಾ.ಜಿ.ಶಾ.ಸೂ. ಶಾ.ಸಂ., ೧೯೪, ಪುಟ. ೬೪.

೧೮೫. ಧಾ.ಜಿ.ಶಾ.ಸೂ. ಶಾ.ಸಂ., ೨೩೯, ಪುಟ. ೬೬.

೧೮೬. ಧಾ.ಜಿ.ಶಾ.ಸೂ. ಶಾ.ಸಂ., ೧೦೩, ಪುಟ. ೫೩.

೧೮೭. ಧಾ.ಜಿ.ಶಾ.ಸೂ. ಶಾ.ಸಂ., ೨೪೪, ಪುಟ. ೭೯.

೧೮೮. ಧಾ.ಜಿ.ಶಾ.ಸೂ. ಶಾ.ಸಂ., ೨೭೯, ಪುಟ. ೮೦.

೧೮೯. ಧಾ.ಜಿ.ಶಾ.ಸೂ. ಶಾ.ಸಂ., ೪೧, ಪುಟ. ೭೧.

೧೯೦. ಧಾ.ಜಿ.ಶಾ.ಸೂ. ಶಾ.ಸಂ., ೨೮೧, ಪುಟ. ೬೭.

೧೯೧. ಧಾ.ಜಿ.ಶಾ.ಸೂ. ಶಾ.ಸಂ., ೧೦೮, ಪುಟ. ೫೩.

# ಅಧ್ಯಾಯ – ೬

## ಧಾರ್ಮಿಕ ವ್ಯವಸ್ಥೆ

- ಬೌದ್ಧ ಧರ್ಮ
- ಜೈನ ಧರ್ಮ
- ಶೈವ ಸಂಪ್ರದಾಯ
- ಕಾಳಮುಖರು
- ವೀರಶೈವ ಸಂಪ್ರದಾಯ
- ವೈಷ್ಣವ ಸಂಪ್ರದಾಯ
- ವಿದ್ಯಾಭ್ಯಾಸ
- ಅಗ್ರಹಾರ
- ಮಠಗಳು

# ಧಾರ್ಮಿಕ ವ್ಯವಸ್ಥೆ

ಮಾನವನ ಸಾಂಸ್ಕೃತಿಕ ಬದುಕಿನ ಜೀವನಾಡಿ ಧರ್ಮ. ಮುಖ್ಯವಾಗಿ ಧರ್ಮವೇ ಭಾರತೀಯರ ಸಂಸ್ಕೃತಿಯ ಬದುಕಿಗೆ ಮಾರ್ಗದರ್ಶಿ. ಹೀಗಿರುವಾಗ ಭಾರತದಲ್ಲಿ ಕ್ರಿ.ಪೂ.ದಿಂದಲೇ ಅಸ್ಥಿತ್ವದಲ್ಲಿದ್ದ ಸನಾತನ ಧರ್ಮವು ನಂತರದಲ್ಲಿ ತನ್ನ ಸ್ವರೂಪದಲ್ಲಿ ಹಲವಾರು ಬದಲಾವಣೆಗಳನ್ನು ಹೊಂದಿತ್ತು. ಅಂದರೆ ಆಚಾರ ವಿಚಾರಗಳು ಪರಿವರ್ತನೆಗೊಂಡು ಅನೇಕ ಧರ್ಮಗಳಾಗಿ ಪರಿಣಮಿಸಿದವು. ಕರ್ನಾಟಕ ತನ್ನ ಜೀವನದ ಎಲ್ಲಾ ಮುಖಗಳಲ್ಲಿಯೂ ಧರ್ಮವನ್ನು ಅಳವಡಿಸಿಕೊಂಡಿತು. ವೇದ ಉಪನಿಷತ್ತುಗಳು, ಆಗಮ ಸ್ಮೃತಿಗಳು, ಇತಿಹಾಸ, ಪುರಾಣಗಳು, ನಿರೂಪಿಸಿದ ಮತ್ತು ರೂಪಿಸಿದ ಭಾರತೀಯ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿ ಇದು ಬೆಳೆದುದಲ್ಲದೆ ಆ ಪರಂಪರೆಯನ್ನು ಬೆಳೆಸುವುದಕ್ಕೆ ತನ್ನ ಕೊಡುಗೆಯನ್ನು ನೀಡಿತು[೧]. ಹೀಗಾಗಿ ಪ್ರಾಚೀನ ಕಾಲದಿಂದಲೂ ವಿವಿಧ ಧರ್ಮಗಳು ಬೆಳೆದು ಬಂದು ಜನತೆಯ ಧಾರ್ಮಿಕ ಶ್ರದ್ಧೆ. ಧಾರ್ಮಿಕ ಸಮನ್ವಯತೆ, ಔದಾರ್ಯಗಳನ್ನು ಕಾಣುತ್ತೇವೆ. ಇಲ್ಲಿನ ನೆಲ, ಜಲ, ವಾಯು ಹಾಗೂ ಸೂಕ್ತ ವಾತಾವರಣ ಪ್ರಾಚೀನ ಕಾಲದಿಂದಲೂ ವಿವಿಧ ಧಾರ್ಮಿಕ ನಂಬಿಕೆಗಳನ್ನು ಹಾಗೂ ಧರ್ಮಗಳನ್ನು ಆಕರ್ಷಿಸುತ್ತಿತ್ತು. ಕರ್ನಾಟಕದಲ್ಲಿ ಕ್ರಿ.ಪೂ.ದಿಂದಲೂ ಜನಜೀವನ ಉತ್ತಮಗುಣಮಟ್ಟವನ್ನು ಹೊಂದಿತ್ತು ಎಂಬುದು ಇಲ್ಲಿನ ಬೃಹತ್ ಶಿಲಾಯುಗದ ಸಾಂಸ್ಕೃತಿಕ ನೆಲೆಗಳಿಂದ ಅಧ್ಯಯನ ಮಾಡಬಹುದಾಗಿದೆ. ಆದರೆ ವೈದಿಕ ನಂಬಿಕೆಗಳು ಈ ಕಾಲದಲ್ಲಿ ಕರ್ನಾಟಕದಲ್ಲಿ ಇದ್ದವು ಎಂದು ಹೇಳುವುದು ಕಷ್ಟಸಾಧ್ಯ. ಹೀಗಿರುವಾಗ ಕ್ರಿ.ಪೂ. ೪-೩ನೇ ಶತಮಾನಗಳಲ್ಲಿ ಕರ್ನಾಟಕದಲ್ಲಿ ಜೈನ ಮತ್ತು ಬೌದ್ಧ ಧರ್ಮಗಳು ಪರಿಚಯಿಸಲ್ಪಟ್ಟವು. ಉದಾಹರಣೆಗೆ, ಆ ಕಾಲದಲ್ಲಿಯೇ ಚಂದ್ರಗುಪ್ತಮೌರ್ಯ ಹಾಗೂ ಭದ್ರಬಾಹು ಬಂದು ನೆಲೆಸಿದ್ದರು ಎನ್ನುವುದು ಜೈನ ಪರಂಪರೆಯಿಂದ ತಿಳಿದು ಬರುತ್ತದೆ[೨].

ಕರ್ನಾಟಕದ ಅರಸು ಮನೆತನಗಳು ಧರ್ಮ ಸಹಿಷ್ಣುತೆಯನ್ನು ಅನುಸರಿಸದ ಧರ್ಮಗಳ ಅನುಯಾಯಿಗಳಿಗೆ ಧಾರ್ಮಿಕ ಸ್ವತಂತ್ರವನ್ನು ನೀಡಿ ಆ ಕಾಲದ ರಾಜ್ಯ ಆಡಳಿತದ ಮುಖ್ಯ ಲಕ್ಷಣವಾಗಿ ಧರ್ಮಸಮನ್ವಯತೆ ಪ್ರಭಾವ ಬೀರಿತು, ಸ್ವಧರ್ಮದ ರಕ್ಷಣೆ ಮತ್ತು ಪರಧರ್ಮ ಸಹಿಷ್ಣುತೆ ಎನ್ನುವುದು ಅಂದಿನ ಕಾಲದ ಅರಸರ ಧ್ಯೇಯವಾಗಿತ್ತು. ಜೈನ ಧರ್ಮ, ಬೌದ್ಧ ಧರ್ಮ, ವೈಷ್ಣವ ಧರ್ಮ, ಶೈವ ಧರ್ಮಗಳು ರಾಜನಿಂದ ಮನ್ನಣೆ ಪಡೆದಿದ್ದವು. ಹೀಗಾಗಿ ಹಾವೇರಿ ಜಿಲ್ಲೆಯ ಧಾರ್ಮಿಕ ಸಮನ್ವಯತೆ ಹಾಗೂ ಅಂದಿನ ಧಾರ್ಮಿಕ ಸ್ಥಿತಿಯನ್ನು ಸ್ಪಷ್ಟವಾಗಿ ಮತ್ತು ನಿಖರವಾಗಿ ಗುರುತಿಸಲು ಇಲ್ಲಿ ದೊರೆತ ಶಾಸನಗಳು ಸಹಾಯಕವಾಗುತ್ತವೆ.

## ಬೌದ್ಧ ಧರ್ಮ:

ಪ್ರಾಚೀನ ಭಾರತೀಯ ಧರ್ಮಗಳಲ್ಲಿ ಒಂದಾದ ಬೌದ್ಧಧರ್ಮವು ಬುದ್ಧ ಬೋಧಿಸಿದ ಧರ್ಮವಾಗಿದೆ. ಭಾರತೀಯ ದರ್ಶನಗಳು ಜಿಜ್ಞಾಸೆಯ ಬಲದಿಂದಲೇ ಬಂದ ವಿಚಾರಗಳಲ್ಲ. ಜೀವನದ ಸಮಸ್ಯೆಗಳನ್ನು ಸಮರ್ಪಕವಾಗಿ ಪರಿಹರಿಸಿಕೊಳ್ಳಲು ಚಿತ್ತಸ್ಥೈರ್ಯ ಹಾಗೂ ಚಿತ್ತಶುದ್ಧಿಯ ಮಾರ್ಗ ಹುಡುಕುವ ಕಾತುರದಿಂದ ಹುಟ್ಟಿಬಂದವು. ಈ ಮಾತಿಗೆ ಉತ್ತಮ ನಿದರ್ಶನ ಬೌದ್ಧಧರ್ಮ.

ಬೌದ್ಧಧರ್ಮಕ್ಕೆ ಹಿನ್ನೆಲೆಯಾಗಿ ವೈದಿಕ ಸಂಸ್ಕೃತಿಯಿದೆ. ಬುದ್ಧನ ಉದಯವಾಗುವಷ್ಟರಲ್ಲೇ ಸಂಹಿತೆ, ಬ್ರಾಹ್ಮಣ, ಅರಣ್ಯಕ, ಉಪನಿಷತ್‌ಗಳು ಸಿದ್ದವಾಗಿದ್ದವು. ಸಾಂಖ್ಯಾದರ್ಶನವು ಯೋಗಪದ್ಧತಿ ಪ್ರಚಲಿತವಾಗಿದ್ದು ವಿವಿಧ ಮತಗಳನ್ನು ಅನುಸರಿಸುತ್ತಿದ್ದ ತೀರ್ಥಂಕರರು ಪರಿವ್ರಾಜರು ನಾಡಿನ ತುಂಬ ಇದ್ದರು[೩]. ಈ ಧರ್ಮವು ಕ್ರಿಪೂ. ೩ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಮೌರ್ಯ ಸಾಮ್ರಾಜ್ಯದ ಸಾಮ್ರಾಟನಾದ ಅಶೋಕನ ಕಾಲದಲ್ಲಿ ಪ್ರಬಲವಾಗಿದ್ದು ಅಶೋಕನು ಬಿಕ್ಷು ಮಹಾದೇವನನ್ನು ಮಹಿಷಮಂಡಳಕ್ಕೂ (ಈಗಿನ ಮೈಸೂರು) ಮತ್ತು ಬನವಾಸಿಗೂ ಕಳಿಸಿದನೆಂಬ ಉಲ್ಲೇಖವು ಕರ್ನಾಟಕಕ್ಕೆ ಬೌದ್ಧ ಧರ್ಮ ಪ್ರವೇಶದ ದಾಖಲೆ ಕ್ರಿ.ಶ.೬೪೦ರಲ್ಲಿ ದಕ್ಷಿಣಭಾರತದಲ್ಲಿ ಪ್ರವಾಸ ಮಾಡಿದ ಚೀನಿಯಾತ್ರಿಕನಾದ ಹೂಯನ್‌ತ್ಸಾಂಗ್‌ನು ಬೌದ್ಧಧರ್ಮದ ಮಹಾಯಾನ ಪಂಥವು ಕರ್ನಾಟಕದ ಭಾಗದಲ್ಲಿ ಉಚ್ರಾಯ ಸ್ಥಿತಿಯಲ್ಲಿ ಇತ್ತು ಎಂದು ತನ್ನ ಗ್ರಂಥದಲ್ಲಿ ಬರೆದಿದ್ದಾನೆ[೪]. ಹೀಗಿರುವಾಗ ಬೌದ್ಧಧರ್ಮವು ಹಾವೇರಿ ಜಿಲ್ಲೆಯಲ್ಲಿ ತನ್ನದೇ ಆದ ಅಸ್ಥಿತ್ವವನ್ನು ಸ್ಥಾಪಿಸಿದ ಬಗ್ಗೆ ಕ್ರಿ.ಶ. ೧೦೭೧ರ ಹಾನಗಲ್ಲು ತಾಲೂಕು ಕಲಕೇರಿ ಶಾಸನದಲ್ಲಿ[೫] ಭುವನೈಕ್ಯಮಲ್ಲ, ವೀರನೂಳಂಬ, ಉದಯಾದಿತ್ಯನ ರಾಣಿ ಮಾಳಲದೇವಿಯು, ಬೌದ್ಧರಿಗಾಗಿ ಬುದ್ಧವಿಹಾರವನ್ನು ಕಟ್ಟಿಸುತ್ತಾಳೆ. ಇದರಿಂದ ಬೌದ್ಧಧರ್ಮರು ಸ್ವಲ್ಪ ಮಟ್ಟಿನ ಸಂಖ್ಯೆಯಲ್ಲಿ ಇದ್ದರು ಎಂದು ಗೊತ್ತಾಗುತ್ತದೆ. ಇಂದು ಬೌದ್ಧವಿಹಾರ ಸಂಪೂರ್ಣವಾಗಿ ನಶಿಸಿ ಹೋಗಿತ್ತು. ಅದರ ಕುರುಹುಗಳು ಕೂಡ ಪತ್ತೆಯಾಗಿಲ್ಲ. ಒಟ್ಟಾರೆ ಈ ಪ್ರಾಂತ್ಯದಲ್ಲಿ ಬೌದ್ಧರು ಪ್ರಾಚೀನ ಕಾಲದಿಂದಲೂ ವಾಸಿಸುತ್ತಿದ್ದರು ಎಂದು ಸ್ಪಷ್ಟ. ಆದ್ದರಿಂದ ಈ ಪ್ರಾಂತ್ಯದಲ್ಲಿ ಉತ್ಖನನ ಮಾಡಿದರೆ ಆಧಾರಗಳು ಸಿಗುವ ಸಂದರ್ಭ ಹಾಗೂ ಬೌದ್ಧಧರ್ಮದ ಮೇಲೆ ಬೆಳಕನ್ನು ಚೆಲ್ಲಲು ಸಹಾಯಕವಾಗುವುದು. ಹೀಗಿರುವಾಗ ಈ ಪ್ರಾಂತ್ಯದಲ್ಲಿ ಬೌದ್ಧಧರ್ಮದ ಬಗ್ಗೆ ಶಾಸನಗಳಲ್ಲಿ ಹೆಚ್ಚಾಗಿ ಉಲ್ಲೇಖಗಳು ಇಲ್ಲದಿರುವುದು ಒಂದು ವಿಪರ್ಯಾಸ.

ಹಾವೇರಿ ಜಿಲ್ಲೆಯಲ್ಲಿ ಬೌದ್ಧಧರ್ಮ ಅಷ್ಟೇನು ಪ್ರಮುಖ ಧರ್ಮವಾಗಿರಲಿಲ್ಲ. ಏಕೆಂದರೆ ಆ ಕಾಲದ ಶೈವ, ವೈಷ್ಣವ ಮತ್ತು ಜೈನಧರ್ಮಗಳು ಅತ್ಯಂತ ಪ್ರಭಾವಶಾಲಿಯಾದ ಧರ್ಮಗಳಾಗಿದ್ದವು. ಅಲ್ಲದೆ ಈ ಹೊತ್ತಿಗಾಗಲೇ ದಕ್ಷಿಣ ಭಾರತದಿಂದ ಬೌದ್ಧಧರ್ಮ ಬಹುತೇಕ ಕಣ್ಮರೆಯಾಗಿತ್ತು. ಪಶ್ಚಿಮ ಬಂಗಾಳದ ಭಾಗದಲ್ಲಿ ಪಾಲ ಮತ್ತು ಸೇನ ರಾಜಮನೆತನಗಳ ಈ

ಧಾರ್ಮಿಕ ಚಟುವಟಿಕೆಗಳನನು ಮುಂದುವರೆಸಿಕೊಂಡು ಬಂದರು. ಕರ್ನಾಟಕದ ಮಟ್ಟಿಗೆ ಪ್ರಾಯಶಃ ಕಲ್ಯಾಣಿ ಚಾಲುಕ್ಯರ ಕಾಲವೇ ಬೌದ್ಧಧರ್ಮ ಚಟುವಟಿಕೆಗಳಿಗೆ ಕೊನೆಯ ಕಾಲಘಟ್ಟವೆಂಬಂತೆ ತೋರುತ್ತದೆ.

## ಜೈನಧರ್ಮ:

ದಕ್ಷಿಣ ಭಾರತದ ಜೈನಧರ್ಮದ ಇತಿಹಾಸವೆಂದರೆ ಕರ್ನಾಟಕದ ಜೈನಧರ್ಮ ಇತಿಹಾಸವೇ ಆಗಿದೆ. ಪ್ರಾಚೀನ ಕರ್ನಾಟಕದಲ್ಲಿ ಜೈನಧರ್ಮ ಒಂದು ಪ್ರಬಲಧರ್ಮವಾಗಿತ್ತು[೬]. ಕ್ರಿ.ಪೂ. ಕರ್ನಾಟಕವು ಪ್ರಾಚೀನ ಕಾಲದಿಂದ ಜೈನಧರ್ಮದ ವಾಸಸ್ಥಾನವಾಗಿದ್ದು, ಕರ್ನಾಟಕ ಪ್ರಸಿದ್ಧ ಅರಸು ಮನೆತನಗಳಾದ ಕದಂಬರು, ಗಂಗರು, ಬಾದಾಮಿ ಚಾಲುಕ್ಯ ಹಾಗೂ ರಾಷ್ಟ್ರಕೂಟ ಆಡಳಿತ ಅವಧಿಯಲ್ಲಿ ಜೈನಧರ್ಮ ಮೇಲು ಮೈ ಸಾಧಿಸಿತು. ನಂತರ ಬಂದ ಕಲ್ಯಾಣಿ ಚಾಲುಕ್ಯ ಹಾಗೂ ಹೊಯ್ಸಳರು ಜೈನಧರ್ಮಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಿದರು.

ಕ್ರಿ.ಪೂ. ೩ನೇ ಶತಮಾನದಲ್ಲಿಯೇ ಜೈನಧರ್ಮವು ದಕ್ಷಿಣ ಭಾರತದಲ್ಲಿ ಪ್ರವೇಶ ಮಾಡಿದರು. ಕರ್ನಾಟಕದಲ್ಲಿ ವರ್ಧಮಾನ ಮಹಾವೀರ ಕ್ರಿ.ಶ. ೫೪೦ರ ಅವಧಿಯ ಸುಮಾರಿಗೆ ಈ ಧರ್ಮ ಶ್ರೀಮಂತವಾಗಿ ಬೆಳೆಯಿತು. ವರ್ಧಮಾನ ಮಹಾವೀರ ಈ ಧರ್ಮದ ಸ್ಥಾಪಕನಾದನು. ಆದರೆ ಐತಿಹಾಸಿಕವಾಗಿ ಈತನೇ ಮೂಲಪುರುಷನಾಗಿದ್ದು, ಜೈನಧರ್ಮ ಗ್ರಂಥಗಳ ಹಾಗೂ ನಂಬಿಕೆಗಳ ಪ್ರಕಾರ ಮಹಾವೀರನು ೨೪ನೇ ತೀರ್ಥಂಕರರು, ಅದಕ್ಕೂ ಮೊದಲು ಆಗಿಹೋದ ೨೩ ಜನ ತೀರ್ಥಂಕರರು ಜೈನಧರ್ಮವನ್ನು ಪ್ರತಿಪಾದಿಸಿದರೆಂದು ೨೨ನೇ ತೀರ್ಥಂಕರರನ್ನು ಭಾಗವತದಲ್ಲಿ ಶ್ರೀಕೃಷ್ಣನ ಸಮಕಾಲೀನರೆಂದು ಹೇಳಲಾಗಿದೆ. ರಾಜಪುತ್ರರಾಗಿ ಜನಿಸಿದ ಮಹಾವೀರನು ತನ್ನ ವೈಭವಗಳನ್ನೆಲ್ಲಾ ತ್ಯಜಿಸಿ ತೀರ್ಥಂಕರಾದದ್ದು ಒಂದು ಅದ್ಭುತ ತ್ಯಾಗ ಎನ್ನಬಹುದು[೭].

ಹಾವೇರಿ ಜಿಲ್ಲೆಯ ಶಾಸನಗಳನ್ನು ಅವಲೋಕಿಸಿದಾಗ ಜೈನಧರ್ಮದ ಪ್ರಭುತ್ವ ಪ್ರಾಂತ್ಯದಲ್ಲಿ ಬೆಳವಣಿಗೆ ಹೊಂದಿತ್ತು ಎಂಬುದನ್ನು ತಿಳಿಯುವಾಗ ಕ್ರಿ.ಶ. ೭೫೦ರ ಹಾನಗಲ್ಲು ತಾಲೂಕಿನ ಆಡೂರ ಶಾಸನದಲ್ಲಿ[೮] ಸಿಂದರಸನು ಪಾಂಡಿವೂರ ಆಳುವಾಗ ದೋಣಗಾವುಂಡನಿಂದ ಜಿನಾಲಯಕ್ಕೆ ಭೂದಾನ ಉಲ್ಲೇಖವಿದೆ. ಕ್ರಿ.ಶ. ೭೯೩-೮೧೪ರ ಹಿರೇಕೆರೂರ ತಾಲೂಕಿನ ಮೇದೂರ ಶಾಸನದಲ್ಲಿ[೯] ಸಳುಕಿವಂಶದ ರಾಜಾದಿತ್ಯರಸನಿಂದ ಮಲ್ಲವ್ವೆಯ ಬಸದಿಗೆ ದಾನ ಉಲ್ಲೇಖಿಸುತ್ತದೆ. ಕ್ರಿ.ಶ. ೮೫೯ರ ರಾಣೆಬೆನ್ನೂರ ತಾಲೂಕಿನ ಶಾಸನದಲ್ಲಿ[೧೦] ನಾಗುಳರ ಪೊಲ್ಲಬ್ಬೆ ಕಟ್ಟಿಸಿದ ಬಸದಿಗೆ ನೀಡಿದ ಭೂದಾನ ತಿಳಿಯುತ್ತದೆ. ಕ್ರಿ.ಶ. ೧೦೬೭ರ ಬ್ಯಾಡಗಿ ತಾಲೂಕಿನ ಮೋಟೆಬೆನ್ನೂರ ಶಾಸನದಲ್ಲಿ[೧೧] ಆಯ್ಚಿಮಯ್ಯ ನಾಯಕನು ಬೆಣ್ಣೆವೂರಲ್ಲಿ ಕಟ್ಟಿಸಿದ ಬಸದಿಗೆ ಮಹಾಮಂಡಳೇಶ್ವರ ಲಕ್ಷ್ಮರಸರಿಂದ ಭೂದಾನ ಉಲ್ಲೇಖವಿದೆ.

ಕ್ರಿ.ಶ. ೧೦೬೮ರ ಮತ್ತಿಕಟ್ಟಿ ಶಾಸನದಲ್ಲಿ[೧೨] ಪೆರ್ಗಡೆ ಕಾಳಿಮಯ್ಯನಿಂದ ಜಿನಾಲಯಕ್ಕಾಗಿ ಮತ್ತಿಸೇನ ಭಟ್ಟಾರಕರಿಗೆ ಭೂದಾನ ಮಾಹಿತಿ ಲಭ್ಯವಿದೆ.

ಕ್ರಿ.ಶ. ೧೧೨೩ರ ಶಿಗ್ಗಾಂವ ತಾಲೂಕಿನ ಅರಟಾಳ ಶಾಸನದಲ್ಲಿ[೧೩] ಗಂಗರ ಬೊಮ್ಮಿಸೆಟ್ಟಿಯಿಂದ ಬಸದಿಯ ನಿರ್ಮಾಣ ಹಾಗೂ ದಾನ ಮಾಹಿತಿ ಲಭ್ಯವಾಗಿದೆ. ಕ್ರಿ.ಶ. ೧೧೪೯ರ ಹಾನಗಲ್ಲು ತಾಲೂಕಿನ ದೇವಗೇರಿ ಶಾಸನದಲ್ಲಿ ಮಹಾಸಾಮಂತ ಕಲಿಯಮ್ಮರಸ ಹಾಗೂ ತಂತ್ರಪಾಳ ಬಾಚಣ್ಣಾದಿಗಳಿಂದ ಶಾಂತಿನಾಥ ಜಿನಾಲಯಕ್ಕೆ ಭೂದಾನ ಉಲ್ಲೇಖವಾಗಿದೆ. ಕ್ರಿ.ಶ. ೧೧೪೮ರ ಹಾವೇರಿ ತಾಲೂಕಿನ ನೀರಲಗಿ ಶಾಸನದಲ್ಲಿ[೧೪] ದೊರೆತ ಶಿಲಾಶಾಸನ ಪಶ್ಚಿಮ (ಕಲ್ಯಾಣ) ಚಾಳುಕ್ಯರ ಕಾಲದ್ದು, ಇದು ಪ್ರಧಾನವಾಗಿ, ಆ ಕಾಲದ ಒಂದು ಪ್ರತಿಷ್ಠಿತ ಮನೆತನದದ ಹಿರಿಮೆಯನ್ನು ಸಾರುತ್ತದೆ. ಅದರ ಜೊತೆಗೆ ಈ ಶಾಸನಕ್ಕೆ ಸಾಂಸ್ಕೃತಿಕ, ಸಾಹಿತ್ಯಕ, ಚಾರಿತ್ರಿಕ, ಧಾರ್ಮಿಕ ಆಯಾಮಗಳ ಮಹತ್ವವೂ ಇದೆ ಎಂಬುದನ್ನು ಈ ಶಾಸನದಲ್ಲಿ ಈಗಿನ ನೀರಲಗೆ ಎಂದು ನಿರ್ದೇಶಿಸಲಾಗಿದೆ. ಮತ್ತೊಂದು ಕ್ರಿ.ಶ. ೧೧೪೮ರ ನೀರಲಗೆ ಶಾಸನದಲ್ಲಿ ನಾಳ್ಪ್ರಭು ಮಲ್ಲಗಾವುಂಡನು ಮಲ್ಲಿನಾಥ ಜಿನಾಲಯವನ್ನು ಕಟ್ಟಿದನು ಮತ್ತು ಅದಕ್ಕೆ ದಾನದತ್ತಿಗಳ ಕೊಡುಗೆಯೂ ನಡೆಯಿತು. ಈ ಶಾಸನ ರಚನೆಯಾದದ್ದು ೧೧೪೮ರಲ್ಲಿ. ಆದರೆ ಬಸದಿಯನ್ನು ಕಟ್ಟಿಸಿದ್ದು ಇದಕ್ಕೂ ಇಪ್ಪತ್ತು ವರ್ಷಗಳ ಹಿಂದೆಯೇ. ಏಕೆಂದರೆ ಹಿಂದೆ ತಾನು ಮಾಡಿಸಿದ ಮಲ್ಲಿನಾಥಜಿನಾಶ್ರಯಕ್ಕೆ ಹೊಸದಾಗಿ ಇನ್ನಷ್ಟು ದತ್ತಿಗಳನ್ನಿತ್ತು ಎಂದು ದಾಖಲಿಸಿದೆ. ಕ್ರಿ.ಶ. ೧೧೬೩ರ ಹಾವೇರಿ ತಾಲೂಕಿನ ಗುತ್ತಲ ಶಾಸನದಲ್ಲಿ[೧೫] ಪಣ್ಣವತ್ತಿ – ೧೨, ಬೆಳುಹುಗೆ – ೭೦, ಬೆಣ್ಣೆಯೂರು – ೧೨, ಆಳುವ ವಿಕ್ರಮಾದಿತ್ಯ ದೇವರಸನಿಂದ ಪಾರ್ಶ್ವದೇವರಿಗೆ ಭೂದಾನದ ಉಲ್ಲೇಖವಿದೆ. ಕ್ರಿ.ಶ. ೧೧೬೮ರ ರಾಣೆಬೆನ್ನೂರ ತಾಲೂಕು ನದಿಹರಳಹಳ್ಳಿ ಶಾಸನದಲ್ಲಿ[೧೬] ಜೈನರಲ್ಲಿ ಚತುರ್ಥ, ಬೋಗಾರ, ಪಾದ, ಪಂಚಮ, ವೈಶ್ಯ ಕುಲಗಳಿವೆ. ಉತ್ತರ ಕರ್ನಾಟಕದಲ್ಲಿ ಇಂದಿಗೂ ಈ ಪಂಗಡಗಳು ಚಾಲ್ತಿಯಲ್ಲಿವೆ. 'ಚತುರ್ಥ' ಎಂದರೆ ನಾಲ್ಕನೆಯ ಜಾತಿ, ಶೂದ್ರ ಎಂಬರ್ಥವಿದೆ. ಆದರೆ ಅದರೊಂದಿಗೆ ಜೈನರಲ್ಲಿ ಒಂದು ಪಂಗಡ ಎಂಬರ್ಥ. ಪಾತ್ರೆ ವ್ಯಾಪಾರ ಪ್ರಧಾನವಾಗಿರುವುದು ಬೋಗಾರ ಕುಲದವರು. ಈ ಮೂರು ಮುಖ್ಯ ಪಂಗಡಗಳು ಜೈನ ಸಮಾಜದ ಒಳಜಾತಿಗಳು. ಜೈನರಲ್ಲೇ ಇರುವ 'ಸಾದಕಲ' ಕುರಿತು ಉಲ್ಲೇಖಿಸುತ್ತದೆ.

ಕ್ರಿ.ಶ. ೧೧೭೩ರ ರಾಣಿಬೆನ್ನೋರ ತಾಲೂಕಿನ ನದಿಹರಳಹಳ್ಳಿ ಶಾಸನದಲ್ಲಿ[೧೭] ದಂಡನಾಯಕ ಮಹೇಶ್ವರ ದೇವನ ಸುಂಕಾಧಿಕಾರಿಗಳಿಂದ ಗೊಟ್ಟಗಡಿ ಬಸದಿಗೆ ಸುಂಕಗಳ ದಾನದ ಉಲ್ಲೇಖವಿದೆ. ಕ್ರಿ.ಶ. ತೇದಿರಹಿತ ಹಾನಗಲ್ಲು ತಾಲೂಕಿನ ಮಂತಗಿ ಶಾಸನದಲ್ಲಿ[೧೮] ಹಾನಗಲ್ಲುದ ಕಲಿವೇವಸೆಟ್ಟಿ ಚತುರ್ವಿಂಶತಿ ತೀರ್ಥಂಕರರನ್ನು ಸ್ಥಾಪಿಸಿ, ನಾಗಚಂದ್ರಭಟ್ಟಾರಕರಿಗೆ ನೀಡಿದ ದಾನವನ್ನು ಉಲ್ಲೇಖಿಸುತ್ತದೆ. ತೇದಿರರಹಿತ ಮತ್ತೊಂದು ಮಂತಗಿ ಶಾಸನದಲ್ಲಿ ಮಲ್ಲಿಗುಂಡದ ಮಹಾಪ್ರಭು ಮತ್ತು ಸಹಸ್ರಕೀರ್ತಿ ದೇವನ ಶಿಷ್ಯ ವಿಟ್ಟಗೌಡನ ಸಮಾಧಿಮರಣ

ಉಲ್ಲೇಖ ಕಂಡುಬರುತ್ತದೆ ಹಾಗೂ ಇನ್ನೊಂದು ಶಾಸನದಲ್ಲಿ ಹರಿಕೇಸರಿ, ಹರಿಕಾಂತ, ತೋಯಿಮರಸರು ಬೇರೆ ಬೇರೆ ಬಸದಿಗಳಿಗೆ ಬಿಟ್ಟದಾನದ ಉಲ್ಲೇಖವಿದೆ. ಕ್ರಿ.ಶ. ತೇದಿರಹಿತ ಮೂಡೂರ ಶಾಸನದಲ್ಲಿ ಮಹಾಮಂಡಳೇಶ್ವರ ನಿಂಗರಸನ ಪ್ರಶಸ್ತಿ ಹಾಗೂ ಶಾಸನ ಕವಿ ಬಾಳಚಂದ್ರ ಪಂಡಿತನ ಉಲ್ಲೇಖವನ್ನು ವಿವರಿಸುತ್ತವೆ. ಕ್ರಿ.ಶ. ತೇದಿರಹಿತ ಹಾವೇರಿ ತಾಲೂಕಿನ ಸಂಗೂರು ಶಾಸನದಲ್ಲಿ[೧೯] ನೇಮಣ್ಣನಿಂದ ಸಂಗೂರಿನ ಪಾರ್ಶ್ವನಾಥ ಬಸದಿಗೆ ಭೂದಾನ ಉಲ್ಲೇಖವಿದೆ. ಕ್ರಿ.ಶ. ೧೨೦೦ರ ಹಿರೇಕೆರೂರು ತಾಲೂಕಿನ ಅಬ್ಬಲೂರು ಶಾಸನದಲ್ಲಿ[೨೦] ಶ್ರೀ ಬ್ರಹ್ಮೇಶ್ವರ ದೇವರಲ್ಲಿ ಏಕಾಂತದ ರಾಮಾಯ್ಯ ಬಸದಿಯ ಜೇನೊಡ್ಡವಾಗಿ ತಲೆಯನರಿದ ಹಡೆದ ಠಾವು, ಸುಂಕಗಾವುಂಡ ಬಸದಿಯನೊಡೆಯಲೀಯದೆ ಆಳು ಕುದುರೆಯನೊಡ್ಡಿರಲು ಏಕಾಂತ ರಾಮಯ್ಯ ಕಾದಿಗೆಲ್ದು ಜಿನನೊಡೆದು ಲಿಂಗಮಂ ಪ್ರತಿಷ್ಠೆ ಮಾಡಿದಂ'. 'ಯೆ(ಏ)ಕಾಂತದ ರಾಮಯ್ಯಂಗಳು ಜಿನನ ಬಿಂಬವನ್ನು ಒಡೆದು ಲಿಂಗಪ್ರತಿಷ್ಠೆಯಂ ಮಾಡಿದ ಠಾವು' ಏಕಾಂತ ರಾಮಯ್ಯ ಅಬ್ಬಲೂರಿನ ಬಸದಿಯನ್ನು ಹಾಳುಗೆಡವಿ ಬಸದಿಯಲ್ಲಿರುವ ಜೀನನ ಬಿಂಬವನ್ನು ಹೊಡೆದು ಲಿಂಗಪ್ರತಿಷ್ಠಾಪನೆ ಮಾಡಿದ ಬಗ್ಗೆ, ಶಾಸನವು ಉಲ್ಲೇಖಿಸುತ್ತದೆ ಹಾಗೂ ಇನ್ನೊಂದು ಶಾಸನದಲ್ಲಿ[೨೧] ಏಕಾಂತರಾಮಯ್ಯ ಜೈನರೊಂದಿಗೆ ವಾದಕ್ಕೆ ನಿಂತು ಶಿರಸ್ಸು ಪವಾಡ ಮೆರೆದ ಘಟನೆ. ಇಲ್ಲಿ ಶರಣರ ಹೆಸರುಗಳೂ ಇವೆ, ಏಕಾಂತ ರಾಮಯ್ಯನ ಸಾಹಸ ಮತ್ತು ಜೀವನದ ಘಟನಾವಳಿಯನ್ನು[೨೨] ಉಲ್ಲೇಖಿಸುತ್ತದೆ. ಕ್ರಿ.ಶ. ೧೨ನೇ ಶತಮಾನದ ಹಾವೇರಿ ತಾಲೂಕಿನ ಶಾಸನದಲ್ಲಿ ದೇವಚಂದ್ರಸೂರಿಯ ಆದೇಶದಂತೆ ಕಲ್ಲಪ್ಪ ಶ್ರೇಷ್ಠಿಯ ಮಗ ಓಜಣ ಮಾಡಿಸಿದ ನೇಮಿನಾಥ ವಿಗ್ರಹ ಉಲ್ಲೇಖವಿದೆ. ಕ್ರಿ.ಶ. ೧೨ನೇ ಶತಮಾನದ ಹಾನಗಲ್ಲು ತಾಲೂಕಿನ ಕುಂಟನಹೊಸಳ್ಳಿ ಶಾಸನದಲ್ಲಿ[೨೩] ನಾಗಿಸೆಟ್ಟಿ ಮೊದಲಾದವರಿಂದ ಬಸದಿಗೆ ಭೂದಾನ ಉಲ್ಲೇಖಿಸುತ್ತದೆ. ಕ್ರಿ.ಶ. ೧೨ನೇ ಶತಮಾನದ ಬಾಳೆಹಳ್ಳಿ ಶಾಸನದಲ್ಲಿ[೨೪] ಬಮ್ಮಿಸೆಟ್ಟಿ ಬಾಳೆಹಳ್ಳಿಯಲ್ಲಿ ಪಾರ್ಶ್ವನಾಥಬಸದಿಯನ್ನು ಕಟ್ಟಿಸಿ ಮಲಧಾರಿ ದ್ದೇವನಿಗೆ ಬೊಮ್ಮಣಕಾದಿ ಮಡಿದ ಉಲ್ಲೇಖವಿದೆ.

ತೇದಿ ರಹಿತ ಹಾನಗಲ್ಲು ತಾಲೂಕಿನ ಬಾಳೆಹಳ್ಳಿ ಶಾಸನದಲ್ಲಿ[೨೫] ಮಾಧವಚಂದ್ರದೇವನ ಶಿಷ್ಯ ಹಾಗೂ ಬಾಳೆಹಳ್ಳಿಯ ನಾಗಗೌಡನ ಹೆಂಡತಿಯಾದ ಸಾಯಿಗೌಡಿಯ ಸಮಾಧಿ ಮರಣ ಮಾಹಿತಿ ದೊರಕುತ್ತದೆ. ಕ್ರಿ.ಶ. ೧೨ನೇ ಶತಮಾನದ ಸವಣೂರ ತಾಲೂಕಿನಲ್ಲಿ ನಿಷಧಿಕಲ್ಲು ಶಾಸನದಲ್ಲಿ[೨೬] ಜೈನಗುರು ಮಲಧಾರಿಯ ಸನ್ಯಸನ ಮರಣ ದಾಖಲೆಯಿದೆ. ಕ್ರಿ.ಶ. ೧೨೦೫ರ ಬಾಳೂರ ಶಾಸನದಲ್ಲಿ[೨೭] ಮೇಘಚಂದ್ರಭಟ್ಟಾರಕನ ಶಿಷ್ಯ ಕಸಪಗಾವುಂಡನ ನಿಷಧಿ ಉಲ್ಲೇಖವಿದೆ. ಕ್ರಿ.ಶ. ೧೨ನೇ ಶತಮಾನ ಹಾನಗಲ್ಲು ತಾಲೂಕಿನ ಕರಗುದರಿ ಶಾಸನದಲ್ಲಿ[೨೮] ಕಲ್ಯಾಣಿ ಚಾಲುಕ್ಯ ಅರಸು ಎರಡನೆಯ ಜಗದೇಕಮಲ್ಲ ಆಳುತ್ತಿರುವಾಗ ಹಾನುಂಗಲ್ಲಯ್ನೂರನ್ನು ಮಹಾಪ್ರಚಂಡ ದಂಡನಾಯಕನನ್ನಾಗಿ ಸೋಮರಸನು ಆಳುತ್ತಿದ್ದರೆ, ಕಾಡಂಬ ವಂಶಾಭರಣ ತೈಲಭೂಪ ರಾಜಧಾನಿ ಹಾನಗಲ್ಲಿನಲ್ಲಿ ಆಳುತ್ತಿದ್ದ. ಈ ಊರಿನಲ್ಲಿ ಜಿನಧರ್ಮಕ್ಕೆ

ಆಶ್ರಯದಾತನಗಿ ಕಲಿದೇವಸೆಟ್ಟಿಯಿದ್ದರೆ, ಆತನ ಹೆಂಡತಿ ಕಾಮಿಯಕ್ಕ ಸೀತೆ, ರುಕ್ಮಿಣಿ, ಸುಮಿತ್ರೆ, ಅತ್ತಿಮಬ್ಬೆಯರಿಗೆ ಸಮಾನಗಳಾಗಿ ಶೋಭಿಸುತ್ತಿದ್ದಳಂತೆ. ಈ ದಂಪತಿಗಳಿಗೆ ಚಂಡಿಸೆಟ್ಟಿ, ಪದ್ಮಪ್ರಭ, ಆದಿನಾಥರೆಂಬ ಮಕ್ಕಳು. ಕಲಿದೇವನಿಗೆ ಇನ್ನೊಬ್ಬ ಸತಿ ಚಾಮವ್ವೆ, ಇವಳಿಗೆ ಸುಗವ್ವೆ, ನಾಗವ್ವೆ, ಜಕ್ಕವ್ವೆ, ಪದ್ಮವ್ವೆಯೆಂಬ ಮಕ್ಕಳು. ಇವರು ಕರಗುದುರೆ ಗ್ರಾಮದಲ್ಲಿ ದುರಿತನಿವಾರಣ ಹೆಸರಿನ ತೀರ್ಥವನ್ನು ವಿಜಯ ಪಾರ್ಶ್ವಜಿನೇಂದ್ರ ಅಂಗಭೋಗ ಹಾಗೂ ರಿಷಿಯರ ಆಹಾರದಾನಕ್ಕಾಗಿ ಶುಭಕೀರ್ತಿ ಪಂಡಿತರಿಗೆ ಭೂದತ್ತಿಯನ್ನು ನೀಡಿದ ಉಲ್ಲೇಖ ಪ್ರಸ್ತುತ ಶಾಸನದಲ್ಲಿದೆ. ಕ್ರಿ.ಶ. ೧೨೭೦ರ ಹಾವೇರಿ ತಾಲೂಕಿನ ಹತ್ತಿಮತ್ತೂರ ಶಾಸನದಲ್ಲಿ[೨೯] ಹತ್ತಿಯಮತ್ತೂರಿನ ಬಸದಿಯ ಆಚಾರ್ಯನ ಸಮಾಧಿ ಮರಣ ಉಲ್ಲೇಖವಿದೆ. ಕ್ರಿ.ಶ. ೧೨೭೧ರ ಹಿರೇಕೋಣತಿ ಶಾಸನದಲ್ಲಿ ತ್ರಿಭುವನ ಮಲ್ಲಪೃಥ್ವೀಸೆಟ್ಟಿ ಮನೆತನದ ಈ ಸಾಮಂತರು ಶೈವರಾಗಿದ್ದರೂ ಜೈನಧರ್ಮಕ್ಕೆ ಪ್ರೋತ್ಸಾಹವಿತ್ತಂತಿದೆ. ಕೋಣವತ್ತಿಯಲ್ಲಿ ಒಂದು ಬಸದಿ ನಿರ್ಮಾಣವಾಗಿದ್ದು ಇಲ್ಲಿ ಹಲವಾರು ನಿಷಧಿಗಳಿವೆ. ಇಲ್ಲಿಯ ಶಾಸನಗಳಲ್ಲಿ ಅನಂತಕೀರ್ತಿ ಭಟ್ಟಾರಕರು[೩೦] (ಪುಷ್ಪ), ಸೇನಭಟ್ಟಾರಕರು,[೩೧] ಶಾಂತಿಭಟ್ಟಾರಕರು[೩೨] ಕಲ್ಯಾಣಕೀರ್ತಿಭಟ್ಟಾರಕ ದೇವರು[೩೩] ಉಲ್ಲೇಖಗೊಂಡಿದ್ದಾರೆ. ಕ್ರಿ.ಶ. ೧೨೭೭ರ ಕರಗುದರಿ ಶಾಸನದಲ್ಲಿ[೩೪] ಯಾದವ ಚಕ್ರವರ್ತಿ ವೀರರಾಮಚಂದ್ರದೇವ ಆಳುತ್ತಿದ್ದಾಗ, ನಾಳ್ಪ್ರಭುವಾಗಿ ಚಮುಂಡಗೌಡನಿದ್ದ. ಆತನ ಹೆಗ್ಗಡೆ ದೇಸಿಗಣದ ಸಮಯಾಚರಣ ದೇವರ ಶಿಷ್ಯ ಕರಗುದರೆಯ ಬಮ್ಮಯ್ಯ ಸನ್ಯಸನ ವಿಧಿಯನ್ನು ಸ್ವೀಕರಿಸಿ ಮುಡುಪಿ ಸ್ವರ್ಗಸ್ಥನಾದನೆಂದು ತಿಳಿಸುತ್ತದೆ. ಕ್ರಿ.ಶ. ೧೨೮೯ರ ಕಲಕೇರಿ ಶಾಸನದಲ್ಲಿ[೩೫] ಸಮಂತಭದ್ರರ ಶಿಷ್ಯನೂ, ಮೂಲಸಂಘದ ಸಾಯಿಸೆಟ್ಟಿ ಮತ್ತು ಮಾದವ್ವೆಯರ ಪುತ್ರ ಮಾದಯ್ಯನು ಈ ಪತ್ರಹಿಡಿದು ಐಕ್ಯನಾಗುತ್ತಾನೆ. ಆತನ ಸ್ಮರಣೆಗೆ ನಿಸಿಧಿಕಲ್ಲನ್ನು ಸ್ಥಾಪಿಸಲಾಗಿದೆ. ಇನ್ನೊಂದು ನಿಷಧಿಕಲ್ಲು ಕೆರೆಕಡೆ ಹೋಗುವ ದಾರಿಯಲ್ಲಿ ಇದೆ (ಊರಿನಲ್ಲಿಯೆ). ಕಲಕೇರಿಯಲ್ಲಿ ಜೈನಧರ್ಮಾವಲಂಬಿಗಳು ಇದ್ದರೆಂಬುದನ್ನು ಇಲ್ಲಿ ದೊರೆತಿರುವ ಎರಡು ನಿಷಧಿ ಕಲ್ಲುಗಳಿಂದ ತಿಳಿದು ಬರುತ್ತದೆ. ಕ್ರಿ.ಶ. ೧೨೯೨ರ ಸಾತೇನಹಳ್ಳಿಯಲ್ಲಿ ಶಾಸನದಲ್ಲಿ[೩೬] ಸಾತೇನಹಳ್ಳಿಯ ಶಾಸನ ಪುಷ್ಪಸೇನ ದೇವರನ್ನು ಹೆಸರಿಸುತ್ತದೆ. ಹೀರೇಕೋಣತಿ ಶಾಸನದ ಸೇನಭಟ್ಟಾರಕ ಮತ್ತು ಸಾತೇನಹಳ್ಳಿ ಪುಷ್ಪಸೇನದೇವರು ಅಭಿನ್ನರೆಂದು ತೋರುತ್ತದೆ. ಹಿರೇಕೋಣತಿ ಶಾಸನದಲ್ಲಿ 'ಪುಷ್ಪ' ಬಿಟ್ಟು ಹೋಗಿದೆ. ಹಿರೇಕೋಣತಿ ಸಾತೇನಹಳ್ಳಿಗಳು ಅವಳಿ ಗ್ರಾಮಗಳಾಗಿದ್ದರಿಂದ ಮತ್ತು ಹಿರೇಕೋಣತಿಯಲ್ಲಿ ಮಂತ್ರ ಬಸದಿ ಇದ್ದರಿಂದ ಇವರು ಒಬ್ಬರೇ ಎಂದು ಶಾಸನದಲ್ಲಿ ಉಲ್ಲೇಖವಾಗಿದೆ. ಕ್ರಿ.ಶ. ೧೩ನೇ ಶತಮಾನದ ಶಿಗ್ಗಾವಿ ತಾಲೂಕಿನ[೩೭] ಹೂವಿನಸಿಗ್ಗಿ ಶಾಸನದಲ್ಲಿ ಸಿಗ್ಗಲಿಯಲ್ಲಿ ಸ್ತ್ರೀಯೊಬ್ಬಳು ಕಟ್ಟಿಸಿದ ಚೈತ್ಯಾಲಯದ ಹಾಗೂ ಮಹಾಪ್ರಧಾನ ಮನ್ನೆಯಕಾರರು ಎಂಟು ಹಿಟ್ಟುಗಳು ಬಸದಿಯ ಶಾಂತಿನಾಥ ದೇವರಿಗೆ ನೀಡಿದ ದತ್ತಿಯನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೩ನೇ ಶತಮಾನದ ಹಾವೇರಿ ತಾಲೂಕಿನ ಶಾಸನದಲ್ಲಿ[೩೮] ಮಾದರಸನು ಬಸದಿಯ ಪಾವಟಿಗೆಗಳನ್ನು ಕಟ್ಟಿಸಿದ ಉಲ್ಲೇಖ ಕಂಡುಬರುತ್ತದೆ.

ಕ್ರಿ.ಶ. ೧೩೭೬ರ ಹಾನಗಲ್ಲು ತಾಲೂಕಿನ ಸಾವಿಕೇರಿ ಶಾಸನದಲ್ಲಿ[೩೯] ಬಾಳೆಹಳ್ಳಿಯ ಬೇಳಪ್ಪನ ನಿಷಧಿ ಉಲ್ಲೇಖವಿದೆ. ಕ್ರಿ.ಶ. ೧೩೯೪ರ ಹಾನಗಲ್ಲು ತಾಲೂಕಿನ ವೀರಾಪುರ ಶಾಸನದಲ್ಲಿ[೪೦] ವಿಜಯನಗರದ ಕರ್ನಾಟಕ ಸಾಮ್ರಾಜ್ಯದ ಅರಸು ಎರಡನೆಯ ಹರಿಹರನ ಕಾಲದ ಶಾಸನವಾಗಿದ್ದು, ನಾಗರಹಳ್ಳಿಯ ಚಂದೋಜನ ಮಗ ಚಂದಪ್ಪನು ಸ್ವರ್ಗಸ್ಥನಾದುದನ್ನು ತಿಳಿಸುತ್ತದೆ. ಕ್ರಿ.ಶ. ೧೪೦೦ರ ಹಾನಗಲ್ಲು ತಾಲೂಕಿನ ಬಾಳಂಬೀಡಿನ ಶಾಸನದಲ್ಲಿ[೪೧] ಮಹಾಮಂಡಳೇಶ್ವರ ವೀರಹರಿಹರ ರಾಜ್ಯವಾಳುತ್ತಿರುವಾಗ ವರವಾಡದ ಸೂರಿಸೆಟ್ಟಿಯರು ದೇಸಿಯ ಗಣದಲ್ಲಿ ಅಗ್ರಗಣ್ಯರೆನಿಸಿದ ಆರೆಯ ಚಂದ್ರಸಿದ್ಧಾಂತಿ ಪಂಡಿತರಿಂದ ಸಲ್ಲೇಖನ ವ್ರತವನ್ನು ಸ್ವೀಕರಿಸಿ ಸ್ವರ್ಗಸ್ಥರಾದರೆಂದು ಗೊಂಕಿಯ ಸಿಂಗಣಗೌಡರು ನಿಸ್ತಿಕೆಯ ಮಾಡಿಸಿದರೆಂದು ತಿಳಿಸುತ್ತದೆ.

## ಶೈವ ಸಂಪ್ರದಾಯ :

ಶಿವನ್ನನು ಪ್ರಮುಖ ದೈವವನ್ನಾಗಿ ಇಟ್ಟುಕೊಂಡು ಆರಾಧನೆ ಮಾಡುವ ತನ್ಮೂಲಕ ಮುಕ್ತಿಯನ್ನು ಕಾಣುವ ಧರ್ಮವೇ ಶೈವಧರ್ಮವಾಗಿದೆ. ಭರತಖಂಡದಲ್ಲಿ ಶೈವ ಧರ್ಮವು ಅತ್ಯಂತ ಪ್ರಾಚೀನ ಧರ್ಮಗಳಲ್ಲಿ ಒಂದಾಗಿದ್ದು, ಶಿವೋಪಾಸನೆಯ ಇತಿಹಾಸವು ವೇದಗಳಿಗಿಂತಲೂ ಹಿಂದಕ್ಕೆ ಹೋಗುತ್ತದೆ. ಹರಪ್ಪ, ಮೊಹೆಂಜೋದಾರೋಗಳ ಸೈಂಧವ ಸಂಸ್ಕೃತಿಯಲ್ಲಿ (ಸುಮಾರು ಕ್ರಿ.ಪೂ. ೩೨೫೦-೨೭೫೦) ಕೊಂಬುಗಳಿರುವ ದೇವತೆಯ ಚಿತ್ರವಿರುವ ಮುದ್ರಿಕೆಗಳು, ಲಿಂಗಗಳು ದೊರಕಿವೆ. ಶಿವನು ಯೋಗಮುದ್ರೆಯಲ್ಲಿ ಕುಳಿತಿದ್ದು ಅವನ ಸುತ್ತಮುತ್ತ ಪೀಠದ ಕೆಳಗೆ ಆನೆ, ಹುಲಿ, ಖಡ್ಗಮೃಗ, ಎಮ್ಮೆ, ಜಿಂಕೆಗಳು ಸುತ್ತುವರಿದಿವೆ. ಇದನ್ನು ಪರಿಶೀಲಿಸಿದಾಗ ಆ ವಿಗ್ರಹವು ಹಿಂದೂ ಧರ್ಮದ ಮಹಾಯೋಗಿಯೂ, ಪಶುಪತಿಯೂ ಆದ ಶಿವನ ಪ್ರಾಚೀನ ರೂಪವನ್ನು ಸೂಚಿಸುತ್ತದೆ ಎಂದು ಸರ್ ಜಾನ್ ಮಾರ್ಷಲ್‌ರು ಅಭಿಪ್ರಾಯ ಪಡುತ್ತಾರೆ[೪೨]. ಕರ್ನಾಟಕದ ಪ್ರಾಚೀನ ಹಾಗೂ ಪ್ರಸಿದ್ಧ ಧರ್ಮಗಳಲ್ಲೊಂದಾದ ಶೈವಧರ್ಮವು ಅನೇಕ ಪಂಗಡಗಳನ್ನು ಹೊಂದಿದ್ದು ಅದರ ಉಲ್ಲೇಖ ಈ ಕೆಳಗಿನಂತಿದೆ.

**ಕಾಪಾಲಂ ಲಾಕುಲಂ ವಾಮಂ ಭೈರಮಂ ಪೂರ್ವಪಶ್ಚಿಮಂ ।**
**ಪಂಚರಾತ್ರಂ ಪಾಶುಪತಂ ತಥಾನ್ಯಾಸಿ ಸಹಸ್ರಶಃ ॥**[೪೩]

ಕರ್ನಾಟಕದಲ್ಲಿ ಜೈನಧರ್ಮವು ಅತ್ಯಂತ ಪ್ರಬಲವಾಗಿದ್ದ ಅವಧಿಯಲ್ಲಿಯೇ ಶೈವಧರ್ಮದ ಭದ್ರವಾದ ಬುನಾದಿ ಸ್ಥಾಪಿತವಾಯಿತು. ಕರ್ನಾಟಕದ ಶೈವ ಇತಿಹಾಸದಲ್ಲಿ ಕಪಾಲಿಕ ಸಂಖ್ಯೆ ಇಲ್ಲ ಎನ್ನುವಷ್ಟು ಕಡಿಮೆ ಪಶುಪಾತ ಕಾಳಮುಖರು ಸಾಕಷ್ಟು ಪ್ರಮುಖರು. ಹೀಗೆ ಹೆಚ್ಚು ಸಂಖ್ಯೆಯಲ್ಲಿರುವ ಪಶುಪಾತಕಾಳಮುಖರು ಇಲ್ಲಿಯವರೆಗೆ ಅಥವಾ ಹೊರಗಿನವರೆ ಆಗಿದ್ದರೆ. ಕರ್ನಾಟಕಕ್ಕೆ ಯಾವಾಗ ಬಂದರು? ಎನ್ನುವುದು ಸ್ಪಷ್ಟವಾಗಿ ತಿಳಿಯಬೇಕಾಗಿದೆ. ಒಟ್ಟಿನಲ್ಲಿ

ಕಾಳಮುಖರು ಸಮಾಜದಲ್ಲಿ ಉನ್ನತ ಸ್ಥಾನ ಪಡೆದು ಸಮಾಜ ಹಾಗೂ ಧರ್ಮಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ.

ಕ್ರಿ.ಶ. ೮೫೯ರ ಹಾನಗಲ್ಲು ತಾಲೂಕಿನ ಅರಿಷಿಣಗುಪ್ಪಿ ಗ್ರಾಮದ ಶಾಸನದಲ್ಲಿ[೪೫] ಬಂಕದೇವ ಎಂಬುವನು ಕಂಕಾಳ ಗೂರವ ಎಂಬ ಶೈವಯತಿಗೆ ಕೆರೆಯೊಂದನ್ನು ದಾನವಾಗಿ ಬಿಟ್ಟ ವಿಷಯ ಉಲ್ಲೇಖಗೊಂಡಿದೆ. ಕ್ರಿ.ಶ. ೯೫೫ರ ಚಿಕ್ಕಕೆರೂರು ಶಾಸನದಲ್ಲಿ[೪೬] ಮಹಾಮಂಡಳೇಶ್ವರ ಆಹವಮಲ್ಲ ಉತ್ಪಳನ ವಿರುದ್ಧ ಉತ್ತರಕ್ಕೆ ದಂಡೆಯಾತ್ರೆ ಕೈಗೊಂಡಾಗ ಕೊಂಡವನಿಗರ ಜೋಗಯ್ಯನ ಮಗ ಪಳ್ಳಗ ಮತ್ತು ನಿಜಬ್ಬೆ ಅವನ ಹೆಂಡತಿ ಅರಸಕ್ಕ ಭಳಾರಿ ದೇವತೆ ಪ್ರತಿಷ್ಠಾಪಿಸಿದನ್ನು ತಿಳಿಸುತ್ತದೆ. ಕ್ರಿ.ಶ. ೧೦೧೯ರ ಒಂದನೇಜಯಸಿಂಹ (ಒಂದನೇಜಗದೇಕಮಲ್ಲ) ಕಲ್ಲಿಹಾಳ ಶಾಸನದಲ್ಲಿ[೪೭] ಮಹಾಮಂಡಳೇಶ್ವರ ಕುಂದರಾಜ ಬನವಾಸಿ-೧೨೦೦೦, ಮತ್ತು ಇವನ ಹೆಂಡತಿ ಜೋಗಬ್ಬೆ ಅಜ್ಜಡಿ ಆಳುತ್ತಿರುವಾಗ ಸಹದೇವೇಶ್ವರ ದೇವಾಲಯಕ್ಕೆ ದಾನ ನೀಡಿದ್ದಾರೆ. ಅಜ್ಜಡಿಗಾವುಂಡ ಸಹದೇವನು ದೇವಸ್ಥಾನವನ್ನು ಕಟ್ಟಲು ಪ್ರಾರಂಭಿಸಿ ರಾಚಮಲ್ಲನ ಅನು-ಸುತೆ ಮತ್ತು ಬರ್ಮನ ಮಗಳು ಜೋಗಬ್ಬೆ ರಾಚಮಲ್ಲನ ಅಪೇಕ್ಷೆಯ ಮೇರೆಗೆ ದಾನನೀಡಿದೆ. ರಾಚಮಲ್ಲನ ದಾನನೀಡಿ ಸಹದೇವ ದೇವಾಲಯ ಕಟ್ಟಲು ಮತ್ತು ಸಹದೇವಯ್ಯ ನಾಲ್ಕು ನೃತ್ಯಗಾರ್ತಿಯರಿಗೆ ಅರ್ಪಿಸಿ ದೇವರ ಸೇವೆಗೆ ಅರ್ಪಿಸಿದ ವಿವರವಿದೆ. ಕ್ರಿ.ಶ. ೧೦೨೫ರ ಮನಗತ್ತಿ ಶಾಸನದ[೪೮] ಹುಲ್ಲುಂಗೂರು ಗೌರೇಶ್ವರ ದೇವಾಲಯಕ್ಕೋಸ್ಕರ ಕಾಳಿಸೆಟ್ಟಿ ಮತ್ತು ಬೂಪ್ಪಗಾವುಂಡರು ಕೆಲವು ಭೂಮಿಯನ್ನು ಒಬ್ಬ ಉಪಾಧ್ಯಾಯರ ಶಿಷ್ಯ ಕೇದಾರಶಕ್ತಿ ಪಂಡಿತ ಆಚಾರ್ಯರಿಗೆ ದಾನ ನೀಡಿದ್ದಾರೆ. ಕ್ರಿ.ಶ. ೧೦೨೬ರ ಹಳವಟ್ಟಿ ಶಾಸನದಲ್ಲಿ[೪೯] ಎಳವಟ್ಟಿ ರಾಮೇಶ್ವರದೇವರಿಗೆ ಮಹಾಪ್ರಧಾನ ಮಹಾಪ್ರಚಂಡ ದಂಡನಾಯಕ ಸೋವಿದೇವರಸನು ಚಂದ್ರಭೂಷಣ ಪಂಡಿತರ ಕೈಯಲ್ಲಿ ದಾನ ನೀಡಿದ ದಾಖಲೆಯಿದೆ. ಕ್ರಿ.ಶ. ಇದೇ ಕಾಲದ ಹೀರೆಬೆಂಡಗೇರಿ ಶಾಸನದಲ್ಲಿ ಪಿಂಮಡಂಗೇಜಿಯ ಸ್ವಯಂಭುಕಲಿ ದೇವಸ್ವಾಮಿ ದೇವಾಲಯದ ಜೀರ್ಣೋದ್ಧಾರ, ನಿತ್ಯನೈವೇದ್ಯ, ಋಷಿಗಳ ಅಹಾರದಾನಕ್ಕೋಸ್ಕರ ಪುಲಿಗೆರೆ-೩೦೦ರಲ್ಲಿ ಒಂದು ಕಂಪಣ ಕಲಾಡಿ-೯೬ರಲ್ಲಿ ಹೊಂದಿಕೊಂಡಿರುವ ಹಳ್ಳಿಯಕೇರಿ ಗ್ರಾಮವನ್ನು ಮಹಾಪ್ರಚಂಡ ದಂಡನಾಯಕ ಮಾಚರಸ ಮತ್ತು ಮನ್ನೆಯಬೋಳರಸ ರಾಜನಿಂದ ಅಪ್ಪನೆ ಪಡೆದು ದೇವಸ್ಥಾನದ ಸೋಮೇಶ್ವರ ಪಂಡಿತನ ಕೈಯಲ್ಲಿ ದಾನ ನೀಡಿದ್ದನ್ನು ತಿಳಿಸುತ್ತದೆ. ಕ್ರಿ.ಶ. ೧೦೨೮ರ ಉಪ್ಪುಣಸಿ ಶಾಸನದಲ್ಲಿ[೫೦] ದೇವಾಲಯ ಮತ್ತು ವಿದ್ಯಾಭ್ಯಾಸದ ಶಾಲೆಗೆ ಹೊಂದಿಕೊಂಡಿರುವ ಮಠಕ್ಕೆ ಕುಂದಬ್ಬರಸಿ ಗಂಡನ ಜೊತೆ ಆಡಳಿತಕ್ಕೆ ಹೊಂದಿಕೊಂಡಿರುವ ಮಹಾಮಂಡಳೇಶ್ವರ ಕುಂದರಾಜನು ಭೂಮಿದಾನ ನೀಡಿ ಈ ದಾನವನ್ನು ಉಕರ್ಯುಯಸಾದ ದೇವರಾಸಿಜೀಯನಿಗೆ ಒಪ್ಪಿಸಿದ ದಾಖಲೆಯಿದೆ. ಇದೇ ಕಾಲದ ಕುಳೆನೂರು ಶಾಸನದಲ್ಲಿ ಇರಿವಬೆಡಂಗದೇವನ ಮಗ ಕುಂಮದರಾಜ ಬನವಾಸಿ-೧೨೦೦೦ ಮತ್ತು ಪಯ್ಯೆನಾಡಂ

ಆಳುತ್ತಿರುವಾಗ ಇವನ ಹೆಂಡತಿ ಕುಂದಲದೇವಿ ದೇವಾಲಯದ ಅಭಿವೃದ್ಧಿಗೆ ಭೂಮಿದಾನ ನೀಡಿ ಸಂಮುಕರಾಸಿಜೀಯನಿಗೆ ನೀಡಿದ ವಿವರವಿದೆ. ಕ್ರಿ.ಶ. ೧೦೩೪ರ ಗುಂಡೇನಹಳ್ಳಿ ಶಾಸನದಲ್ಲಿ[೫೧] ಅದೂರುಮಲ್ಲಿಕಾರ್ಜುನ ದೇವಾಲಯ ಕಟ್ಟಿಸಲು ಅಜವರ್ಮನ ತಾಯಿ ಅಂಗಿಯಬ್ಬೆ ದಾನನೀಡಿದ್ದಾಳೆ. ಇದೇ ಕಾಲದ ಕಲ್ಲಿಹಾಳ್ ಶಾಸನದಲ್ಲಿ ಪೆರ್ಗ್ಗಡೆಮಾದಿಮಯ್ಯ ಬನವಾಸಿದೇಶ, ಕಾಲಿಯಮರಸ ನಾಳಗಾಮುಂಡ ಬಸವೂರು-೧೪೦ ಆಳುತ್ತಿರುವಾಗ ಅಜ್ಜಡಿ ಸಹದೇವರಸ ದೇವರಿಗೆ ರಾಜನು ದಾನನೀಡಿದ ದಾಖಲೆಯಿದೆ. ಲಕ್ಷ್ಮಿದೇವಿ ರಾಜನ ರಾಣಿಯಿರಬಹುದು. ಪೊಟ್ಟಳಕೆಜಿ ನೇಲವೀಡಿನಲ್ಲಿರುವಾಗ ರಾಣಿಯ ವಿನಂತಿ ಮೇರೆಗೆ ದಾನ ನೀಡಿರಬಹುದು. ಸಹದೇವಯ್ಯನ ಮಗ ಚಾವುಂಡಮಯ್ಯ ಶ್ರೀಕಾಂತ-ಭಟ್ಟಾರಕನ ಕೈಯಲ್ಲಿ ಕೊಟ್ಟ ವಿವರವಿದೆ. ಇದೇ ಕಾಲದ ಅಡೂರು ಶಾಸನದಲ್ಲಿ ಮಹಾಮಾತ್ಯ ಪೆರ್ಗ್ಗಡೆಮಾದಿಮಯ್ಯ ಬನವಾಸಿ-೧೨೦೦೦, ಸಾಂತಳಿಗೆ-೧೦೦೦ ಮತ್ತು ಮಹಾಮಂಡಳೇಶ್ವರ ಮಯೂರವರ್ಮ ಪಾನುಂಗಲ್-೫೦೦ ಆಳುತ್ತಿರುವಾಗ ಕೆಲವರ ಹೆಸರು ಸ್ಪಷ್ಟವಿಲ್ಲ. ಬನಸಂಕರ ದೇವರ ದೇವಾಲಯಕ್ಕೆ ದಾನನೀಡಿದ ದಾಖಲೆಯಿದೆ. ಒಂದನೇ ಜಯಸಿಂಹ ಕಾಲದ ಕಣವಿಸಿದ್ದಗೇರಿ ಶಾಸನದಲ್ಲಿ ಭಗವತಿಯಭಟ್ಟ ಜಮದಗ್ನಿ ರಾಮೇಶ್ವರದೇವರಿಗೆ ಮಹಾಮಂಡಳೇಶ್ವರ ಪಾಂಡ್ಯದೇವರಸ ಮತ್ತು ಅವನ ಅಧೀನ ಅಧಿಕಾರಿ ಕುಮಾರ ಚಾವುಂಡನು ಭೂಮಿ, ಮನೆ ನಿವೇಶನ, ಎಣ್ಣೆಗಾಣ, ದೇವಸ್ಥಾನದ ಸ್ಥಾನಪತಿ ರಾಮಶಕ್ತಿದೇವನಿಗೆ ಒಪ್ಪಿಸಿದ ವಿವರವಿದೆ.

ಕ್ರಿ.ಶ. ೧೦೪೪-೪೫ರ ಒಂದನೇಸೋಮೇಶ್ವರನ ಅಡೂರು ಶಾಸನದಲ್ಲಿ[೫೨] ಕದಂಬವಂಶದ ಮಹಾಮಂಡಳೇಶ್ವರ ಮಯೂರವರ್ಮ ಪಾನುಂಗಲ್-೫೦೦ ಪ್ರಾಂತ್ಯ ಆಳುತ್ತಿರುವಾಗ ಮತ್ತು ದಂಡನಾಯಕ ಇಚಯ್ಯಭಟ್ಟ ಪಾ(ಣ್ಡಿ)ಯಾರುನಾಳುತ್ತಿರಲು ಭರ್ಮಗಾವುಂಡ ಕಾಳೇಶ್ವರದೇವರಿಗೆ ಭೂಮಿದಾನ ನೀಡಿದ ದಾಖಲೆಯಿದೆ. ಕ್ರಿ.ಶ. ೧೦೪೫ರ ಮೇದೂರು ಶಾಸನದಲ್ಲಿ[೫೩] ಎಡೆವಟ್ಟೆ-೭೦ರಲ್ಲಿ ಹೊಂದಿಕೊಂಡಿರುವ ಮೇಜವೂರ ಮಾಕಳೇಶ್ವರ ದೇವರಿಗೆ ಭೂಮಿ, ಮತ್ತು ತೋಟವನ್ನು ಮಹಾಸಾಮಂತಬಿಜ್ಜರಸ ದಾನ ನೀಡಿದ್ದಾನೆ. ಇದೇ ಕಾಲದ ಕೊಳೂರು ಶಾಸನದಲ್ಲಿ ರಾಜಗುರುದೇವ ಕಂದಬಾನ್ವಯ ಸಮುದ್ಧರು ಮತ್ತು ಪನ್ನರಡುಮ್-೧೨ ಆಳುತ್ತಿರುವಾಗ ಬಂಕಾಪುರದ ಇಂದ್ರೇಶ್ವರದೇವರ ಅಭಿವೃದ್ಧಿಗೋಸ್ಕರ ಭೂಮಿ ದಾನ ನೀಡಿ ವಾವರಸದೇವನ ಶಿಷ್ಯ ಮಲ್ಲಿಕಾರ್ಜುನಿಗೆ ಒಪ್ಪಿಸಿದ್ದಾನೆ. ಮತ್ತೊಂದು ಖಚರ ಕುಟುಂಬದ ಜೀಮೂತವಹನ ವಂಶದ ಕಲಿಯಮರಸನು ಸೂರ್ಯದೇವರ ದೀಪಾಲಂಕಾರಕ್ಕೋಸ್ಕರ ಮನೆಗಳನ್ನು ದಾನ ನೀಡಿದ್ದಾರೆ. ಕ್ರಿ.ಶ. ೧೦೪೭ರ ಬೆಳವಟ್ಟಿ ಶಾಸನದಲ್ಲಿ[೫೪] ಸ್ವಯಂಭುದೇವರ ದೇವಾಲಯದ ಜೀರ್ಣೋದ್ಧಾರಕ್ಕೆ ರಾಜನ ಸಾಮಂತಾಧಿಪತಿ ಮಯೂರವರ್ಮನು ದೇವರಾಸಿಪಂಡಿತನಿಗೆ ದಾನ ನೀಡಿದ್ದಾನೆ. ಕ್ರಿ.ಶ. ೧೦೪೮ರ ಮಲ್ಲೂರು ಶಾಸನದಲ್ಲಿ ಮಹಾಮಂಡಳೇಶ್ವರ ಚಾವುಂಡರಾಯ ಅರಸ ಬನವಾಸಿ-೧೨೦೦೦, ಸಾಂತಳಿಗೆ-೧೦೦೦ ಆಳುತ್ತಿರುವಾಗ ಕುಮಾರ ಚೋಮದೇವರಸನ ಮಗ

ಬಮ್ಮದೇವನು ಬಸವೂರ-೧೪೦ ಆಳುತ್ತಿರುವಾಗ ಮಲ್ಲವೂರಿಗೆ ಹೋಗಿ ತ್ರಿಭುವನಸಿಂಗಜೀಯನಿಗೆ ದಾನ ನೀಡಿದ ವಿವರವಿದೆ. ಕ್ರಿ.ಶ. ೧೦೪೯ರ ಇಂಗಳಗಂಡಿ ಶಾಸನದಲ್ಲಿ[೫೫] ಮಾಳೇಶ್ವರ ಮತ್ತು ಮಹದೇವದೇವರುಗಳ ನೈವೇದ್ಯ ಮತ್ತು ಪೂಜೆಗೋಸ್ಕರ ಮತ್ತು ಕರೆಯ ಅಭಿವೃದ್ಧಿಗೋಸ್ಕರ ಕೇತಾಗಾವುಂಡನು ದಾನ ನೀಡಿದ್ದಾನೆ. ಕ್ರಿ.ಶ. ೧೦೫೩ರ ನಿರಲಗಿ ಶಾಸನದಲ್ಲಿ[೫೬] ಮಹಾಮಂಡಳೇಶ್ವರ ಹರಿಕೇಸರಿದೇವರ, ಕಲಿದೇವರಿಗೋಸ್ಕರ ನಿರಲಿಗಿಯ ೩೦೦ ಮಹಾಜನರು, ಗದ್ದೆ, ತೋಟ ಮತ್ತು ಪಿರಿಯಕೆಜ಼ೆ ದಾನ ನೀಡಿದ ದಾಖಲೆಯಿದೆ. ಇದೇ ಕಾಲದ ಹಾವನೂರು ಶಾಸನದಲ್ಲಿ ತ್ರೈಲೂಕ್ಯಮಲ್ಲನ ಹಿರಿಯರಾಣಿ ಮೈಳಲದೇವಿ ಬನವಾಸಿ-೧೨೦೦೦ ಆಳುತ್ತಿರುವಾಗ ಮೂಲಸ್ಥಾನದ ಕಲಿದೇವಸ್ವಾಮಿಗೆ ಪೆರ್ಗ್ಗಡೆ ಬಾಚಿಮಯ್ಯ ಪೆರ್ಗ್ಗಡೆ ಜಕ್ಕಿಮಯ್ಯ ದಂಡನಾಯಕ ವಾಮನಯ್ಯ ವಾದಣಯ್ಯ ಎಂಬುವರು ಕೆಲವು ತೆರಿಗೆಗಳನ್ನು ನೀಡಿ ಚಿಲ್ಲುಕಾಚಾರ್ಯ್ಯರಿಗೆ ಒಪ್ಪಿಸಿದ್ದಾರೆ. ಮತ್ತೊಂದು ಇದೇ ಕಾಲದ ಕಲಕೇರಿ ಶಾಸನದಲ್ಲಿ ಕಲಕೇರೆ ಸೋಮೇಶ್ವರ ದೇವರ ಪೂಜೆ ನೈವೇದ್ಯ, ಸೊಡರೆಣ್ಣೆಗೆ, ಕುಪ್ಪುಟೂರಟ್ಠಾಣೆಯ ಮತ್ತು ತಿಳಿವಳ್ಳಿಯ ಟ್ಠಾಣೆಯದ ಅನೇಕ ಅಧಿಕಾರಿಗಳು ಸೋಮನಾಥಯ್ಯನ ಆದೇಶದ ಮೇರೆಗೆ ವಡ್ಡರಾವುಳ ಮಹಾಮಾತ್ಯ ವಾವಣಯ್ಯ ಪೆರ್ಗ್ಗಡೆ ಪೆರ್ಜುಂಕ ಮಹಾಮಂಡಳೇಶ್ವರ ಕೀರ್ತಿವರ್ಮ ದಾನನೀಡಿದ್ದಾರೆ. ಕ್ರಿ.ಶ. ೧೦೫೪ ಬೆಳವಟ್ಟಿ ಶಾಸನದಲ್ಲಿ[೫೭] ಮಹಾಮಂಡಳೇಶ್ವರ ಹರಿಕೇಸರಿದೇವ ಅವನ ಹೆಂಡತಿ ಲಚ್ಚೇಯಬ್ಬರಸಿ, ಇತರರು ಸ್ವಯಂಭು-ಕೊಗಳೇಶ್ವರ ದೇವರಿಗೆ ಅಗ್ರಹಾರ ಬೆಳವಂತೆ ಮನೆವನ ದಾನ ನೀಡಿದ ದಾಖಲೆಯಿದೆ. ಕ್ರಿ.ಶ. ೧೦೫೫ರ ಕಲಕೇರಿ ಶಾಸನದಲ್ಲಿ ಚಾಲುಕ್ಯ(ಕಲಿ)ಂಗ-ಪೆರ್ಮಾನಡಿ ವಿಕ್ರಮಾದಿತ್ಯದೇವ ಕೆಲವು ಬಿರುದುಗಳನ್ನು ಹೊಂದಿದ್ದ ಕೊಂಗುಳಿವರ್ಮ ಧರ್ಮ ಮಹಾರಾಜಾಧಿರಾಜ, ಕೋಳಾಳ ಪುರವರೇಶ್ವರಂ ಮತ್ತು ನನ್ದಗಿರಿನಾಥ, ಗಂಗವಾಡಿ-೯೬೦೦೦ ಮಹಾಮಾತ್ಯನಾರಣಯ್ಯ ಪೆರ್ಗ್ಗಡೆ ಬನವಾಸಿ-೧೨೦೦೦ ಆಳುತ್ತಿರುವಾಗ ಮಲ್ಲರಸ ನಾಳಗಾವುಂಡ ಬಸವೂರ-೧೪೦ ಮತ್ತು ಬೆಂಗೇರಿ ಉರಗಾಮುಂಡ, ಸೋವಗಾವುಂಡನ ಮಗ ಬಮ್ಮಯ್ಯ ಆಳುತ್ತಿರುವಾಗ ಬಮ್ಮಗಾವುಂಡ ಸೋಮೇಶ್ವರ ದೇವರ ನೈವೇದ್ಯಕಂ, ಸೊಡರೆಣ್ಣೆಗಂ ಭೂಮಿ ದಾನ ನೀಡಿದ ದಾಖಲೆಯಿದೆ. ಕ್ರಿ.ಶ. ೧೦೫೫ರ ಹಾನಗಲ್ಲು ತಾಲೂಕಿನ ಕಲಕೇರಿ ಶಾಸನದಲ್ಲಿ[೫೮] ಬೆಂಗೇರಿಯ ಗಾವುಂಡನಾದ ಬರ್ಮಗಾವುಂಡನು ಶ್ರೇಷ್ಠ ಶಿವಭಕ್ತನಾಗಿದ್ದನು. ಕರೆ ಸೋಮೇಶ್ವರನಿಗೆ ದತ್ತಿದಾನ ಬಿಟ್ಟಿರುವ ಈತನನ್ನು

**ಬಿಟ್ಟನಿವನಧಿಕ ಪುಣ್ಯ**
**ನಿಷ್ಠೆಯೊಳಗ್ಗಳಮೆನಿಪ್ಪ ಬರ್ಮನೆ ಗಾವುಣ್ಡಂ**
**ಪುಟ್ಟಿದನೆ ಕುಲಕ್ಕೆ ತಿಲಕಂ**
**ನೆಟ್ಟನೆ ಶಿವಭಕ್ತನಾತನ ಪೊಗಳದರಾರು**

ಎಂದು ಶಾಸನ ವರ್ಣಿಸಿದೆ. ಕಾಚೆಯ ಸಾಹ್ಣಶಿಯನ್ನು 'ಮಹಾಮಹೇಸ್ವರಂ ಸಮಯ ಧ(ರ್ಮ್ಮ) ಪ್ರತಿಪಾಳರುಮಮಪ್ಪ ಕಾಚೆಯ ಸಾಹಣಿ ಎಂದು ಶಾಸನದಲ್ಲಿ ಕರೆಯಲಾಗಿದೆ

ಕಲಿಹಾಳ ಶಾಸನದಲ್ಲಿ[೫೯] ಸುಂಕವೆರ್ಗ್ಗಡೆ ಚಟ್ಟಮಯ್ಯ, ಮನ್ನೆಯ ರಾಜಾದಿತ್ಯ ಅರಸ ಮತ್ತು ಬೇರೆಯವರು ಸಾದೇವೇಶ್ವರದೇವರ ನಂದಾದೀವಿಗೆಗೆ ತೆರಿಗೆಗಳಿಂದ ದಾನ ನೀಡಿದ್ದಾರೆ. ಖಚರಮನೆತನದ ಜೀಮೂತವಾಹನ ವಂಶದ ಕಲಿಯಮರಸನು ಅದೇ ದೇವರಿಗೆ ಹಣ ದಾನ ನೀಡಿದ್ದಾನೆ. ಕ್ರಿ.ಶ. ೧೦೬೨ರ ಹೆಡಿಗೊಂಡ ಶಾಸನದಲ್ಲಿ[೬೦] ತಡಸೂರ ಕಲಿದೇವರ ದೇವಾಲಯದ ಆಚಾರ್ಯ್ಯನಿಗೆ ಮಹಾನಾಳಪ್ರಭು ಅತ್ಯಮ್ಮಗಾವುಂಡ ಭೂಮಿದಾನ ನೀಡಿದ ದಾಖಲೆಯಿದೆ. ಕ್ರಿ.ಶ. ೧೦೬೩ರ ದೇವಿಹೊಸೂರು ಶಾಸನದಲ್ಲಿ[೬೧] ಮನ್ಮಹಾಮಣ್ಡಳೇಶ್ವರ ಚಾವುಣ್ಡರಾಯರಸ ಬನವಾಸಿ-೧೨೦೦೦, ಆಳುತ್ತಿರುವಾಗ ಇವನ ಮಗ ಮಹಾಸಾಮಂತ ಕುಮಾರ ಜೋಮದೇವರಸ ಬಾಸವೂರು-೧೪೦ ಬೆಳ್ಗುಹೆ-೭೦ ಮತ್ತು ಸತ್ತಳಿಗೆ-೭೦ ಆಳುತ್ತಿರುವಾಗ ಇನ್ನಪಯ್ಯ ರಾಜನ ಅಂಗರಕ್ಷನು ಪೊಸವೂರಲ್ಲಿ ಮಾಟಜದೇವಿಗೆ ಮಕರ ತೋರಣ ಮಾಡಿಸಿದ ವಿವರವಿದೆ. ಕ್ರಿ.ಶ. ೧೦೬೫ರ ದೇವಗೇರಿ ಶಾಸನದಲ್ಲಿ[೬೨] ಖಚವಂಶದ ರಾಜಾದಿತ್ಯರಸನು ಗೋಯಿನ್ದೇಶ್ವರ ದೇವರ್ಗ್ಗೆ ಮತ್ತು ಚಟ್ಟೇಶ್ವರದೇವರ್ಗ್ಗೆ ಭೂಮಿಯನ್ನು ಗಂಗರಾಸಿ ಮುನಿಪನಿಗೆ ವಹಿಸಿದ ದಾಖಲೆಯಿದೆ. ಕ್ರಿ.ಶ. ೧೦೬೭ರ ಬೆಳವಟ್ಟಿ ಶಾಸನದಲ್ಲಿ[೬೩] ಕೊಗಳೇಶ್ವರ ದೇವರ ಜೀರ್ಣೋದ್ಧಾರ, ನೈವೇದ್ಯ ಮತ್ತು ವಿದ್ಯಾಭ್ಯಾಸಕ್ಕೆ ರಾಜನು ಕಲ್ಲುವನ ನೇಲವೀಡಿನಲ್ಲಿರುವ ಇಲ್ಲೂರು ಗ್ರಾಮವನ್ನು ದೇವರಾಸಿಪಂಡಿತನಿಗೆ ದಾನ ನೀಡಿದ ವಿವರವಿದೆ. ಕ್ರಿ.ಶ. ೧೦-೧೧ನೇ ಶತಮಾನದ ಮೇದೂರು ಶಾಸನದಲ್ಲಿ ಮಾಕಳಗಾವುಂಡನ ಮೇಜವೂರ ಮಾಕಳೇಶ್ವರ ದೇವಾಲಯ ಕಟ್ಟಿಸಿ ಅಗ್ನಿಭಟ್ಟಾರಕನ ಪಾದ ತೊಳೆದು ದೇವಾಲಯಕ್ಕೆ ದಾನ ನೀಡಿದ ವಿವರವಿದೆ. ಹಟ್ಟೆಮಟ್ಟೂರು ಶಾಸನದಲ್ಲಿ ತೆಲ್ಲಿಗ ಜಯಸಿಂಗಯ್ಯಸೆಟ್ಟಿ ಮತ್ತು ಇತರರು ಅಯ್ವತ್ತೊಕಲು ಸಮುದಾಯದವರು ಎಣ್ಣೆ ಮತ್ತು ಭತ್ತವನ್ನು ಭೋಗೇಶ್ವರ ದೇವರಿಗೆ ದಾನ ನೀಡಿದ್ದಾರೆ.

ಕ್ರಿ.ಶ. ೧೦೬೯ರ (ಎರಡನೇ ಸೋಮೇಶ್ವರ) ತ್ರುಟಿತಶಾಸನ ಇಟಗಿ ಗ್ರಾಮದ[೬೪] ಮಹಾಸಾಮಂತ ಹೆಸರು ಇಲ್ಲ. ರಟ್ಟಪಳ್ಳಿ-೭೦, ಇಟಗಿ-೩೦ ನೊಳುಂಬಾಡ ಆಳುತ್ತಿರುವಾಗ ಇಟಗಿಯ ವಿರೂಪಾಕ್ಷದೇವರ್ಗ್ಗೆ ಸ್ನಾನ, ನೈವೇದ್ಯಕ್ಕೆ ಒಂದು ಮತ್ತರು ಭೂಮಿ ದಾನ ನೀಡಿದ ದಾಖಲೆಯಿದೆ. ಕ್ರಿ.ಶ. ೧೦೭೨ರ ಹೀರೆಸಂಗಿ ಶಾಸನದಲ್ಲಿ ಮೂಲಸ್ಥಾನ ಸಂಕರಕಲಿದೇವ ದೇವಾಲಯ ಕಟ್ಟಲು ಚಟ್ಟೆಕಬ್ಬೆ-ಗಾವುಂಡಿ ಭೂಮಿ ದಾನ ನೀಡಿದ ವಿವರ, ಇವಳ ಮಗ ಚಿಕ್ಕಗಾವುಂಡ ಪಿರಿಯಕನ್ನಿಗೆ ಗ್ರಾಮವನ್ನು ಆಳುತ್ತಿರುವುದನ್ನು ತಿಳಿಸುತ್ತದೆ. ಕ್ರಿ.ಶ. ೧೦೭೩ರ ಮಟ್ಟಿಹಳ್ಳಿ ಶಾಸನದಲ್ಲಿ ಬನವಾಸಿ-೧೨೦೦೦, ನಾಗರಖಂಡ-೭೦ರ ಭಾಗದಲ್ಲಿ ಹೊಂದಿಕೊಂಡಿರುವ ಮುದಿಯನಪಳ್ಳಿಸ್ವಯಂಭುದೇವರ ನೈವೇದ್ಯ, ಪೂಜೆಗೋಸ್ಕರ ದಂಡನಾಯಕ ಮುಕಿಮಯ್ಯನ ಮಗ ಸೋಮೇಶ್ವರಭಟ್ಟನ ವಿನಂತಿ ಮೇರೆಗೆ ಮಹಾಮಂಡಳೇಶ್ವರ ಉದಯಾದಿತ್ಯನು ದಾನವನ್ನು ಪುನರ್‌ನವೀಕರಿಸಿದ ದಾಖಲೆಯಿದೆ. ಇದೇ ಕಾಲದ ಕೊಣನತಂಬಿಗೆ ಶಾಸನದಲ್ಲಿ[೬೫] ಸಂಕಗಾವುಂಡ ದೇವಾಲಯ ಕಟ್ಟಿಸಿ ಸಂಕೇಶ್ವರ ದೇವರ ಪೂಜೆ.

ನೈವೇದ್ಯಗೋಸ್ಕರ ಭೂಮಿ ದಾನ ನೀಡಿ ಈ ದಾನವನ್ನು ಚಂದ್ರಭರಣಪಂಡಿತನಿಗೆ ಒಪ್ಪಿಸಿದ್ದಾನೆ. ಕ್ರಿ.ಶ. ೧೦೭೫ರ ದೇವಗೇರಿ ಶಾಸನದಲ್ಲಿ[೬೬] ದೇವಂಮಗೇರಿ ಕಂಮಕಾಳೇಶ್ವರದೇವರ ಪೂಜೆಗೋಸ್ಕರ ದಂಡನಾಯಕವೆಣ್ಣಮಯ್ಯನು ತೆರಿಗೆ ಅಧಿಕಾರಿಗಳಾದ ನಾಗವರ್ಮ ಮತ್ತು ಚಿಕ್ಕಕೇತಯ್ಯ ನಿಗಡಿಪಡಿಸಿದ ತೆರಿಗೆಗಳಿಂದ ಜೊತೆಯಾಗಿ ಗಂಗರಾಸಿಪಂಡಿತನಿಗೆ ಕೊಟ್ಟ ವಿವರವಿದೆ. ಕ್ರಿ.ಶ. ೧೦೭೬ರ ಕಲಕೇರಿ ಶಾಸನದಲ್ಲಿ[೬೭] ಭುವನೈಕ್ಯಮಲ್ಲ ವೀರನೊಳಂಬ, ನೊಳಂಬವಾಡಿ, ಪಾನುಂಗಲ್ಲುನಾಡು ಮತ್ತು ಬನವಾಸಿದೇಶ ಆಳುತ್ತಿರುವಾಗ ಕಲಕೆಜ಼ ಸ್ವಯಂಭುಸೋಮೇಶ್ವರ ದೇವರ, ಗಂಧ, ಧೋಪ, ನಿವೆದ್ಯಕಂ ಋಷಿಗಳ ಅಹಾರಕ್ಕೆ ಬನವಾಸಿ-೧೨೦೦೦ ಒಂದು ಪ್ರಾಂತ್ಯದಲ್ಲಿ, ಬಸವೂರ-೧೪೦ರಲ್ಲಿ ದಕ್ಷಿಣದ ವರದಾನದಿಯ ಪುಲ್ಲವಳ ಗ್ರಾಮವನ್ನು ದೇವಸಿಂಗಜೀಯನಿಗೆ ದಾನ ನೀಡಿದ ದಾಖಲೆಯಿದೆ.

ಕ್ರಿ.ಶ. ೧೦೭೯ರ ಆರನೇವಿಕ್ರಮಾದಿತ್ಯನ ಗಳಗನಾಥ ಶಾಸನದಲ್ಲಿ[೬೮] ಯುವರಾಜ ಜಯಸಿಂಹ ಎರಡುನೊಱಮಂ, ಬನವಾಸಿ-೧೨೦೦೦, ಸಾನ್ತಳಿಗೆ-೧೦೦೦ ಆಳುತ್ತಿರುವಾಗ ಬರ್ಮಯ್ಯ ಎಂಬ ಸಂಗೀತಗಾರನು, ನೃತ್ಯ, ಸಂಗೀತ ಕಲೆಗಾರನಾಗಿ ೩೨ ರಾಗಗಳಲ್ಲಿ ಪ್ರವೀಣನಾಗಿದ್ದು ಗಳಗೇಶ್ವರದೇವರ ಮಂಟಪಕ್ಕೋಸ್ಕರ ೩೦ ಗದ್ಯಾಣ ದಾನ ನೀಡಿದ ದಾಖಲೆಯಿದೆ. ಇದೇ ಕಾಲದ ಕೂಳೂರು ಶಾಸನದಲ್ಲಿ ತ್ರೈಲೋಕ್ಯಮಲ್ಲ ವೀರನೊಳಂಬ (ಮೂರನೇ ಜಯಸಿಂಹ) ಸಾಂತಳಿಗೆ ಬೇರೆ ಭಾಗಗಳನ್ನು ಆಳುತ್ತಿರುವಾಗ ಮತ್ತು ಬಮ್ಮದೇವ ಬನವಾಸಿ-೧೨೦೦೦ ಆಳುತ್ತಿರುವಾಗ ಪೆರ್ಜುಂಕ ಮತ್ತು ಬಿಲ್ಕೊಡೆ ತೆರಿಗೆಗಳನ್ನು ಗ್ರಾಮೇಶ್ವರ ದೇವಾಲಯಕ್ಕೋಸ್ಕರ ಭೂಮಿ ದಾನ ನೀಡಿದ ದಾಖಲೆಯಿದೆ. ಕ್ರಿ.ಶ. ೧೦೮೦ರ ಗಳಗನಾಥ ಶಾಸನದಲ್ಲಿ ಜಯಸಿಂಹನ ಮಹಾಮಂಡಳೇಶ್ವರ ಚನ್ನರಸನು ಬೆಳುಹುಗೆಯೆರ್ಪ್ಪತ್ತು ಮೂವತಾಱುಂಬಾಡವೆರಡು (ಮೂವತ್ತಾರು ಗ್ರಾಮ ಉಪ ಪ್ರಾಂತ್ಯ) ಆಳುತ್ತಿರುವಾಗ ಬೆಳುಹುಗೆಯೆರ್ಪ್ಪತ್ತಱೊಳಗಣ ಸರ್ವನಮಸ್ಯದ(ಪು)ಲ್ಲುಣಿಯನಲ್ಲಿಯ ಗಳಗೇಶ್ವರದೇವರ್ಗ್ಗೆ ಪುನರ್ದತ್ತಿ ಮಾಡಿ ದೇವರಂಗಭೋಗ, ಸ್ನಾನ, ನಿವೆದ್ಯ, ಜೀರ್ಣೋದ್ಧಾರ, ಖಣ್ಡಸ್ಫುಟಿತ, ಗೀತವಾದ್ಯ ನ್ರಿತ್ಯವದ್ಧಿತಿಯ ಭಾಗ್ಯತಪೋಧನರ್ಗ್ಗೆ, ವಿದ್ಯಾರ್ಥಿ ಆಹಾರ, ನಿತ್ಯರ್ಕ್ಕಮೆನ್ದು ಧಾರಾಪೂರ್ವಕವಾಗಿ ಬಿಟ್ಟದ್ದನ್ನು ತಿಳಿಸುತ್ತದೆ. ಕ್ರಿ.ಶ. ೧೦೮೧ರ ಶೇಷಗಿರಿ ಶಾಸನದಲ್ಲಿ[೬೯] ರಾಜನ ಸಭಾಪತಿ ಸಿಂಗರಸ ಪಾನುಂಗಲ್-೫೦೦ ಆಳುತ್ತಿರುವಾಗ ಮಾಚಿಸೆಟ್ಟಿ, ಮಾಚಿಕಬ್ಬೆ ಮತ್ತು ಅಸಗಿಕಬ್ಬೆ ಹತ್ತಿಗುಂಡದಲ್ಲಿ ಲಿಂಗ ಪ್ರತಿಷ್ಠಾಪಿಸಿ ರೇವೇಶ್ವರದೇವರ ನೈವೇದ್ಯಗೋಸ್ಕರ ಗೊಮ್ಮಟ್ಟ ಆಚಾರ್ಯರಿಗೆ ಭೂಮಿ ದಾನ ನೀಡಿದ ವಿವರವಿದೆ. ಕ್ರಿ.ಶ. ೧೦೮೩ರ ಚಿಕ್ಕಕೆರೂರು ಶಾಸನದಲ್ಲಿ[೭೦] ತೆಲುಗುವಂಶದ ೫೦೦ ಮಹಾಜನಗಳ ಮುಂದೆ ಚಿಕ್ಕಕೆರೆಯಾರು ಅಗ್ರಹಾರದ ಬಿಯಪಸೆಟ್ಟಿ ಬಪ್ಪೇಶ್ವರ ದೇವರ ಪ್ರತಿಷ್ಠಾಪಿಸಿ, ಭೂಮಿ ದಾನ ನೀಡಿದ ದಾಖಲೆಯಿದೆ. ಹಾಗೂ ಕೂಡ ಇದೇ ದೇವರಿಗೆ ದೇವಾಲಯದ ನಿತ್ಯಕಾರ್ಯಕ್ಕೆ, ಎಣ್ಣೆಗಾಣ, ಭೂಮಿ ಕೆಲವು ವ್ಯಕ್ತಿಗಳು ದಾನ ಕೊಟ್ಟ ಬಗ್ಗೆ ವಿವರವಿದೆ. ಕ್ರಿ.ಶ. ೧೦೮೫ರ ಹೊಸೂರು ಶಾಸನದಲ್ಲಿ ಮಾಳೇಶ್ವರ ದೇವರ

ನಿತ್ಯನೈವೆದ್ಯ ಪೂಜೆ, ದೀಪಾರಾಧನೆಗೆ ಇತರರು, ೭೦೦-ಪೊಸವೂರಿನ ನಾಕಿಗಾವುಂಡನು ದಾನವನ್ನು ಪುನರ್ನವೀಕರಿಸಿ ಉಪಾಧ್ಯಾಯ ಕೇದಾರಶಕ್ತಿ ಪಂಡಿತನಿಗೆ ಒಪ್ಪಿಸಿದ ವಿವರವಿದೆ. ಅಯ್ಯಿವತ್ತು ಒಕ್ಕಲಿನವರು ಎಣ್ಣೆಗಾಣ ದಾನ ನೀಡಿದ ವಿವರವಿದೆ. ಕ್ರಿ.ಶ. ೧೦೮೫ರ ತಿಳಿವಳ್ಳಿ ಶಾಸನದಲ್ಲಿ ಮಹಾಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕ ಶ್ರೀಧರಭಟ್ಟ ಎಳವಟ್ಟಿ ಬೆಳವಳನಾಡ, ಬನವಾಸಿನಾಡಿನಲ್ಲಿ ತಿಳಿವಳ್ಳಿ ಅಗ್ರಹಾರದ ಶಂಕರನಾರಾಯಣ ದೇವರಿಗೆ ಪೆರ್ಗ್ಗಡೆ ಪರಸುರಾಮಯ್ಯ, ಸೇನಭೋವಚಂದಿಮಯ್ಯ, ರಾಜ್ಯಾಧ್ಯಕ್ಷ ಮತ್ತು ಬೇರೆಯವರು ವಡ್ಡರಾವುಳ, ಪೆರ್ಜುಂಕ ಸುಂಕಗಳಿಂದ ದಾನ ನೀಡಿದ್ದಾರೆ. ಕ್ರಿ.ಶ. ೧೦೮೭ರ ಹೊಟ್ಟೂರು ಶಾಸನದಿಂದ ಹುಟ್ಟೂಯೂರಿನ ಬೀರೇಶ್ವರ ದೇವರ ನೈವೇದ್ಯ, ಪೂಜೆಗೋಸ್ಕರ, ತಿಕ್ಕಿಮಯ್ಯ, ನಾಕಿಮಯ್ಯ, ಸಿಂಗರಸ, ಬೇರೆಯವರು ಎಲೆಯಹೊಸೂರಿನ ಗ್ರಾಮ ಮತ್ತು ನಿಗದಿಡಿಸಿದ ಭಾಗಗಳಿಂದ ಸುಂಕ ತೆರಿಗೆಗಳಿಂದ ದಾನ ನೀಡಿದ್ದಾರೆ. ಇದೇ ಕಾಲದ ಹಟ್ಟಿಮಟ್ಟೂರು ಶಾಸನದಲ್ಲಿ[೭೧] ಮಾರ್ತಪುರದ ಭೋಗೇಶ್ವರ ದೇವರಿಗೆ ದಂಡನಾಯಕ ಸೋಮೇಶ್ವರಭಟ್ಟ, ವಡ್ಡರಾವುಳದ ಅಧಿಕಾರಿ ಶಿವರಾಜ ಮತ್ತು ಇತರರು ದಾನ ಮಾಡಿ, ಮಾರ್ತ್ಮಯಪುರದ ಊರೊಡೆಯ ಮತ್ತು ೨೦೦ ಮಹಾಜನರಿಗೆ ಆ ಸ್ಥಳದಲ್ಲಿ ಕೊಟ್ಟ ವಿವರವಿದೆ. ಕ್ರಿ.ಶ. ೧೦೮೮ರ ಕಲಕೇರಿ ಶಾಸನದಲ್ಲಿ ಮಹಾಮಾತ್ಯಪೆರ್ಗ್ಗಡೆ ಚಂಗದೇವಯ್ಯ ಮತ್ತು ಬೇರೆಯವರು ದಂಡನಾಯಕ ಶ್ರೀಧರಯ್ಯ ಮತ್ತು ದಂಡನಾಯಕ ಆಸಪಯ್ಯ ವಡ್ಡರಾವುಳವೆರಡುಂ ಬಿಲ್ಕೊಡೆ ಸುಂಕನಾಳುತ್ತಮಿರಲು ಕೆಲವು ನಿಗದಿಪಡಿಸಿದ ತೆರಿಗೆಗಳಿಂದ, ಸುಂಕಗಳಿಂದ ದೇವಾಲಯ ನೈವೇದ್ಯ, ಗಂಧ, ಧೋಪ ಪುನರ್ದತ್ತಿಯಾಗಿ ದಾನ ನೀಡಿದ ದಾಖಲೆಯಿದೆ. ಕ್ರಿ.ಶ. ೧೦೯೦ರ ಕೊಡಮಗ್ಗಿ ಶಾಸನದಲ್ಲಿ ಸ್ವಯಂಭು ಸೋಮನಾಥದೇವರಿಗೆ ಮತ್ತು ಬೇರೆಯವರು ಭೂಮಿ, ತೋಟ ಮತ್ತು ಎಣ್ಣೆಗಾಣವನ್ನು ಕೊಡಮಾಗೆ ಅಗ್ರಹಾರ ಊರೊಡೆಯರಿಗೆ ಮತ್ತು ಮಾದಿಮಯ್ಯನ ಮಕ್ಕಳಾದ ಬಮ್ಮದೇವ ಮತ್ತು ನಾರಣದೇವರಿಗೆ ದಾನ ಒಪ್ಪಿಸಿದ ವಿವರವಿದೆ. ಕ್ರಿ.ಶ. ೧೦೯೨(?)ರ ಮಲ್ಲೂರು ಶಾಸನದಲ್ಲಿ[೭೨] ಮಹಾಪ್ರಧಾನ ದಂಡನಾಯಕ ಆಚರಸ ಮತ್ತು ಇವನ ಬಾವಮೈದ ಪೊಂಟರಸ ಬನವಾಸಿ-೧೨೦೦೦ ಮತ್ತು ಬಸವೂರ-೧೪೦ ಆಳುತ್ತಿರುವಾಗ, ಮಲ್ಲವೂರ ಅಱುವತ್ತುಒಕ್ಕಲು ಮತ್ತು ಎಂಟುಗಾವುಂಡರುಗಳು ಕೊಟೇಶ್ವರದೇವರ ಪೂಜೆಗೋಸ್ಕರ ಮಲ್ಲಿಕಾರ್ಜುನಪಂಡಿತನಿಗೆ ದಾನ ನೀಡಿದ್ದಾರೆ. ಇದೇ ಕಾಲದ ಬ್ಯಾಡಗಿ ಶಾಸನದಲ್ಲಿ ರಾಜನ ಉಪಸಭಾಪತಿ ಮಹಾಮಂಡಳೇಶ್ವರ ವೀರರಾಜೇಂದ್ರ ಗಾನಿಯರಾಯ ಬನವಾಸಿ-೧೨೦೦೦. ಆಳುತ್ತಿರುವಾಗ ಬೆಡಗಿಮಲ್ಲಿಕಾರ್ಜುನ ದೇವಾಲಯಕ್ಕೆ ದಾನಕೊಟ್ಟ ಬ್ರಹ್ಮ, ಪಂಡಿತನಿಗೆ ಒಪ್ಪಿಸಿದ ವಿವರವಿದೆ. ಕ್ರಿ.ಶ. ೧೧೦೨ರ ದೇವಗಿರಿ ಶಾಸನದಲ್ಲಿ[೭೩] ತ್ರಿಭುವನಸಿಂಗಿಪಂಡಿತರು ದೇವಂ[ಗೇರಿ] [ತ]ಮ್ಮುಗೆ ಕಳಸೂರು ಪ್ರಾಂತ್ಯಗಳನ್ನು ಆಳುತ್ತಿರುವಾಗ ತ್ರಿಭುವನೇಶ್ವರದೇವರ ಪ್ರತಿಷ್ಠೆ ಮಾಡಿ ದೇವರ ರಂಗಭೋಗಕ್ಕೆ ಪಾವುಳಕ್ಕೆ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆಂ (ತಪೋ)ಧನರಾಹಾರದಾನಕ್ಕೆ ದಾನ ನೀಡಿದ ದಾಖಲೆಯಿದೆ. ಕ್ರಿ.ಶ. ೧೧೦೩ರ ಗೆಜ್ಜೆಹಳ್ಳಿ ಶಾಸನದಲ್ಲಿ ಗೆಜ್ಜೆ ಕುಟುಂಬದ ಬೊಪ್ಪಗಾವುಂಡನು

ಗೆಜ್ಜೆಯಹಳ್ಳಿ ದೇವಾಲಯದ ಮೂಲಸ್ಥಾನದ ಎರಡು ದೇವರುಗಳಿಗೆ ಪೂಜೆಗೋಸ್ಕರ ಸ್ಥಾನಪತಿ ಸೋಮೇಶ್ವರ ಪಂಡಿತನಿಗೆ ಭೂಮಿದಾನ ನೀಡಿದ ದಾಖಲೆಯಿದೆ. ಕ್ರಿ.ಶ. ೧೧೦೫ರ ಕನಸವಿ ಶಾಸನದಲ್ಲಿ ಕರಡಿಕಲ್ಲಿ-ಮುನ್ನೂರರಲ್ಲಿ ಹೊಂದಿಕೊಂಡಿರುವ ಕಣ್ಣಸಾವಿಯ ಬೆಟ್ಟದ ರಾಮೇಶ್ವರ ದೇವಾಲಯ ಆಚಾರ್ಯರಿಗೆ ಭೂಮಿ ದಾನ ನೀಡಿದ ವಿವರವಿದೆ. ಕ್ರಿ.ಶ. ೧೧೦೯ರ ಹಾವೇರಿ ಶಾಸನದಲ್ಲಿ[೭೪] ನಿಂಬರಸನ ತಂದೆ ದಂಡನಾಯಕ ಮಾಧವಭಟ್ಟ ಇವನನ್ನು ಪನ್ನಾಯದ ತೆರಿಗೆ ಅಧಿಕಾರಿ ಮಹಾಪ್ರಧಾನ ಬಾಣಸವೆರ್ಗ್ಗಡೆ ದಂಡನಾಯಕ ಅನಂತಪಾಲ ಬನವಾಸೆ-೧೨೦೦೦ ಆಳುತ್ತಿರುವಾಗ ವಡ್ಡರಾವುಳ ಮತ್ತು ಪನ್ನಾಯ ತೆರಿಗೆಗಳನ್ನು ವಹಿಸಿಕೊಂಡಿದ್ದು ಹಾವೇರಿ ಸಿದ್ದೇಶ್ವರ ದೇವಾಲಯದ ನೃತ್ಯ ಮತ್ತು ಸಂಗೀತಗೋಸ್ಕರ ನಿಂಬರಸನ ಜೊತೆಗೆ ಗಾತ್ರಿಗರು ಹಾವೇರಿಯ ೪೦೦ ಮಹಾಜನರ ಮುಂದೆ ದಾನ ಮಾಡಿದ ದಾಖಲೆಯಿದೆ. ಕ್ರಿ.ಶ. ೧೧೧೩ರ ಅರಿಕಟ್ಟೆ ಶಾಸನದಲ್ಲಿ ಎಕ್ಕಹಟ್ಟಿಯ ಬುವಗೌಡನಮಗ ಬೂಟಗೌಡನು ಸೋಮಲಗೊಳದ ಪ್ರಭುಭೂತೇಶ್ವರದೇವರ ಲಿಂಗ ಪ್ರತಿಷ್ಠಾಪಿಸಿದನ್ನು ತಿಳಿಸುತ್ತದೆ. ಕ್ರಿ.ಶ.೧೧೧೬ರ ಮಲಗುಂದ ಶಾಸನದಲ್ಲಿ ಬೀರಗಾವುಂಡ ಮತ್ತು ಬೇರೆಯವರು ಮಲ್ಲಿಕಾರ್ಜುದೇವರ ನೈವೇದ್ಯಗೋಸ್ಕರ ಭೂಮಿದಾನ ನೀಡಿದ ದಾಖಲೆಯಿದೆ. ಇದೇ ಕಾಲದ ಹಾವಣಗಿ ಶಾಸನದಲ್ಲಿ ಹಾವಾಣಿಗೆ ರಾಮೇಶ್ವರ ಮೂಲಸ್ಥಾನ ದೇವರ ಮುಂದೆ ಸಾರ್ವಜನಿಕ ಉಪಯೋಗಕ್ಕೆ ಕದಂಬಮುಖ್ಯಸ್ಥ ಮಹಾಮಂಡಳೇಶ್ವರ ತೈಲಹದೇವ ವರದನದಿಯ ಪವಿತ್ರಸ್ಥಳದಲ್ಲಿ ಸ್ನಾನಕ್ಕೋಸ್ಕರ ಭೂಮಿ ದಾನ ನೀಡಿದ್ದಾರೆ. ಇದೇ ಕಾಲದ ಅಗಡಿ ಶಾಸನದಲ್ಲಿ[೭೫] ಮಹಾಪಸಾಯಿತ ಬಂಕೆಯರಸ ಬನವಾಸಿ-೧೨೦೦೦ ಬೆಳುಗೆಹೆಯಪ್ಪತ್ತು, ಇಟಗಿ-೩೦ ಅಗಂಡೆ ಕೆಲವು ಅಗ್ರಹಾರಗಳನ್ನು ಆಳುತ್ತಿದ್ದಾಗ ಇವನ ಸಾಮಂತನು ಅಗಂಡೆ ಬಿರುದರದೇವನು ಬಿರುದೇಶ್ವರ ದೇವಾಲಯ ಕಟ್ಟಿಸಿ ಪೂಜೆ, ನೈವೇದ್ಯಕ್ಕೋಸ್ಕರ ಕೆಲವು ಭೂಮಿಯನ್ನು ರೆಜಿಕಗಾವುಂಡನಿಂದ ಪಡೆದು ವರೇಶ್ವರಪಂಡಿತರ ಕಾಲನ್ನು ತೊಳೆದು ದಾನ ನೀಡಿದ ಹಾಗೂ ಬೇರೊಂದು ಎಣ್ಣೆ ಮತ್ತು ಭತ್ತದ ಭೂಮಿಯನ್ನು ದಾನ ನೀಡಿದ ದಾಖಲೆಯಿದೆ. ಕ್ರಿ.ಶ. ೧೧೧೮ರ ಬಾಳಂಬೀಡು ಶಾಸನದಲ್ಲಿ[೭೬] ಕದಂಬವಂಶದ ಮಹಾಮಂಡಳೇಶ್ವರ ತೈಲಹದೇವ ಬನವಾಸಿ-೧೨೦೦೦ ಮತ್ತು ಪಾನುಂಗಲ್ಲು-೫೦೦ ಆಳುತ್ತಿರುವಾಗ ಬಳ್ಳಾರೆಯಬೀಡಿನ ಬಮ್ಮಗಾವುಂಡನು ಸಮಸ್ತ ಪ್ರಜೆಗಳು ಶ್ರೀಗ್ರಾಮೇಶ್ವರ ದೇವರ ರಂಗಭೋಗಕ್ಕಂ, ನಿತ್ಯನೈವೇದ್ಯಕ್ಕಂ, ಖಂಡಸ್ಫುಟಿತ ಜೀರ್ಣೋದ್ಧಾರಕಂ ಚಯಿತ್ರ ಪಯಿತ್ರಕ್ಕಂ ಭೂಮಿ ದಾನನೀಡಿ ಈ ದಾನವನ್ನು ದೇವಸ್ಥಾನದ ಆಚಾರ್ಯ್ಯ ಅಮ್ರಿತರಾಸಿಪಂಡಿತನ ಕಾಲಂ ಕಚ್ಚಿ ದಾನ ನೀಡಿದ್ದಾರೆ. ಕ್ರಿ.ಶ. ೧೧೧೯ರ ಹಾನಗಲ್ ಶಾಸನದಲ್ಲಿ[೭೭] ಮಹಾಮಂಡಳೇಶ್ವರ ತೈಲಪದೇವ, ಬನವಾಸಿ-೧೨೦೦೦ ಮತ್ತು ಉಭಯಸಮಯ ಪಾನುಂಗಲ್-೫೦೦ ಆಳುತ್ತಿರುವಾಗ ಪಾನ್ತಿಪುರದ ಶಿವದೇವಾಲಯುದಲ್ಲಿ ಮಾಚೇಶ್ವರ ಮತ್ತು ಸರಸ್ವತಿ, ಕಾಂತೇಶ್ವರ ದೇವರುಗಳಿಗೆ ಭೂಮಿ ನೀಡಿ ಹಾಗೂ ಕಾಂತೇಶ್ವರದೇವರ ನೈವೇದ್ಯ, ಪೂಜೆ, ಋಷಿಗಳ ಆಹಾರದಾನಕ್ಕೆ ಭೂಮಿ ನೀಡಿದ್ದು ಹಾಗೂ ಸ್ವಯಂಭುಕಾಂತೇಶ್ವರದೇವರ ಜೀರ್ಣೋದ್ಧಾರಕ್ಕೆ ತ್ರೈಪುರುಷ ಪಂಡಿತದೇವನಿಗೆ ಭೂಮಿ ದಾನ

ನೀಡಿದ ದಾಖಲೆಯಿದೆ. ಕ್ರಿ.ಶ. ೧೧೨೦ರ ಇದೇ ಊರಿನ ಮತ್ತೊಂದು ಶಾಸನ ತ್ರೈಲಪ ಬನವಾಸಿ-೧೨೦೦೦, ಮತ್ತು ಹಾನುಗಲ್-೫೦೦, ಆಳುತ್ತಿರುವಾಗ ಪಾನ್ತಿಪುರದ ಬಲೇಶ್ವರ ದೇವಸ್ಥಾನದ ನೈವೇದ್ಯ, ಜೀರ್ಣೋದ್ಧಾರಕ್ಕೆ ಇತ್ಯಾದಿ, ದೇವರಾಸಿಪಂಡಿತರಿಗೆ ಭೂಮಿ ನಿಗದಿಪಡಿಸಿ ದಾನ ನೀಡಿದ ವಿವರವಿದೆ. ಇದೇ ಕಾಲದ ತಿಳಿವಳ್ಳಿ ಶಾಸನದಲ್ಲಿ ತಿಳಿವಳ್ಳಿ ಅಗ್ರಹಾರ ಸಾವಿರ ಜನರ ಮುಂದೆ ಮಲೆಯಭಟ್ಟೋಪಾಧ್ಯಾಯ ಕೈವಲ್ಯಗೊಸ್ಕರ, ರುದ್ರಭಟ್ಟೋಪಾಧ್ಯಾಯ ಮತ್ತು ಅವನ ಹೆಂಡತಿ ದಾನ ನೀಡಿದ್ದಾರೆ. ಹಾಗೂ ಕೂಡ ಮಾಳೇಶ್ವರದೇವರ ದೀಪಾರಾಧನೆಗೆ ದಂಡನಾಯಕ ವಿಷ್ಣುದೇವರಸ ದಾನ ನೀಡಿದ ದಾಖಲೆಯಿದೆ. ಇದೇ ಕಾಲದ ಬೆಳಿಗಾಲಪೇಟೆ ಶಾಸನದಲ್ಲಿ ಬೆಳಗಾಲಿ ಗ್ರಾಮದ ಅಗ್ರಹಾರದ ಸಾವಿರ ಮಹಾಜನರು ಶಿವಲಿಂಗ ಸ್ಥಾಪಿಸಿ ಭೂಮಿ ದಾನ ನೀಡಿದ್ದಾರೆ. ಕ್ರಿ.ಶ. ೧೧೨೧ರ ಹೀರೆಹಳ್ಳಿ ಶಾಸನದಲ್ಲಿ[೭೮] ಗೊಟ್ಟಗಡಿ ಅಂಗಜೇಶ್ವರ ದೇವರನ್ನು ಪ್ರತಿಷ್ಠಾಪಿಸಿ ದೇವರ ನೈವೇದ್ಯ ಪೂಜೆಗೋಸ್ಕರ ಗಾವುಂಡರು ಹಣ ಮತ್ತು ಎಣ್ಣೆಗಾಣ, ಮನೆ, ತೋಟ ದಾನ ನೀಡಿದ ದಾಖಲೆಯಿದೆ. ಇದೇ ಕಾಲದ ಸಬನೂರು ಶಾಸನದಲ್ಲಿ ಸಿಗ್ಗಾವೆ ಮಹಲೇಶ್ವರ ದೇವಾಲಯದ ಹಾರೇಶ್ವರ, ನಿತ್ಯನೈವೇದ್ಯಗೋಸ್ಕರ ಮಾದಿಗಾವುಂಡನ ಮಗ ಹೊಲ್ಲಗಾವುಂಡ ಅಮ್ರಿತರಾಶಿ ಪಂಡಿತನ ಶಿಷ್ಯ ಶಿವರಾಶಿಪಂಡಿತನಿಗೆ ಭೂಮಿ ದಾನ ನೀಡಿದ ದಾಖಲೆಯಿದೆ. ಇದೇ ಕಾಲದ ದೇವಗೇರಿ ಶಾಸನದಲ್ಲಿ ಮಹಾಸಾಮಂತಾಧಿಪತಿ ಮತ್ತು ಮನೆವೆರ್ಗ್ಗಡೆ ಈಶ್ವರಯ್ಯ ಬನವಾಸಿ-೧೨೦೦೦ ಮತ್ತು ಬೆಳ್ವಲ-೩೦೦, ಮತ್ತು ಪುಲಿಗೆರೆ-೩೦೦ ಆಳುತ್ತಿರುವಾಗ, ಖಾಚರ ಕುಟುಂಬದ ಜೀಮೂತವಾಹನ ವಂಶಸ್ಥ ಮಹಾಸಾಮಂತ ಹೆರ್ಮಾಡಿಯರಸ ಬಸವೂರ-೧೪೦ ಆಳುತ್ತಿರುವಾಗ ತ್ರಿಭುವನೇಶ್ವರ ಮತ್ತು ಭೈರವ ದೇವಸ್ಥಾನಗಳಿಗೆ ಭೂಮಿ ದಾನ ನೀಡಿ ತ್ರಿಭುವಸಿಂಗಿಪಂಡಿತನಿಗೆ ಒಪ್ಪಿಸಿದ ದಾಖಲೆಯಿದೆ. ಹಿರೇಕೆರೂರು ತಾಲೂಕಿನ ಕಾಗಿನೆಲೆಯಲ್ಲಿ ಕ್ರಿ.ಶ. ೧೧೨೧ರ ಶಾಸನದಲ್ಲಿ[೭೯] ಕಾಳೇಶ್ವರ ದೇವಾಲಯದ ಉಲ್ಲೇಖವಿದೆ. ಈ ದೇವಾಲಯವನ್ನು ನಿರ್ಮಿಸಿ ದೇವಾಲಯಕ್ಕೆ ನಾಟ್ಯಶಾಲೆಯನ್ನು ಮತ್ತು ಓಲಗ ಮಂಟಪವನ್ನು ದಿಶಾ ಪ್ರತಿಮೆಯನ್ನು ಅಲ್ಲದೆ ಆದಿತ್ಯ ಪ್ರತಿಮೆಯನ್ನು, ಗೃಹವನ್ನು ನಿರ್ಮಿಸಿದನೆಂದು ಉಲ್ಲೇಖಿಸುತ್ತದೆ. ಅಲ್ಲದೆ ಇಲ್ಲಿನ ಪೂರ್ಣಚಂದ್ರಜ್ಞಾನಮೂರ್ತಿ ಲೋಕಾಭರಣ ಪಂಡಿತ ಉಲ್ಲೇಖವೂ ಇಲ್ಲಿದೆ. ಹಿರೇಕೆರೂರು ತಾಲೂಕಿನ ಮತ್ತೊಂದು ಶಾಸನ ಕ್ರಿ.ಶ. ೧೧೨೨ರಲ್ಲಿ ಕಾಳಗಾವುಂಡ ಮತ್ತು ಕಾಳಿಸೆಟ್ಟಿಯರು ಬ್ರಹ್ಮೇಶ್ವರ ದೇವಾಲಯವನ್ನು ನಿರ್ಮಿಸಿ ಇಲ್ಲಿನ ಶಿವಶಕ್ತಿಪಂಡಿತರಿಗೆ ದೇವಾಲಯದ ಜವಾಬ್ದಾರಿಯನ್ನು ನೀಡಿದರೆಂದು ಉಲ್ಲೇಖಿಸುತ್ತದೆ[೮೦]. ಈ ದೇವಾಲಯಕ್ಕೆ ತಂಬುಲಿಗಸಾಸಿರ್ವ್ವರು, ಬಣಜಿಂಗರು ಮೊದಲಾದ ನಖರರು, ತೆಲ್ಲಿಗರು ಹಲವಾರು ದಾನದತ್ತಿಗಳನ್ನು ನೀಡಿದ ಉಲ್ಲೇಖವಿದೆ. ಕ್ರಿ.ಶ. ೧೧೨೩ರ ಚಿನ್ನಮುಳುಗುಂದೆ ಶಾಸನದಲ್ಲಿ[೮೧] ಸಾದೇಶ್ವರ ದೇವಾಲಯದಲ್ಲಿ ದೀಪಾರಾಧನೆಗೆ ದಂಡನಾಯಕ ಮಲ್ಲರಸ ಮತ್ತು ಮಹದೇವರಸ ಬಿಳ್ಕೊಡೆ ತೆರಿಗೆಯಿಂದ ದಾನವಾಗಿ ಒಂದು ಎಣ್ಣೆಗಾಣವನ್ನು ನೀಡಿದ ದಾಖಲೆಯಿದೆ. ಇದೇ ಕಾಲದ ಬಾಳಂಬೀಡು ಶಾಸನದಲ್ಲಿ ಮಹಾಮಂಡಳೇಶ್ವರ ತ್ರೈಲಪದೇವ

ಬನವಾಸಿ-೧೨೦೦೦ ಮತ್ತು ಪಾನುಂಗಲ್-೫೦೦ ಪ್ರಾಂತ್ಯಗಳನ್ನು ಆಳುತ್ತಿರುವಾಗ ಬಳ್ಳಾರೆಯಬೀಡಿನಲ್ಲಿ ತಾವು ಮಾಡಿಸಿದ ಬ್ರಹ್ಮೇಶ್ವರ ದೇವರಂಗಭೋಗ, ಜಳ, ಗಂಧಾಕ್ಷತೆ, ಪುಷ್ಪ, ಧೋಪದೀಪ, ನಿವೆದ್ಯ, ತಾಂಬೂಲ, ಅಷ್ಟವಿದಾರ್ಚನೆಗಂ, ಖಂಡಸ್ಫುಟಿತ ಜೀರ್ಣೋದ್ಧಾರಕ್ಕಂಗೋಸ್ಕರ ಭೂಮಿ ಇತರ ಹಾಗೂ ಶ್ರೀಚಿಕ್ಕೇಶ್ವರದೇವರ ಮಠದಾಚಾರ್ಯ್ಯ ನಿರ್ವ್ವಾಣಶಕ್ತಿ ದೇವರ ಶಿಷ್ಯ ವಿಮಳಶಕ್ತಿಪಂಡಿತ ದೇವರಿಗೆ ದಾನ ನೀಡಿದ ದಾಖಲೆಯಿದೆ. ಇದೇ ತೇದಿಯ ಹಾನಗಲ್ ಶಾಸನದಲ್ಲಿ ಕದಂಬವಂಶದ ತೈಲಪ ಬನವಾಸಿ-೧೨೦೦೦, ಪಾನಂಗಲ್-೫೦೦ ಮತ್ತು ಸಾಂತಳಿಗೆ-೧೦೦೦, ಆಳುತ್ತಿರುವಾಗ ತೈಲೇಶ್ವರದೇವರ ದೇವಾಲಯಕ್ಕೆ ನಿಗಡಿಪಡಿಸಿದ ಭೂಮಿ ದಾನ ನೀಡಿದ ವಿಷಯವಿದೆ. ಇದೇ ಕಾಲದ ನೆಗಲೂರು ಶಾಸನದಲ್ಲಿ[೮೨] ಮಹಾಪ್ರಧಾನ ಮನೆವೆರ್ಗ್ಗಡೆ ಮತ್ತು ದಂಡನಾಯಕ ಈಶ್ವರಯ್ಯ ಬನವಾಸೆನಾಡು ಮತ್ತು ೨೬೦ ಪ್ರಾಂತ್ಯ ಆಳುತ್ತಿರುವಾಗ ಸೋವರಸ ಮನೆವೆರ್ಗ್ಗಡೆ, ವಡ್ಡರಾವುಳ ಮತ್ತು ಪೆರ್ಜುಂಕ, ಬೆಳುಗೆ-ಎಪ್ಪತ್ತು ಬೇರೆ ಅಧಿಕಾರಿಗಳು ಸಿದ್ದೇಶ್ವರದೇವರ ವ್ಯವಸಾಯದ ಉತ್ಪನ್ನಗಳಿಗೋಸ್ಕರ ನಿಗದಿಪಡಿಸಿದ ತೆರಿಗೆಗಳಿಂದ ಮಲ್ಲರಸದಂಡನಾಯಕ ಅವನ ಪರವಾಗಿ ದಾನನೀಡಿದ. ಕಾಳಾಮುಖ ಶಾಲೆಯ ಜ್ಞಾನಶಕ್ತಿಪಂಡಿತನ ವಿವರವಿದೆ. ಕ್ರಿ.ಶ. ೧೧೨೪ರ ರಾಣಿಬೆನ್ನೂರು ತಾಲ್ಲೂಕಿನ ಹೊನ್ನತ್ತಿ ಶಾಸನದಲ್ಲಿ ಗುಟ್ಟವಂಶದ ಮಲ್ಲದೇವನ ತಮ್ಮ ದೇಕಣ್ಣ ಮತ್ತು ನಾಕಣ್ಣ ಪ್ರಧಾನ ಚೋಮ ಚಾಮೇಶ್ವರ ದೇವಾಲಯ ಕಟ್ಟಿಸಿ ಭೂಮಿ ದಾನ ನೀಡಿದ್ದಾರೆ. ಈ ದಾನವನ್ನು ದೇವಾಲಯದ ಆಚಾರ್ಯ್ಯ ಬ್ರಹ್ಮರಾಶಿಜೀಯನಿಗೆ ವಹಿಸಿ ಕೊಟ್ಟ ವಿವರವಿದೆ. ಇದೇ ಕಾಲದ ಅರತಾಳ್ ಶಾಸನದಲ್ಲಿ ಹರಿಟಾನ ಕೇತೇಶ್ವರ ದೇವಾಲಯಕ್ಕೆ ಮಲ್ಲಗೌಡನು ಭೂಮಿ ದಾನ ನೀಡಿದ್ದಾನೆ. ಹಾನಗಲ್ ತಾಲೂಕಿನ ಕಲಿಕೇರಿ ಶಾಸನದಲ್ಲಿ[೬೩] ಶ್ರೀಮದಮರೇಂದ್ರ ರುದ್ರಶಿಖಾಮಣಿಗಣಿ ತರುಣಕಿರಣ ಪರಿಬ್ರಡಚರಣ ಸೊಮಾರ್ಕನಳನಯುನಂ ಸೋಮೇಶ್ವರ ದೇವರಿಗೆ ಶಾಶ್ವತಸುಖಂ ಎಂದು ಹೇಳುತ್ತಾ, ಈ ಶಾಸನದಲ್ಲಿ ಉಲ್ಲೇಖಿತ ದಂಡನಾಯಕ ಗೋವಿಂದರಸನನ್ನು ಶಿವನ ವಿಭಿನ್ನ ಮೂರ್ತಿಗಳಿಗೆ ಹೋಲಿಸಿ ಹೇಳಲಾಗಿದೆ. ರಣರಂಗ ಭೈರವಂ ಗೋವಿಂದ ಅವಯವದಿಂ ಗಜಾಸುರ ನಾಗಾಶೂರವಾಗಿರೆಸೀಮ್ದಿ ಕೊಂದ ಭೈರವಾನದಟಂ ಜಟಾಶೂರನ-ನಾಸುರವಾಗಿರೆ ತಾಗಿಕೊಂದ ಭೈರವನಿವ ಎಂದು ಹೇಳುತ್ತ ಶಿವನ ಭೈರವ, ಗಜಾಸಂಹಾರ ಶಿವ, ಅಂಧಕಾಸುರ ಶಿವ ಹಾಗೂ ಮಹಾಪ್ರಳ ಭೈರವ ಎಂದು ಹೊಗಳಿದೆ. ಕ್ರಿ.ಶ. ೧೧೨೫ರ ಬಾಳೂರು ಶಾಸನದಲ್ಲಿ[೮೩] ತೈಲಪ ಬನವಾಸಿ, ಪಾನುಗಲ್ಲು ಆಳುತ್ತಿರುವಾಗ ಸ್ಥಾನಪತಿ ಕಾಳಯ್ಯಜೀಯ ಬಾಳೆಯೂರಿನಲ್ಲಿ ಬಾಳೆಯೂರಿನ ಬಮ್ಮಗಾವುಂಡನ ಮಗ ಕಾಳಗಾವುಂಡನಿಂದ ಭೂಮಿ ಖರೀದಿಸಿ ಲಿಂಗ ಸ್ಥಾಪಿಸಿ ಸೋಮೇಶ್ವರದೇವರಿಗೆ ಐವತ್ತೂಕ್ಕಲು ಎಣ್ಣೆ ವ್ಯಾಪಾರಿಗಳು ದೇವರ ನಂದಾದೀವಿಗೆಗೆ ದಾನ ನೀಡಿದ್ದಾರೆ. ಇದೇ ಕಾಲದ ನರೆಗಲ್ ಶಾಸನದಲ್ಲಿ ಮೂಲಸ್ಥಾನ ದೇವರಿಗೆ ಕಪಿಮಯ್ಯನ ಮಗ ಗೋವಿಂದದೇವ ದಾನ ನೀಡಿದ ವಿವರವಿದೆ. ಇದೇ ಊರಿನ ಕ್ರಿ.ಶ. ೧೧೨೬ರ ಶಾಸನದಲ್ಲಿ ಮಹಾಪ್ರಭು ದಾಸಿಮಯ್ಯನರೆಯಂಗಲ್ ಸಾವಿರ ಮಹಾಜನಗಳು ಸೂರ್ಯದೇವಾಲಯ ಕಟ್ಟಿಸಿ

ನಿಗದಿಪಡಿಸಿದ ಭೂಮಿ ದಾನ ನೀಡಿದ ವಿವರ ಹಾಗೂ ಭಳಾರಿಚಾಮುಂಡಿದೇವಿ ಗ್ರಾಮದ ಸಾವಿರ ಮಹಾಜನರು ಭೂಮಿ ದಾನ ನೀಡಿದ ದಾಖಲೆಯಿದೆ. ಕ್ರಿ.ಶ. ೧೧೨೬ರ ಹೀರೆಬೆಂಡಿಗೇರಿ ಶಾಸನದಲ್ಲಿ[೮೪] ಪೆರ್ಗ್ಗಡೆ ನರಸಿಂಹನು ನಾಚೇಶ್ವರ ದೇವಾಲಯದ, ನಿತ್ಯನೈವೇದ್ಯ ಮತ್ತು ದೀಪಸ್ಥಂಭಕ್ಕೆ ಸ್ವಯಂಭು ಮೂಲಸ್ಥಾನದ ಆಚಾರ್ಯ ರುದ್ರಶಕ್ತಿಪಂಡಿತನಿಗೆ ಭೂಮಿ ದಾನ ನೀಡಿದ ವಿವರವಿದೆ. ಕಾಲವಿಲ್ಲದ ತ್ರಿಭುವನಮಲ್ಲನ ನರೇಗಲ್ ಶಾಸನದಲ್ಲಿ ಮಹಾಮಂಡಳೇಶ್ವರ ತೈಲಪ ಬನವಾಸೆ-೧೨೦೦೦, ಪಾನುಂಗಲ್-೫೦೦ ಆಳುತ್ತಿರುವಾಗ ಮಹಾಪ್ರಭು ಕಪಿಮಯ್ಯ ನರೆಯಂಗಲ್ ಶಿವ ದೇವಾಲಯ ಕಟ್ಟಿಸಿದ. ನೀರಲಗಿ ಶಾಸನದಲ್ಲಿ ಕಲಿದೇವಸ್ವಾಮಿ ದೇವಾಲಯದ ದೀಪಾರಾಧನೆಗೆ ಕಂ(ಚೆಯ) ಭಟ್ಟೋಪಾಧ್ಯಾಯನು ಕೆಲವು ಭೂಮಿ ದಾನ ನೀಡಿ ರುದ್ರಶಕ್ತಿ ಪಂಡಿತನಿಗೆ ಒಪ್ಪಿಸಿದ ದಾಖಲೆಯಿದೆ. ಯಳವಟ್ಟಿ ಶಾಸನದಲ್ಲಿ ತ್ರಿಭುವನಮಲ್ಲನ ರಾಣಿ ಮಾಳಲದೇವಿ ಮಾಳಬೇಶ್ವರ ದೇವಾಲಯ ಕಟ್ಟಿಸಿದ ಭೂದಾನೆ ತೆಂಗಿನಮಠದ ವರೇಶ್ವರಪಂಡಿತನ ಶಿಷ್ಯ ಸೂರ್ಯಭರಣಪಂಡಿತ ದೇವಾಲಯದ ಆಚಾರ್ಯ್ಯ ಮಾಳಬೇಶ್ವರ ಮತ್ತು ಬೇರೆ ಸ್ಥಾನಗಳು ಸೂರ್ಯಭರಣ ಈಶಾನಪಂಡಿತನಿಗೆ ದಾನ ನೀಡಿದ ವಿವರ, ಹಾಗೂ ಕೂಡ ಬಮ್ಮಗಾವುಂಡ ಎಳವಟ್ಟಿ-೭೦ರಲ್ಲಿ ಮೈಳಾಲದೇವಿಯ ಕೈಯಲ್ಲಿ ೧೦೦೦ ಗದ್ಯಾಣ ಚಿನ್ನ ಕೆಲವು ಭೂಮಿ ದಾನ ನೀಡಿದ ದಾಖಲೆಯಿದೆ. ರಾಮತೀರ್ಥ ಶಾಸನದಲ್ಲಿ ಕೆಲವು ಗಾವುಂಡರು (ಹೆಸರು ಸ್ಪಷ್ಟವಿಲ್ಲ) ಗ್ರಾಮದ ಎಪ್ಪತ್ತು ರಾಮೇಶ್ವರದೇವರ ನಿತ್ಯನೈವೇದ್ಯಗೋಸ್ಕರ ಭೂಮಿಯನ್ನು ರಾಮತೀರ್ಥದ ರಾಮೇಶ್ವರ ಉಪಾಧ್ಯಾಯರಿಗೆ ದಾನ ನೀಡಿದ ವಿವರವಿದೆ. ಕಲಿಕೇರಿ ಶಾಸನದಲ್ಲಿ ಜಯಸಿಂಗನ ಒಬ್ಬ ಸಾಮಂತ ದಂಡನಾಯಕ ಗೋವಿಂದರಸ ಬನವಾಸಿ-೧೨೦೦೦ ಮತ್ತು ವಡ್ಡರಾವುಳ ಸುಂಕದ ಮಹಾಪ್ರಧಾನದಂಡನಾಯಕ ಅನಂತಪಾಲಯ್ಯ ಎರಡು ೬೬೦ ಜಿಲ್ಲೆಗಳು ಬನವಾಸಿ-೧೨೦೦೦, ಪಲಸಿಗೆ-೧೨೦೦೦ ಮತ್ತು ವಡ್ಡರಾವುಳ ಮತ್ತು ಅಚ್ಚುಪನ್ನಾಯ ಸುಂಕ ೭೧/೨ ಲಕ್ಷ ದೇಶ ಆಳುತ್ತಿರುವಾಗ ಕಲಿಕೇರೆ ಸೋಮೇಶ್ವರ ದೇವರಿಗೆ ದಾನ ನೀಡಿದ ದಾಖಲೆಯಿದೆ. ನರೇಗಲ್ ಶಾಸನದಲ್ಲಿ ಮಹಾಮಂಡಳೇಶ್ವರ ತೈಲಪ ಬನವಾಸಿ-೧೨೦೦೦, ಪಾನುಂಗಲ್-೫೦೦ ಆಳುತ್ತಿರುವಾಗ ಮಹಾಪ್ರಭು ಕಪಿಮಯ್ಯ ನರೆಯಂಗಲ್ ಶಿವದೇವಾಲಯ ಕಟ್ಟಿಸಿದ ವಿವರವಿದೆ.

ಕ್ರಿ.ಶ. ೧೧೨೬ರ ಮೂರನೇ ಸೋಮೇಶ್ವರನ ಮಾಡರು ಶಾಸನದಲ್ಲಿ ಮುಡೆಯೂರು ಸೊವಗಾವುಂಡನು ಮಲ್ಲಿಕಾರ್ಜುನದೇವರ ನೈವೇದ್ಯಗೋಸ್ಕರ ಭೂಮಿ ದಾನ ನೀಡಿ ಬೊಪ್ಪಜೀಯಪಂಡಿತನಿಗೆ ಕೈಗೆ ಒಪ್ಪಿಸಿ ಮಗನಾದ (ಅವನ ಶಿಷ್ಯ) ಮಲ್ಲಿಕಾರ್ಜುನ ಜೀಯನಿಗೆ ದಾನ ನೀಡಿದ ವಿವರವಿದೆ. ಕ್ರಿ.ಶ. ೧೧೨೯ರ ನಾಗವಂದ ಶಾಸನದಲ್ಲಿ[೮೫] ಎಡವಟ್ಟಿ ೭೦ರಲ್ಲಿ ಹೊಂದಿಕೊಂಡಿರುವ ನಾಗರ್ಜುನ ಬ್ರಹ್ಮೇಶ್ವರದೇವರ ಮುಂದೆ ದೀಪಾರಾಧನೆಗೆ ಹಂದರ-ಹಣ ತೆರಿಗೆಗಳ ಆದಾಯದಿಂದ ನಂದವಂಶದ ಮಾಚರಸ ಅಧೀನ ಅಧಿಕಾರಿ ಭುವನಿಂದ ದಾನ

ನೀಡಿದ ದಾಖಲೆಯಿದೆ. ಕ್ರಿ.ಶ. ೧೧೩೦ರ ತಿಳಿವಳ್ಳಿ ಶಾಸನದಲ್ಲಿ[೮೬] ಕಾಳಿಮೋಜನಮಗ ಗೋವಿಂದಮಯ್ಯನು ಜನಾರ್ಧನದೇವರ ದೇವಾಲಯದ ಪೂಜೆಗೋಸ್ಕರ ಮಣಲೆಯ ಪದ್ಮನಾಭಭಟ್ಟನ ಮಗ ವಾಸುದೇವೋಪಾಧ್ಯಾಯನಿಗೆ ದಾನ ನೀಡಿದ ದಾಖಲೆಯಿದೆ. ಕ್ರಿ.ಶ. ೧೧೩೧ರ ಚಿಕ್ಕಕೆರೂರು ಶಾಸನದಲ್ಲಿ ಚಿನ್ನಸೆಟ್ಟಿ ದೇವಸ್ಥಾನ ಕಟ್ಟಿಸಿ ಚಿನ್ನದೇವರ ನೈವೇದ್ಯ, ನಿತ್ಯಪೂಜೆಗೋಸ್ಕರ ೨ ಮತ್ತರು ಭೂಮಿಯನ್ನು ದಾನ ನೀಡಿದ ವಿವರವಿದೆ. ಕ್ರಿ.ಶ. ೧೧೩೪ರ ದೇವಗೇರಿ ಶಾಸನದಲ್ಲಿ[೮೭] ಖೇಚರಕುಲದ ಕರಿಯಮ್ಮರಸ ಬಸವೂರು-೧೪೦ರ ರಾಜ್ಯಪಾಲನು ಕನಕೇಶ್ವರದೇವರಿಗೆ ಭೂಮಿ ದಾನ ನೀಡಿದ ದಾಖಲೆಯಿದೆ. ಕ್ರಿ.ಶ. ೧೧೩೬ರ ಬೆಳವಟ್ಟಿ ಶಾಸನದಲ್ಲಿ ಸುಂಕವೆರ್ಗ್ಗಡೆ ನರನಯ್ಯನಾಯಕ ಮತ್ತು ಪೆರ್ಗ್ಗಡೆ ಅಪ್ಪಿಮಯ್ಯ ಅಧೀನ ಅಧಿಕಾರಿ ಮಹಾಪ್ರಧಾನಿ ದಂಡನಾಯಕ ಪದ್ಮನಾಭಯ್ಯನಿಗೆ ಗೋಕುಲೇಶ್ವರ ದೇವಾಲಯಕ್ಕೆ ಹೆಚ್ಚಿನ ಆದಾಯವನ್ನು ದಾನ ನೀಡಿದ ವಿವರವಿದೆ. ಕ್ರಿ.ಶ. ೧೧೪೦ರ ಅಂದಲಗಿ ಶಾಸನದಲ್ಲಿ[೮೮] ಉದ್ಧಾರ ಹೂಬಿಸೆಟ್ಟಿ ಹೂಬೇಶ್ವರ ದೇವಾಲಯ ಕಟ್ಟಿಸಿ, ಜೀರ್ಣೋದ್ಧಾರ, ನಿತ್ಯ, ನೈವೇದ್ಯಗೋಸ್ಕರ ಅಂದನಿಗೆ ಅಱುವತ್ತಒಕ್ಕಲು ಮತ್ತು ಕನಕಗಾವುಂಡಿಕಬ್ಬೆ ಭೂಮಿ ದಾನ ನೀಡಿದ ದಾಖಲೆಯಿದೆ. ತೇದಿ ಇಲ್ಲದ ಹಾವೇರಿ ಶಾಸನದ್ದಲಿ ಕದಂಬ ಕುಟುಂಬದ ತೈಲಪ ವಣವಾಸೆ-೧೨೦೦೦, ಸಾಂತಳಿಗೆ-೧೦೦೦ ಮತ್ತು ಪಾನುಂಗಲ್ಲು-೫೦೦ ಆಳುತ್ತಿರುವಾಗ ಪೆರ್ಗ್ಗಡೆನಾಗದೇವ ಮತ್ತು ದುಗ್ಗರಾಜ ಪೆರ್ಜುಂಕ, ವಡ್ಡರಾವುಳ, ಮತ್ತು ಬಲ್ಕ್ಕೊಡೆ ತೆರಿಗೆಗಳ ಜವಾಬ್ದಾರಿ ಹೊಂದಿದ್ದರು. ಇದರಿಂದ ಸಿದ್ದೇಶ್ವರ ದೇವರಿಗೆ ಸರ್ವಜ್ಞ ಚಕ್ರವರ್ತಿ ಭೂಲೋಕಮಲ್ಲ ಕೆಲವು ನಿಗದಿಪಡಿಸಿದ ದಾನ ನೀಡಿದ ದಾಖಲೆಯಿದೆ.

ಕ್ರಿ.ಶ. ೧೧೪೨ರ ಎರಡನೆ ಜಗದೇಕಮಲ್ಲನ ಚೆನ್ನಮುಳುಗುಂದ ಶಾಸನದಲ್ಲಿ[೮೯] ಸ್ವಯಂಭು ಸೋಮೇಶ್ವರ ದೇವಾಲಯದ ಒಂದು ದೀಪಾರಾಧನೆಗೆ ಮುಗುಡುದ ಬೀರವಣ ಮತ್ತು ಪನ್ನಾಯ ತೆರಿಗೆಗಳ ಆದಾಯದಿಂದ ದಂಡನಾಯಕ ದೇವಧರ ದಾನ ನೀಡಿದ ವಿವರವಿದೆ. ಕ್ರಿ.ಶ. ೧೧೪೩ರ ಚಿಕ್ಕನಾರೆ ಶಾಸನದಲ್ಲಿ ದುರ್ಗೇಶ್ವರ ದೇವಾಲಯದಲ್ಲಿ ನೈವೇದ್ಯ ಮತ್ತು ನಂದಾದೀವಿಗೆಗೆ ಕೊಣಗಿರಿಯ ೫೦೦ ಭೂಮಿ ದಾನ ನೀಡಿದ ದಾಖಲೆಯಿದೆ. ಕ್ರಿ.ಶ. ೧೧೪೪ರ ಹಿರೇಕೆರೂರ ತಾಲೂಕಿನ ಹಂಸಬಾವಿ ಶಾಸನದಲ್ಲಿ[೯೦] ತುಯ್ಯಲಬೇಗೂರದ ಕೇತಗಾವುಂಡನಿಂದ ಮಲ್ಲಿಕಾರ್ಜುನ ಪಂಡಿತರಿಗೆ ಭೂದಾನ ದಾಖಲೆಯಿದೆ. ಕ್ರಿ.ಶ. ೧೧೪೭ರ ಮಣಗಿತ್ತಿ ಶಾಸನದಲ್ಲಿ ಹೊಲ್ಗೇಶ್ವರದೇವರಿಗೆ ಹೊಲ್ಲಿಯಣನು ಮಾರುಗಾವುಂಡನು ಬೆಣ್ಣೆಯ ಸಾಂತನಾದ ಕೇದಾರಗುರುಗಳ ಶಿಷ್ಯ ರುದ್ರಶಕ್ತಿಪಂಡಿತನ ಕಾಲಂಕರ್ಚಿ ದಾನ ನೀಡಿದ್ದಾನೆ. ಕ್ರಿ.ಶ. ೧೧೪೯ರ ದೇವಿಹೊಸೂರು ಶಾಸನದಲ್ಲಿ[೯೧] ದಂಡನಾಯಕ ರೇಚರಸನು ಬನವಾಸಿ-೧೨೦೦೦ ಬಳ್ಳಿಗ್ರಾಮೆಯ ನೇಲವೀಡಿನಿಂದ ಸುಖಸಂಕಥಾವಿನೋದದಿಂದ ಆಳುತ್ತಿರುವಾಗ ಮಾಳಚಿದೇವಿ ಪೂಜೆ, ನೈವೇದ್ಯಗೋಸ್ಕರ ಭೂಮಿ ದಾನ ನೀಡಿದ್ದಾಳೆ. ತೇದಿ ಇಲ್ಲದ ಅಗಡಿ ಶಾಸನದಲ್ಲಿ ಕೋಡಿಯ ಬೀಡಿನಯಮಿತರಸಿಯ ಕುಲವಧು ಪರತ್ರೆಯವಾಗಿ ಸಿವಲೆಯನೆತ್ತಿಸಿದಳು.

ಬಾಚೇಶ್ವರದೇವರ ರಂಗಭೋಗಕ್ಕೆ ಅಮಿತರಾಸಿಜೀಯರ ಪುತ್ರ ಮಾರೆಯನಾಯಕ ದಾನವಾಗಿ ಭೂಮಿ ಕೊಟ್ಟ ದಾಖಲೆಯಿದೆ. ಹಾಗೂ ಕೂಡ ಕಲ್ಲುಟಿಗ ದೇವಜ ಬಾಚೇಶ್ವರ ದೇವರ ಸುಕನಾಸಿಯ ಕಟ್ಟೆ ಭೂಮಿ ದಾನ ಪಡೆದಿದ್ದಾನೆ.

ಕ್ರಿ.ಶ. ೧೧೫೨ರ ಮೂರನೇ ತೈಲಪನ ಹಾವೇರಿ ಶಾಸನದಲ್ಲಿ[೯೧] ದಂಡನಾಯಕ ಮಹಾದೇವರಸನು ಬನವಾಸಿ-೧೨೦೦೦, ಹುಲಿಗೆರೆ-೩೦೦ ಆಳುತ್ತಿರುವಾಗ ಹಾವೇರಿಯ ಮಹಾಜನರ ಮುಂದೆ ಹಾಗೂ ಸಾವಾಸಿಮಾಯಿದೇವ ೫೦೦ ಬಣಜಿಗರನ್ನು ಜೊತೆಗೂಡಿ ದಾನ ನೀಡಿದ ದಾಖಲೆಯಿದೆ. ಇನ್ನೊಂದು ಶಾಸನ ಖಚರಮನೆತನದ ಜಿಮೂತವಾಹನ ಮಾಚಿದೇವನು ಹಣ ಮತ್ತು ತೆರಿಗೆಗಳಿಂದ ಇದೇ ದೇವರ ದೀಪಾಲಂಕಾರಕ್ಕೆ ದಾನ ನೀಡಿದ ವಿವರವಿದೆ. ಇದೇ ಊರಿನ ಕ್ರಿ.ಶ. ೧೧೫೭ರ ದಂಡನಾಯಕ ರತ್ನಭಟ್ಟನು ಇಂದ್ರೇಶ್ವರ, ಸಿದ್ದೇಶ್ವರ ದೇವರುಗಳಿಗೆ ಕೆರೆಯನ್ನು ದಾನ ನೀಡಿದ ವಿವರವಿದೆ. ಕ್ರಿ.ಶ. ೧೧೬೫ರ ನೀಡನೇಗಿಲ ಶಾಸನದಲ್ಲಿ[೯೩] ಬೆಳಗುತ್ತಿಯ ಸಿಂಧಿವಂಶದ ಮಹಾಮಂಡಳೇಶ್ವರ ಈಶ್ವರ ದೇವನಿಂದ ಊರೊಡೆಯ ಮಹಾದೇವನು ಕಟ್ಟಿಸಿದ ಮಲ್ಲಿಕಾರ್ಜುನ ದೇವಾಲಯಕ್ಕೆ ಕೆಲವು ಸುಂಕದಾನ ಉಲ್ಲೇಖಗೊಂಡಿದೆ. ಕ್ರಿ.ಶ.೧೧೮೭ರ ರಾಣಿಬೆನ್ನೂರ ತಾಲೂಕಿನ ಬೆಣಚಮಟ್ಟಿ ಶಾಸನದಲ್ಲಿ[೬೪] ಸಿಂಧಬಿಜ್ಜಳ ಮತ್ತು ವಿಕ್ರಮದೇವರಿಂದ ಯರಂಬರಗೆಯ ತೆಲ್ಲಿಗೇಶ್ವರ ದೇವಾಲಯಕ್ಕೆ ದಾನ ಉಲ್ಲೇಖಿಸಿದೆ.

ಕ್ರಿ.ಶ. ೧೧೯೫ರ ನಾಲ್ಕನೇಸೋಮೇಶ್ವರನ ಕುಮ್ಮಾರು ಶಾಸನದಲ್ಲಿ[೯೫] ಮಹಾ ಮಂಡಳೇಶ್ವರ ಜಗದಳಚಟ್ಟಮದೇವರಸ ಕುಮ್ಮೂರು ಗ್ರಾಮವನ್ನು ರಾಮನಾಥರ ದೇವರ ನೈವೇದ್ಯ, ಪೂಜೆ, ಇತರೆಗೋಸ್ಕರ ಮಹಾಪಸಾಯಿತ ಬಾಗ-ಗಾವುಂಡನಿಗೆ ಕೊಟ್ಟು ೨೦೦ ಗದ್ಯಾಣ, ಭೂಮಿ, ತೋಟ, ಎಣ್ಣೆಗಾಣ ಕೇದಾರಶಕ್ತಿ ಪಂಡಿತನ ಕಾಲು ತೊಳೆದು ಕೊಟ್ಟಿದ್ದಾನೆ. ತೇದಿರಹಿತ ಮಾಸಣಗಿ ಶಾಸನದಲ್ಲಿ[೯೬] ಲೋಕಟ್ಟೆ ಬನವಾಸಿಯನ್ನಾಳುವಾಗ ಬಾಸವೂರ ನಾಳ್ಗಾವುಂಡ ನೆಲ್ಲಿಗನಿಂದ ಮಾಸಳಿಗೆಯ ದೇವಾಲಯಕ್ಕೆ ದಾನ ನೀಡಿದ ವಿವರ ತಿಳಿಯುತ್ತದೆ.

ಕ್ರಿ.ಶ.೧೨೨೪ರ ಹಾನಗಲ್ಲು ತಾಲೂಕಿನ ಕಲಕೇರಿ ಶಾಸನದಲ್ಲಿ[೯೭] ಲಕ್ಷ್ಮೀಪಾಲದೇವ ಮತ್ತು ಸುಂಕವೆಗ್ಗಡೆ ಕಡುವಮಹಂತರಿಂದ ಸೋಮನಾಥ ದೇವಾಲಯಕ್ಕೆ ದಾನ ನೀಡಿದ ಉಲ್ಲೇಖವಿದೆ. ಕ್ರಿ.ಶ.೧೨೬೨ರ ರಾಣಿಬೆನ್ನೂರ ತಾಲ್ಲೂಕು ಚೌಡದಾನಪುರ ಶಾಸನದಲ್ಲಿ[೯೮] ಗುತ್ತಅರಸಾದಿಗಳು ಶಿವದೇವರಿಗೆ ಬೇರೆ ಬೇರೆ ಗ್ರಾಮಗಳಲ್ಲಿ ನೀಡಿದ ಭೂದಾನ ದಾಖಲೆಯಿದೆ. ಕ್ರಿ.ಶ. ೧೧-೧೨ ನೇ ಶತಮಾನದ ಹಾನಗಲ್ಲು ತಾಲೂಕಿನ ಬೆಳವತ್ತಿ ಶಾಸನದಲ್ಲಿ[೯೯] ಕೊಂಡಸಮನೆತನದ ಮಲ್ಲಿಸೆಟ್ಟಿ ಸ್ಥಾಪಿಸಿದ ಶಿವಲಿಂಗಕ್ಕೆ ಬೆಳಗಾಲಿಯ ಸಾಸಿರ್ವರು ನೀಡಿದ ಉಲ್ಲೇಖವಿದೆ. ಕ್ರಿ.ಶ. ೧೫ನೇ ಶತಮಾನದ ಹೊಂಬಳಿ ಶಾಸನದಲ್ಲಿ[೧೦೦] ಸಹವಾಸಿ ಹೊನ್ನರಸನು ರಾಮೇಶ್ವರ ದೇವಾಲಯ ನಿರ್ಮಾಣ ಮಾಡಿ ದೇವರನ್ನು ಪುನಃ ಸ್ಥಾಪಿಸಿದ ಹಾಗೂ ಅಚ್ಚಪ್ಪನಾಯಕ ದತ್ತಿ ನೀಡಿದ ಉಲ್ಲೇಖ ಕಂಡುಬರುತ್ತದೆ.

**ಕಾಳಾಮುಖರು:**

ಲಾಕುಲ ಅಥವಾ ಪಶುಪಥರಿಗೆ ಕಾಳಾಮುಖರೆಂದು ಹೆಸರು. ಕಳಾಮುಖರು ಕಪಾಲಿಕರ ಗುಂಪಿಗೆ ಸೇರಿದಂತೆ ರಾಮಾನುಜರು ನಿರೂಪಿಸಿದನ್ನು ಆಧಾರವಾಗಿ ಇಟ್ಟು ಡಾ.ಆರ್.ಜಿ. ಭಂಡಾರ್‌ಕರ್ ಅವರು ಕಾಳಾಮುಖರು, ಕಾಪಾಲಿಕರು ಒಂದೇ ಎಂದು ಹೇಳುತ್ತಾರೆ[೧೦೦]. ಇದಕ್ಕೆ ಯಾವ ಆಧಾರವೂ ಇಲ್ಲ. ಶೈವಧರ್ಮದ ಒಂದು ಶಾಖೆಯಾದ ಕಾಳಾಮುಖವು ೧೧ನೇ ಶತಮಾನದ ಮಧ್ಯದಿಂದ ೧೪ನೇ ಶತಮಾನದವರೆಗೂ ಹಾವೇರಿ ಪ್ರಾಂತ್ಯದಲ್ಲಿ ಪ್ರಬಲವಾಗಿತ್ತು.

ಕ್ರಿ.ಶ. ೮೮೦–೯೧೪ರ ಹಿರೇಕೆರೂರು ತಾಲೂಕಿನ ಅನಜಿ ಶಾಸನದಲ್ಲಿ[೧೦೨] ಶಕ್ತಿಪರಿಸೆ ಸಂಬಂಧಿಸಿದ ಒಂದು ದೇವಾಲಯಕ್ಕೆ ಭೂದಾನ ನೀಡಿರುವುದನ್ನು ನಮೂದಿಸುತ್ತದೆ. ಇದು ಬನವಾಸಿ ಪ್ರಾಂತ್ಯದ ಒಬ್ಬ ಸ್ಥಾನಿಕ ಆಳ್ವಿಕೆಯನ್ನು ವಿವರಿಸುತ್ತದೆ. ರಾಷ್ಟ್ರಕೂಟ ಅರಸ ಇಮ್ಮಡಿ ಕೃಷ್ಣನ ಕೈಕೆಳಗಿನವನಾಗಿದ್ದುದು ಕಂಡುಬರುತ್ತದೆ. ಕ್ರಿ.ಶ. ೧೦೫೫ ಹಿರೇಕೆರೂರು ತಾಲೂಕಿನ ಕಲಕೇರಿ ಶಾಸನದಲ್ಲಿ[೧೦೩] ಸೋಮೇಶ್ವರ ದೇವಾಲಯ (ಕೆರೆಯ ಸೋಮೇಶ್ವರ) ಹತ್ತಿರುವ ಶಾಸನದಲ್ಲಿ ಈತನ ಹೆಸರೇ 'ಪಾಶುಪತ ಶಯವ'ನೆಂಬುದನ್ನು ಸೂಚಿಸುತ್ತದೆ. ಶೈವಗುರುವಾದ ಈತನು 'ಯಮನಿಯಮ, ಸ್ವಾಧ್ಯಾಯ, ಧಾನ, ಧಾರಣ, ಮೋನಾನುಷ್ಠಾಣ, ಜಪ, ಸಮಾಧಿ, ಸಂಪನ್ನ'ನಾಗಿದ್ದನೆಂದು ಶಾಸನ ವಿವರಿಸುತ್ತದೆ. ಬೆಂಗೇರಿಯಪ್ರಭುಬರ್ಮಗಾವುಂಡನು ಸೋಮೇಶ್ವರ ದೇವಾಲಯಕ್ಕಾಗಿ ಪಶುಪತಿ ದೇವಚಾರ್ಯನಿಗೆ ದತ್ತಿ ಬಿಡುತ್ತಾನೆ. ಕ್ರಿ.ಶ. ೧೦೭೧ರ ಮತ್ತೊಂದು ಶಾಸನದಲ್ಲಿ[೧೦೪] ಮಳೆಯಾಳ ತಪೋನಿಧಿಗಳಾದ ದೇವಸಿಂಗಜೀಯರು ಸ್ಥಾನಪತಿಗಳಾಗಿದ್ದರು. ಇವರು ಆ ಕಾಲದ ಪ್ರಸಿದ್ಧ ಯತಿಗಳಲ್ಲಿ ಒಬ್ಬರಾಗಿದ್ದರು. ಇವರ ವ್ಯಕ್ತಿತ್ವವನ್ನು ಕಣ್ಣಿಗೆ ಕಟ್ಟುವಂತೆ ಶಾಸನದಲ್ಲಿ ವರ್ಣಿಸಲಾಗಿದ್ದು ಅದು ಇಂತಿದೆ :

> **"ಪರಹಿತರೆಂದುದಾತ್ತಯಶರೆಂದು ಜಿತೇಂದ್ರಯರೆಂದು ಯೋಗ ಪಂ**
> **ಕರುಹು ದಿನೇಶರೆಂದು ಸಕಳಾಗಮ ಕೋವಿದರೆಂದು ಧರ್ಮ ತತ್ವ**
> **ರರಿವರೆಂದು ಕೂತ್ತು ಮಲಯಾಳ ತಪೋನಿಧಿ ದೇವಸಿಂಗಜೀ**
> **ಯರ ಪದಯುಗ್ಮಮಂ ಪಡೆದು ಕಚ್ಚಿದರರ್ತ್ಥಿಯೆ ಪುಣ್ಯಮೂರ್ತಿಗಳ್"**

ಇದರಿಂದ ದೇವಸಿಂಗಜೀಯರು ಯಾವಾಗಲು ಪರಹಿತದ ಬಗ್ಗೆ ಚಿಂತಿಸಿ ಅವರಿಗೆ ನೆರವಿನ ಹಸ್ತ ನೀಡುತ್ತಿದ್ದರು. ಇಂದ್ರಿಯಗಳನ್ನು ಗೆದ್ದು ಅವುಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿರುವ ಇವರು ಯೋಗದಲ್ಲಿ ಸೂರ್ಯನಂತೆ ಪ್ರಜ್ವಲಿಸುತ್ತಿದ್ದರು ಸಕಲ ಆಗಮ, ಶಾಸ್ತ್ರಗಳನ್ನು ಬಲ್ಲಂಥ ಶ್ರೇಷ್ಠ ವಿದ್ವಾಂಸರೂ ಆಗಿದ್ದರು. ಇಂಥ ವಿದ್ವತ್ಪೂರ್ಣ ಯತಿಯಿಂದಾಗಿ ಕಲಕೇರಿ ಕಾಳಾಮುಖ ಶೈವ ಕ್ಷೇತ್ರವಾಗಿ ಪ್ರಸಿದ್ಧಿಯನ್ನು ಪಡೆಯಿತು. ಕ್ರಿ.ಶ. ೧೦೭೬ರ ಕಲಕೇರಿ ಇನ್ನೊಂದು ಶಾಸಾನದಲ್ಲಿ[೧೦೫] ಚಾಲುಕ್ಯ ಅರಸನಾದ ಇಮ್ಮಡಿ ದಂಡಾಧಿಪನೊಬ್ಬನು ಕಲಕೇರಿ ಸ್ವಯಂಭೂ ಸೋಮೇಶ್ವರ ದೇವ ಕಾಳಾಮುಖದೇವಾಲಯಕ್ಕೆ

ಒಂದು ಗ್ರಾಮವನ್ನು ದತ್ತಿಕೊಟ್ಟನು. ಹಾನಗಲ್ಲು ತಾಲೂಕಿನ ಕ್ರಿ.ಶ. ೧೧೧೯ರ ಶಾಸನದಲ್ಲಿ[೧೦೬] ಆರನೆಯ ವಿಕ್ರಮಾದಿತ್ಯ ಆಳ್ವಿಕೆಯ ಕಾಲದಲ್ಲಿ ಪಾಂತಿಪುರದ ಮೂಲ ಜಿಲ್ಲೇಶ್ವರ ದೇವಾಲಯಕ್ಕಾಗಿ ದೇವರ್ಷಿ ಪಂಡಿತನಿಗೆ ಕಾಣಿಕೆ ಕೊಟ್ಟಿದ್ದನ್ನು ತಿಳಿಸುತ್ತದೆ. ಇನ್ನೊಂದು ಇದೇ ತಾಲೂಕಿನ ಶಾಸನದಲ್ಲಿ[೧೦೭] ಕಾಣಿಕೆಯ ಪ್ರಸ್ತಾಪವಿದೆ ಹಾಗೂ ಬಹಳಷ್ಟು ಕಾಳಾಮು ದೇವಾಲಯಗಳು ಹಾಗೂ ಯತಿಗಳನ್ನು ಕುರಿತು ಶಾಸನದಲ್ಲಿ ದಾಖಲಾಗಿದೆ. ಕ್ರಿ.ಶ. ೧೧೯೫ರ ಬ್ಯಾಡಗಿ ತಾಲೂಕಿನ ಕುಮ್ಮಾರ ಶಾಸನದಲ್ಲಿ[೧೦೮] ಕಲ್ಯಾಣಿ ಚಾಲುಕ್ಯನ ನಾಲ್ವಡಿ ಸೋಮೇಶ್ವರನ ಆಳ್ವಿಕೆಯ ಕಾಲದಲ್ಲಿ ರಾಮನಾಥ ದೇವಾಲಯಕ್ಕೆ ನೀಡಲಾದ ದತ್ತಿಯನ್ನು ಉಲ್ಲೇಖಿಸುತ್ತದೆ. ವಕ್ತ್ರಶಿವಪಂಡಿತನ ಶಿಷ್ಯನಾದ ವಾಮಶಕ್ತಿದೇವನ ಶಿಷ್ಯನಾದ ಮಲ್ಲಿಕಾರ್ಜುನ ಶಿಷ್ಯನಾದ ಕೇದಾರಪಂಡಿತ ದೇವನೆಂಬ ಯತಿಯು ಎಂದು ದಾಖಲೆಯಾಗಿರುವುದು ಶಾಸನದಲ್ಲಿದೆ. ಕ್ರಿ.ಶ. ನೇ ಶತಮಾನದ ಹಿರೇಕರೂರು ತಾಲೂಕಿನ ತೇದಿರಹಿತ ಶಾಸನದಲ್ಲಿ[೧೦೯] ಕಾಳಾಮುಖ ಯತಿಗಳದ್ದಾಗಿರಬಹುದಾದ ಪರಂಪರೆ ದೊರೆತಿದೆ. ಅದು ಭಗವತಿಘಟ್ಟದ ಜಮದಗ್ನಿ ರಾಮೇರ್ಶವರ ದೇವನ ದೇವಾಲಯಕ್ಕೆ ನೀಡಲಾದ ಹಾಗೂ ರಾಮಶಕ್ತಿ ಎನ್ನುವನ ಶಿಷ್ಯನಾಗಿರಬಹುದಾದ ಸ್ಥಾನಚಾರ್ಯನಾದ ರಾಮಶಕ್ತಿ ದೇವನಿಗೆ ಒಪ್ಪಿಸಲಾದ ಕಾಣಿಕೆಯನ್ನು ದಾಖಲಿಸುತ್ತದೆ.

ಕ್ರಿ.ಶ. ೧೧೬೧-೧೧೮೩ರ ಹರಳಹಳ್ಳಿ ಶಾಸನದಲ್ಲಿ[೧೧೦] ಸೋಮೇಶ್ವರ ಅಥವಾ ಸ್ವಯಂಭೂ ಸೋಮನಾಥ ದೇವಾಲಯಕ್ಕೆ ಹೊಂಬಳಿಕೆ ಕೊಟ್ಟಿದ್ದನ್ನು ತಿಳಿಸುತ್ತದೆ. ದಾನ ಪಡೆದವನು ಕಲ್ಯಾಣಶಕ್ತಿ ದೇವನಾಗಿದ್ದು ಕಿಟ್ಟಿಗಾವೆ ಸಂತತಿಯ ಶಕ್ತಿ ಪರಿಷತ್ತಿನ ಪರ್ವತಾವಳಿಯ 'ಕಾಳಮುಖ'ನಾಗಿದ್ದನೆಂದು ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಕ್ರಿ.ಶ. ೧೧೮೧-೧೧೮೮ರ ಮತ್ತೊಂದು ಶಾಸನದಲ್ಲಿ[೧೧೧] ಗುತ್ತ ಅರಸು ವಿಕ್ರಮಾದಿತ್ಯ ದೇವನನ್ನು ಮಾತ್ರವಲ್ಲದೆ ಕಲ್ಯಾಣಶಕ್ತಿಯ ಹಾಗೂ ಪೂರ್ವಿಕರ ಧಾರ್ಮಿಕ ಸಾಮರ್ಥ್ಯಗಳನ್ನು ದೀರ್ಘವಾಗಿ ವಿವರಿಸಲಾಗಿದೆ. ಕ್ರಿ.ಶ. ೧೨೦೦ರ ಹಿರೇಕೆರೂರು ತಾಲೂಕಿನ ಶಾಸನದಲ್ಲಿ[೧೧೨] ಅಬ್ಬಲೂರಿನ ಸೋಮೇಶ್ವರ ದೇವಾಲಯದ ಮಿತಿಯನ್ನು ಒಳಗೊಂಡಂತೆ ೧೧೪೪ವರೆಗಾದರೂ ಕಾಳಾಮುಖರ ನಿಯಂತ್ರಣದಲ್ಲಿತ್ತೆಂದು ಬೇರೆ ಆಕರಗಳಿಂದ ತಿಳಿದುಬರುವ ಅಬ್ಬಲೂರಿನ ಬ್ರಹ್ಮೇಶ್ವರ ದೇವಾಲಯದಲ್ಲಿ ಏಕಾಂತರಾಮಯ್ಯ ದೇವತಾಸ್ತೋತ್ರ ಮಾಡಿದನೆಂದು ಈ ಶಾಸನದಲ್ಲಿ ಹೇಳಲಾಗಿದೆ. ಏಕಾಂತ ರಾಮಯ್ಯನು ಆ ಕಾಲಕ್ಕೆ ಕಾಳಾಮುಖನಿದ್ದನೆ? ಎಂಬುದನ್ನು ಅರಿಯಲು ನಿಜವಾಗಿಯೂ ಯಾವುದೇ ದಾರಿಯಿಲ್ಲ. ಅಬಲೂರಿನ ಸೋಮೇಶ್ವರ ದೇವಾಲಯದಲ್ಲಿ ವೀರಶೈವಶರಣರ ಜೇಡರ ದಾಸಿಮಯ್ಯ ಸಿರಿಯಾಳಸೆಟ್ಟಿ ಹಾಗೂ ಚಂಗಾಳವ್ವೆಯ ಆಖ್ಯಾಯಿಕೆಗೊಳೊಂದಿಗೆ ಏಕಾಂತದ ರಾಮಯ್ಯನ ಜೈನ ಧರ್ಮದ ಮೇಲಿನ ವಿಜಯ ಕುರಿತು ನಿರೂಪಿಸುವ ಶಿಲ್ಪಗಳಿವೆ. ಕ್ರಿ.ಶ. ೧೧೭೪ರ ರಟ್ಟಿಹಳ್ಳಿ ಶಾಸನದಲ್ಲಿ[೧೧೩] ಕಿಟ್ಟಗಾವೆ ಸಂತತಿಯ ಕಾಳಾಮುಖ ಯತಿಗಳಿಗೆ ನೀಡಲಾದ ಪೋಗದೆಗಳನ್ನು

ನಮೂದಿಸಲಾಗಿದೆ. ಕಳಚೂರಿ ರಾಯಮುರಾರಿ ಸೋಪಿದೇವ ಹಾಗೂ ಅವನ ಕೈಕೆಳಗಿನ ಕದಂಬರ ವಂಶದ ಪಾಂಡ್ಯದೇವರಸನ ಆಳ್ವಿಕೆ ಕಾಲದ್ದಾಗಿದೆ. ಇದು ರಟ್ಟಪಳ್ಳಿಯ ಕದಂಬೇಶ್ವರನಿಗಾಗಿ "ಕಾಳಾಮುಖಿ" ಕಲ್ಯಾಣಶಕ್ತಿ ಪಂಡಿತನಿಗೆ ನೀಡಲಾದ ಕಾಣಿಕೆಯ ಪ್ರಸ್ತಾಪವಿದೆ. ಈ ದಾಖಲೆಯಲ್ಲಿ ಅವನ ಶಿಷ್ಯ ಇವರಿಬ್ಬರ ಹೆಸರುಗಳನ್ನು ಉಲ್ಲೇಖಿಸಿದ್ದಾನೆ.

ಕ್ರಿ.ಶ. ೧೨೩೮ರ ರಟ್ಟಿಹಳ್ಳಿ ಶಾಸನದಲ್ಲಿ[೧೧೪] ಅರಸನಾದ ಇಮ್ಮಡಿ ಸಿಂಪಣ ಹಾಗೂ ಅವನ ಕೈಕೆಳಗಿನ ಕದಂಬರ ಆಳ್ವಿಕೆಯ ಕಾಲದ್ದಾಗಿದೆ. ಕಾಳಮುಖರ ಪರಂಪರೆಯನ್ನು ಬಹುಮಟ್ಟಿಗೆ ಮೊದಲು ಶಾಸನದಿಂದ ನಕಲು ಮಾಡಲಾಗಿದೆ. ದಾನವನ್ನು ಸ್ವೀಕರಿಸುವನು, ಲಕುಲೀಶ್ವರನ ಶಿಷ್ಯನೂ ಆದ (ಎರಡನೆಯ) ಮೂರುಜಾವಿಯ ಹೆಸರನ್ನು ಸೇರಿಸಲಾಗಿದ್ದು (ಒಂದನೆಯ) ಅಯುಶಕ್ತಿ ಹಾಗೂ ಅಮೃತವರಾಶಿಗಳ ಹೆಸರನ್ನು ಅಜಾಗರೂಕತೆಯಿಂದಾಗಿ ಬಿಡಲಾಗಿದೆ. ವಾದಿ ರುದ್ರಯತಿಯು ವಾದಿರುದ್ರಶಕ್ತಿ ಎಂದು ಕರೆಯಲಾಗಿರುವನು. ಈ ದತ್ತಿಯು ಈ ಮೊದಲು ಶಾಸನಗಳಲ್ಲಿ ದೊರೆಯುವ ಮಹತ್ವದ ಮಾಹಿತಿಯನ್ನು ಒಳಗೊಂಡಿದೆ. ಈ ಮಾಹಿತಿಯೊಂದರ ಈ ಕಾಳಾಮುಖ ಯತಿಗಳು ಪರ್ವತಾವಳಿ ಹಾಗೂ ಕಿಟ್ಟಾವೆಗಳಿಗೆ (ಸಂತಿ) ಸೇರಿದ್ದರೆಂಬುದು. ಇದಕ್ಕೂ ಹೆಚ್ಚಿನ ಸಂಗತಿಯೆಂದರೆ, ದಾನವನ್ನು ಸ್ವೀಕರಿಸಿದ ಮೂರುಬಾವಿಗೆ (ಎರಡನೆ) 'ರಾಜಗುರು' ಪದವಿಯನ್ನು ನೀಡಲಾಗಿದೆ. ಇದರಿಂದಾಗಿ ಅವನಿಗೆ ಮಾಂಡಲಿಕ ಕದಂಬನ ಇಲ್ಲವೆ ಸ್ವತಃ ಸೇವುಣ ಅರಸನ ಮಹತ್ವದ ರಾಜಕೀಯ ಆಶ್ರಯ ಹಾಗೂ ಪ್ರಭಾವಗಳು ಇದ್ದವೆಂದು ಕಂಡುಬರುತ್ತವೆ. ಪಶ್ಚಿಮ ಚಾಲುಕ್ಯ ಕಳಚೂರಿ ಹಾಗೂ ಸೇವುಣರ ಬೇರೆ ಬೇರೆ ಅರಸರ ಆಳ್ವಿಕೆಯ ಕಾಲಗಳಲ್ಲಿ ಹಲವು ಜನ ಕಾಳಾಮುಖ ಗುರುಗಳು ನಿಜವಾಗಿಯೂ ಈ ಪದವಿ ತಮ್ಮದೆಂದು ಸಾಧಿಸುತ್ತಿದ್ದರು. ಕ್ರಿ.ಶ. ೧೨೩೯ರ ಹಾನಗಲ್ಲು ತಾಲೂಕಿನ ತಿಳುವಳ್ಳಿ[೧೧೫] ಶಾಸನದಲ್ಲಿ ಕಳೆದ ೨೦ ವರ್ಷಗಳಲ್ಲಿ ಉಲ್ಲೇಖಿತಗೊಂಡಂತಹ ಶಾಸನಗಳೆಲ್ಲಕ್ಕಿಂತಲೂ ಬಹಳ ಮಹತ್ವವೆನಿಸಿಕೊಂಡು ಹೊಸ ತಿರುವು ಪಡೆದ ಶಾಸನವು ತಿಳುವಳ್ಳಿಗೆ ಸಂಬಂಧಿಸಿದುದು. ಈ ಶಾಸನವು ಸಂಸ್ಕೃತ ಮತ್ತು ಕನ್ನಡ ಭಾಷೆಯಲ್ಲಿದ್ದು, ಸೆವುಣ, ಯಾದವ, ಇಮ್ಮಡಿ, ಸಂಘಣ ಅರಸನ ಆಳ್ವಿಕೆಯ ಕಾಲವಾಗಿದ್ದು, ಈ ಶಾಸನವು ಅಧಿಕಾರಿಯೊಬ್ಬನ ಇಬ್ಬರು ಗಂಡುಮಕ್ಕಳು ಸಾವಂತೇಶ್ವರ ಹೆಸರಿನಿಂದ ಶಿವನಿಗಾಗಿ ಒಂದು ದೇವಾಲಯ ಕಟ್ಟಿಸಿ ಒಂದು ಗ್ರಾಮ ನೀಡಿದ್ದನ್ನು ತಿಳಿಸುತ್ತದೆ. ಈ ಗ್ರಾಮವನ್ನು ಕಾಳಾಮುಖ ಯತಿಯಾದ ರುದ್ರಶಕ್ತಿಗೆ ಒಪ್ಪಿಸಲಾಗಿದ್ದು, ಅವನ ಆಧ್ಯಾತ್ಮಿಕ ಪರಂಪರೆಯನ್ನು ಸ್ವಲ್ಪಮಟ್ಟಿಗೆ ವಿವರವಾಗಿ ಉಲ್ಲೇಖಿಸಲಾಗಿದೆ.

ಇವರ ಗುರುಪರಂಪರೆ ಹೀಗಿದೆ. ವಿದ್ಯಾಭರಣ – ಗೋಕರ್ಣ – ಕುಮಾರ – ಸರ್ವೇಶ್ವರ – ಶಕ್ತಿದೇವ – ರುದ್ರಶಕ್ತಿ. ಇಲ್ಲಿ ವಿದ್ಯಾಭೂಷಣ ಗುರುವಿನ ಗುಣಗಾನವು ಎಂದಿನ ಕಾಳಾಮುಖ ಶಾಸನಗಳಲ್ಲಿ ಯೋಗಸಾಮರ್ಥ್ಯ ಪಟ್ಟಿಯಿಂದ ಶುರುವಾಗುತ್ತದೆ. ಮುಂದುವರಿಯುತ್ತ, ಅವನನ್ನು ಎಪ್ಪತ್ತೇಳು ಸ್ಥಾನಗಳ (ಸಪ್ತಾಹತ್ತ ನಿಷ್ಠಾನಾಚಾರ್ಯಕಂ) ಗುರುವೆಂದು, ನಾಲ್ಕು ವೇದ ಹಾಗೂ ಸಂಸ್ಕೃತ ವಿದ್ಯೆಯ ಸಂಪ್ರದಾಯಕ ವಿಷಯಗಳಲ್ಲಿ

ಪಾರಂಗತನೆಂದು ಲಾಕುಲಗಾಮ ಸಿದ್ಧಾಂತಗಳನ್ನು ಎತ್ತಿ ಹಿಡಿಯುವನೆಂದು, ಕಬ್ಬಿನ ಸಿರಿವೂರಿನ ಶ್ರೀ ಸಿದ್ಧನಾಥ ಅಥವಾ ಸಿದ್ದೇಶ್ವರ ದೇವರ ಆರಾಧಕನೆಂದು, ಶಟ್ಟಕ್ರೋಮ ಮಠದ ಬೋಧಕಯತಿಯೆಂದು (ಕಿಟ್ಟಕೋಮ ಮಠಾದ್ದೇಶಿಕಪದಃ) ಹಾಗೂ "ಕಾಳಾಮುಖ"ರ ನಾಯಕನೆಂದು (ಕಾಳಾಮುಖಸ್ಯಾಗ್ರಣಿ) ಕರೆಯಲಾಗಿದೆ.

## ವೀರಶೈವ ಸಂಪ್ರದಾಯ:

ಶೈವಧರ್ಮದ ವಿಕಸಿತ ರೂಪವೇ ವೀರಶೈವಧರ್ಮ. 'ವಿ' ಎಂಬ ಪದವು ವೀರವೆಂಬ ಪದದಿಂದ ಬಂದಿದ್ದು 'ವಾ' ಎಂದರೆ ಶಿವಜಿವೈರ್ಯ ಬೋಧಕವಾದ ವಿದ್ಯೆಯಲ್ಲಿ ರ ಎಂದರೆ ರಮಿಸುವನು ಎಂದು ಅರ್ಥೈಸಲಾಗುತ್ತದೆ. ೧೨ನೇ ಶತಮಾನದಲ್ಲಿ, ಶರಣರು ಪ್ರತಿಪಾದಿಸಿದ ಧರ್ಮವನ್ನು ವೀರಶೈವಧರ್ಮ ಎಂದು ಕರೆಯಲಾಗಿದೆ. ಈ ಧರ್ಮವು ಬಿಜ್ಜಳನ ಮಂತ್ರಿ ಬಸವಣ್ಣನವರು ನಿರ್ದಿಷ್ಟ ಸ್ವರೂಪವನ್ನು ನೀಡಿ ಪ್ರಚಾರ ಪಡಿಸಿದ ವೀರಶೈವ ಮತ ಅತ್ಯಂತ ಶೀಘ್ರವಾಗಿ ಕರ್ನಾಟಕದಾದ್ಯಂತ ಪ್ರಚಾರಗೊಂಡಿತು. ಇದು ಧಾರ್ಮಿಕ ಹಾಗೂ ಸಾಮಾಜಿಕ ಕ್ಷೇತ್ರದಲ್ಲಿ ಬಹುಮುಖ್ಯ ಪಾತ್ರವಹಿಸಿ ಧಾರ್ಮಿಕ ಚರಿತ್ರೆಗಳ ಹಾಗೂ ವೈಚಾರಿಕ ಕ್ರಾಂತಿಯಿಂದಾಗಿ ಸರ್ವಸಮನ್ವತೆಯ ತತ್ವವನ್ನು ಬಸವಣ್ಣ ತೋರಿಸಿಕೊಟ್ಟರು[೧೧೬]. ಇಂತಹ ಒಂದು ಧರ್ಮ ಹಾವೇರಿ ಜಿಲ್ಲೆಯಲ್ಲಿ ತನ್ನದೇ ಆದ ಪ್ರಭುತ್ವ ಬೀರುವುದನ್ನು ಅವಲೋಕಿಸಿದೆ.

ಕ್ರಿ.ಶ. ೧೨೦೦ರ ಹಿರೇಕೆರೂರು ತಾಲೂಕಿನ ಶಾಸನದಲ್ಲಿ[೧೧೭] ಸುಪ್ರಸಿದ್ಧ ಶರಣ ಏಕಾಂತ ರಾಮಯ್ಯನ ಕಾರ್ಯಕ್ಷೇತ್ರ ಅಬ್ಬಲೂರು. ಅಬ್ಬಲೂರು ಕ್ರಾಂತಿಯ ನಂತರ ಬಿಜ್ಜಳ ಅಬ್ಬಲೂರು ಬಂದ ಬಗೆಗೆ ಶಾಸನಾಧಾರಗಳಲ್ಲಿ ಕಂಡುಬರುತ್ತದೆ. ಬಿಜ್ಜಳ ದೊರೆಯೊಡನೆ ಬಸವಣ್ಣನವರೂ ಬಂದಿದ್ದರೆಂದು ಹೇಳಲಾಗುತ್ತದೆ. ಈ ಅಂಶಗಳಿಂದ ಹಾವೇರಿ ಜಿಲ್ಲೆಯಲ್ಲಿ ವೀರಶೈವಧರ್ಮ ಇರುವುದನ್ನು ಸೂಚಿಸುತ್ತದೆ. ಕ್ರಿ.ಶ. ತೇದಿರಹಿತ ಹಂಸಬಾವಿ ಶಾಸನದಲ್ಲಿ[೧೧೮] ಅಷ್ಟ ಮಠಗಳು ಇದ್ದುದಾಗಿ ತಿಳಿಸುತ್ತದೆ. ಅದರಲ್ಲಿ ತೊಗರಸೆ ಸಿರುಸಾಳದೇವಮಠ ಎಂಬ ಉಲ್ಲೇಖವಿದೆ.

ಕ್ರಿ.ಶ. ೧೮೨೭ರ ಚಿಕ್ಕೆರೂರ ಶಾಸನದಲ್ಲಿ[೧೧೯] ಚಿಕ್ಕೆರೂರ ಹಿರೇಮಠದಿಂದ ವಿರಕ್ತಮಠದ ಮರುಳಸಿದ್ಧಪ್ಪನಿಗೆ ಭೂದಾನ ಉಲ್ಲೇಖಿಸುತ್ತದೆ.

ಕ್ರಿ.ಶ. ೧೪೦೫ ರಾಣಿಬೆನ್ನೂರು ತಾಲೂಕಿನ ಹೇಡಿಯಾಳ ಶಾಸನದಲ್ಲಿ[೧೨೦] ಹೆಡಿಯಾಲದ ರಾಮನಾಯಕ ಲಿಂಗೈಕ್ಯನಾದಾಗ ಆತನ ಹೆಂಡತಿ ಮಲಿದೇವಿ ಸಮಾಧಿ ಮರಣ ಹೊಂದಿದ ಉಲ್ಲೇಖವಿದೆ. ಕ್ರಿ.ಶ. ೧೫ನೇ ಶತಮಾನದ ತಿಳುವಳ್ಳಿ ಸಾವಂತೇಶ್ವರನ ದೇವಾಲಯವನ್ನು ಗಮನಿಸಿದಾಗ, ವೀರಶೈವ ಬಸವೇಶ್ವರನ ಪ್ರತಿಮೆಯ ಸ್ಥಾಪನೆಯಾದ ಬಗೆಗೆ ಇದು ಹದಿನೈದು ಅಥವಾ ಹದಿನಾರನೆಯ ಶತಮಾನದ್ದು ಎಂದು ಶಾಸನದಲ್ಲಿ ತಿಳಿಯುತ್ತದೆ[೧೨೧].

**ವೈಷ್ಣವ ಸಂಪ್ರದಾಯ:**

ಭಾರತೀಯ ಪ್ರಾಚೀನ ಧರ್ಮಗಳಲ್ಲಿ ವೈಷ್ಣವಧರ್ಮವು ಒಂದಾಗಿದೆ. ಈ ಧರ್ಮಕ್ಕೆ ವಿಷ್ಣುವೇ ಪ್ರಥಮ ಆರಾಧ್ಯ ದೈವನಾಗಿದ್ದು ಆತನ ಅವತಾರದ ರೂಪಗಳನ್ನು ಪೂಜಿಸುವ ಎಲ್ಲರನ್ನು ವೈಷ್ಣವರೆಂದು ಕರೆಯಲಾಗಿದೆ. ವಿಷ್ಣುವಿನ ಈ ವಿಭಿನ್ನ ರೂಪಗಳನ್ನು ಆಯಾ ಕಾಲಘಟ್ಟಗಳಲ್ಲಿ ವಿವಿಧ ರಾಜಮನೆತನದವರು ಪೂಜಿಸುತ್ತಾ ಬಂದಿರುವುದನ್ನು ಕಾಣುತ್ತೇವೆ. ವೈಷ್ಣವ ಧರ್ಮದ ಭಾಗವಾಗಿ ಕಂಡುಬಂದ ಭಾಗವತ ಧರ್ಮವು ಕರ್ನಾಟಕದಲ್ಲಿ ಅದರಲ್ಲೂ ದಕ್ಷಿಣ ಭಾಗದಲ್ಲಿ ರಾಮಾನುಜರ ಆಗಮನದಿಂದ ಬೆಳವಣಿಗೆ ಹೊಂದುತ್ತಾ ಬಂದಿತು. ಜೈನ ಹಾಗೂ ಶೈವರ ಒತ್ತಡದಿಂದ ಹಿಂದಕ್ಕೆ ನೂಕಲುಪಟ್ಟರು. ೧೨–೧೩ನೇ ಶತಮಾನದ ವೇಳೆಗೆ ತನ್ನ ಸ್ಥಾನವನ್ನು ಮರಳಿ ಪಡೆಯಿತು. ಹೀಗಾಗಿ ಶಿವನಿಗೆ ಒಂದು ಇತಿಹಾಸವಿದ್ದಂತೆ ಹಿಂದೂ ಧರ್ಮದಲ್ಲಿ ಅವನಷ್ಟೆ ಪ್ರಬಲವಾದ ವಿಷ್ಣುವಿಗೂ ಒಂದು ಇತಿಹಾಸವುಂಟು. ವಿಷ್ಣುವು ವೇದಗಳಲ್ಲಿ ಪ್ರಧಾನ ದೇವತೆಯಲ್ಲದಿದ್ದರೂ ಅಪ್ರಧಾನವೇನಲ್ಲ. ಅವನು ಮೂರು ಹೆಜ್ಜೆಗಳಿಂದ ಲೋಕಸಮಸ್ತವನ್ನೇ ಅಳಿಯುವುದನ್ನು ಉತ್ಸಾಹದಿಂದ ಋಗ್ವೇದದಲ್ಲಿ ಬಣ್ಣಿಸಲಾಗಿದೆ[೧೨೨].

ಕನ್ನಡ ಅತ್ಯಂತ ಪ್ರಾಚೀನವಾದ ಹಲ್ಮಿಡಿ ಶಾಸನ ವಿಷ್ಣುವಿನ ಪ್ರಾರ್ಥನೆಯೊಂದಿಗೆ ಪ್ರಾರಂಭವಾಗುತ್ತದೆ. ಇದರ ಕಾಲಮಾನ ಕ್ರಿ.ಶ. ೪೫೦. ಇದಕ್ಕಿಂತ ಪೂರ್ವದಿಂದಲೂ ವೈಷ್ಣವ ಧರ್ಮ ಕರ್ನಾಟಕದಲ್ಲಿ ಪ್ರಚಲಿತವಿದ್ದಿತು ಎಂದು ಹೇಳಲಾಗಿದೆ[೧೨೩].

ಹಾವೇರಿ ಜಿಲ್ಲೆಯು ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ವೈಷ್ಣವ ಧರ್ಮ ಪ್ರಚಲಿತವಿದ್ದುದು ಸ್ಪಷ್ಟವಾಗುತ್ತದೆ[೧೨೪]. ಕ್ರಿ.ಶ. ೭೨೫ರ ದಾಸನಕೊಪ್ಪಲು ಶಾಸನದಲ್ಲಿ[೧೨೫] ವೈಷ್ಣವ ಮನೆತನದ ಉಲ್ಲೇಖವಿದ್ದು, ಗಿರಿಧರರಾಯನ ಮಕ್ಕಳಾದ ಭಗವಂತರಾಯ, ಶ್ರೀನಿವಾಸರಾಯ, ವೆಂಕಟರಾಯರ ಶಾಸನದಲ್ಲಿ ಪ್ರಸ್ಥಾಪವಿದೆ. ಕ್ರಿ.ಶ. ೧೦೭೧ರ ಹಾನಗಲ್ಲು ತಾಲೂಕಿನ ಕಲಕೇರಿ ಶಾಸನದಲ್ಲಿ[೧೨೬] ಉದಯಾದಿತ್ಯನ ರಾಣಿ ಮಾಳಲಾದೇವಿಯು ಶಿವಾಲಯದಲ್ಲಿ ಲಿಂಗದ ಮುಂದೆ ಎಡಪಕ್ಷಕ್ಕೆ ಸುಂದರವಾದ ವಿಷ್ಣುಮೂರ್ತಿಯನ್ನು ವಿಷ್ಣುಗೃಹ ಮಾಡಿ ಪ್ರತಿಷ್ಠಾಪಿಸುತ್ತಾಳೆ. ಇಂದು ಬನಶಂಕರಿ ಎಂದು ಕರೆಯುತ್ತಿರುವಲ್ಲಿ ವಿಷ್ಣುವಿನ ಮೂರ್ತಿ ಪೂಜೆಗೊಳ್ಳುತ್ತಿದೆ. ಅದೇ ರೀತಿಯಾಗಿ ವಿಷ್ಣುವಿನ ಆರಾಧಕರು ವೈಷ್ಣವರೂ ಕಲಕೇರಿಯಲ್ಲಿ ಸಾಕಷ್ಟು ಸಂಖ್ಯೆಯಲ್ಲಿದ್ದರು. ಕ್ರಿ.ಶ. ೧೦೯೮ರ ರಾಣಿಬೆನ್ನೂರ ತಾಲೂಕು ಮುದೇನೂರ ಶಾಸನದಲ್ಲಿ[೧೨೭] ಚಕ್ರವರ್ತಿಯು ತುಂಗಭದ್ರಾ ತೀರದಲ್ಲಿ ಬೀಡುಬಿಟ್ಟಾಗ ಶಂಕರನಾರಾಯಣ ದೇವರಿಗೆ ಬಿಟ್ಟ ಭೂದಾನ ಪ್ರಸ್ಥಾಪವಿದೆ.

ಕ್ರಿ.ಶ. ೧೧೦೮–೦೯ ಕರಿಗುದರಿ ಶಾಸನದಲ್ಲಿ[೧೨೮] ಶಾಸನಾದಿಕದಂಬರ ವಂಶಾವಳಿ ಹೇಳುತ್ತಾ ಕುಂತಳ ದೇಶದಲ್ಲಿ ಇವರ ಸ್ಥಾಪನೆಯಾದ ವಿವರಗಳನ್ನು ನೀಡುತ್ತಾ ಶಾಸನದಲ್ಲಿ

ಎರಡನೇ ತೈಲ ಮತ್ತು ಆತನ ಹೆಂಡತಿ ಬಾಚಲದೇವಿಯರು ಶಿವ, ಕೇಶವ, ಭಾಸ್ಕರ ದೇವತೆಗಳು ತ್ರೈಪುರುಷ ದೇವಾಲಯದ ಉಲ್ಲೇಖವನ್ನು ನೀಡುತ್ತದೆ.

ಕ್ರಿ.ಶ. ೧೧೨೫ರ ನರೇಗಲ್ಲ ಶಾಸನದಲ್ಲಿ[೧೨೯] ತೈಲಪನ ಮಗ ಮಯೂರವರ್ಮನು ಆಳುವಾಗ ಕಪ್ಪಿಮಯ್ಯನ ಮಗ ಗೋವಿಂದದೇವನು ಮೂಲಸ್ಥಾನದೇವರಿಗೆ ಬಿಟ್ಟ ದತ್ತಿ ಉಲ್ಲೇಖಿಸಿದೆ ಹಾಗೂ ಕ್ರಿ.ಶ.೧೧೨೬ರ ಮತ್ತೊಂದು ಶಾಸನದಲ್ಲಿ[೧೩೦] ಸಾಸ್ವಿರಲ್ಲೊಬ್ಬನಾದ ದಾಸಿಮಯ್ಯನಿಂದ ಸೂರ್ಯದೇವಾಲಯ ನಿರ್ಮಾಣ ಹಾಗೂ ದಾನ ಉಲ್ಲೇಖವಾಗಿದೆ. ಕ್ರಿ.ಶ. ತೇದಿರಹಿತ ಮಕರಳ್ಳಿ ಶಾಸನದಲ್ಲಿ[೧೩೧] ಗೋವೆಯ ಪ್ರಧಾನಿ ಬಾಚಣ್ಣ ಒಡೆಯನಿಂದ ನರಸಿಂಹ ದೇವರಿಗೆ ಮಕರವಳ್ಳಿಪುರ ದಾನವನ್ನು ಉಲ್ಲೇಖಿಸುತ್ತದೆ. ಕ್ರಿ.ಶ.೧೧೩೬ರ ಹಾನಗಲ್ಲು ತಾಲೂಕಿನ ಬೆಳವತ್ತಿ ಶಾಸನದಲ್ಲಿ[೧೩೨] ದಂಡನಾಯಕ ಪದ್ಮನಾಭಯ್ಯನ ಅಧಿಕಾರಿಗಳಾದ ಸುಂಕವೆರ್ಗಡೆ ನಾರಾಯಣ್ಯನಾಯಕಾಧಿಗಳಿಂದ ಗೋಕುಳೇಶ್ವರನಿಗೆ ದಾನ ಉಲ್ಲೇಖ ಕಂಡುಬರುತ್ತದೆ. ಕ್ರಿ.ಶ.೧೧೫೦ರ ಅರಳೇಶ್ವರ ಶಾಸನದಲ್ಲಿ[೧೩೩] ಕದಂಬೇಶ್ವರ ದೇವರಿಗಾಗಿ ಶಾಂತಿವರ್ಮನ್ ಉಪಾಧ್ಯಾಯನಿಗೆ ದಾನ ಮಾಡಿದ ಉಲ್ಲೇಖವಿದೆ. ೧೧೬೫ರ ಬಾಳಂಬೀಡು ಶಾಸನದಲ್ಲಿ[೧೩೪] ಬಳ್ಳಾರವೀಡು ಗ್ರಾಮದ ಚಿಕ್ಕೇಶ್ವರ ದೇವಾಲಯಕ್ಕೆ ಹೊಂದಿರುವ ಬ್ರಹ್ಮೇಶ್ವರ ದೇವಾಲಯಕ್ಕೆ ಸುಂಕದಾನ ಉಲ್ಲೇಖಿಸುತ್ತದೆ. ಕ್ರಿ.ಶ.೧೧೮೧-೮೮ರ ಹಾವೇರಿ ತಾಲೂಕಿನ ಹರಳಹಳ್ಳಿ ಶಾಸನದಲ್ಲಿ[೧೩೫] ಕಲ್ಯಾಣಶಕ್ತಿ ಮುನಿಯ ವಿನಂತಿಯ ಮೇರೆಗೆ ಜೋಯಿದೇವರಸನು ತುಂಗಭದ್ರಾತೀರದಲ್ಲಿ ವಿಕ್ರಮಪುರ ಗ್ರಾಮ ನಿರ್ಮಿಸಿ ವಿಕ್ರಮೇಶ್ವ ಮತ್ತು ಗುತ್ತೇಶ್ವರ ದೇವಾಲಯಗಳಿಗೆ ಗ್ರಾಮಗಳ ದಾನ ಮಾಡಿದ ಉಲ್ಲೇಖವಿದೆ. ಇದೇ ಗ್ರಾಮದ ಇನ್ನೊಂದು ಶಾಸನದಲ್ಲಿ[೧೩೬] ಮಹಾಪ್ರಧಾನ ದಂಡನಾಯಕ ದಾಸಿರಾಜನಿಂದ ದಾಸೇಶ್ವರ ದೇವಾಲಯದ ನಿರ್ಮಾಣ ಹಾಗೂ ಭೂದಾನ ನೀಡಿದ ವಿಷಯವನ್ನು ದಾಖಲಿಸಿದೆ. ಕ್ರಿ.ಶ. ೧೨ನೇ ಶತಮಾನದ ಹಾನಗಲ್ಲು ತಾಲೂಕಿನ ಅರಳೇಶ್ವರ ಶಾಸನದಲ್ಲಿ[೧೩೭] ರಾಮಸಿಂಗಿ ಪಂಡಿತನ ಮಗ ತ್ರಿಭುವನ ಸಿಂಗಿಪಂಡಿತನು ಕದಂಬೇಶ್ವರ ದೇವಾಲಯವನ್ನು ಪಂಚಕೂಟವಾಗಿ ವಿಸ್ತರಿಸಿ ನೀಡಿದ ದಾನ ತಿಳಿಯುತ್ತದೆ. ಕ್ರಿ.ಶ.೧೨೦೪ರ ಹಿರೇಕೆರೂರ ತಾಲೂಕಿನ ಸಾತೇನಹಳ್ಳಿಯ ಶಾಸನದಲ್ಲಿ[೧೩೮] ಕಾಮಿಸೆಟ್ಟಿಯ ಹೆಂಡತಿ ವೆಣ್ಣಲೆಸೆಟ್ಟಿಕವೆಯಿಂದ ನಾಗರಖಂಡ-೭೦ ಸಾತೇನಹಳ್ಳಿಯಲ್ಲಿ ಹರಿಹರೇಶ್ವರ ದೇವಾಲಯ ನಿರ್ಮಾಣ ಮತ್ತು ದಾನ ಉಲ್ಲೇಖವಿದೆ. ಕ್ರಿ.ಶ.೧೨೩೨ರ ಬ್ಯಾಡಗಿ ತಾಲೂಕಿನ ಶಾಸನದಲ್ಲಿ[೧೩೯] ನಾಗಲದೇವಿಯಿಂದ ಕೊಣ್ಣೆಡಿಗ್ರಾಮದ ಸೋಮನಾಥದೇವರಿಗೆ ದಾನ ಹಾಗೂ ಕಲಿಯುಗ ವೀರಭದ್ರ ಬಿರುದಿನ ನಾಚಿದೇವನ ಉಲ್ಲೇಖಿಸುತ್ತದೆ. ಕ್ರಿ.ಶ.೧೨೩೭ರ ಹಿರೇಕೆರೂರ ತಾಲೂಕು ರಟ್ಟಿಹಳ್ಳಿ ಶಾಸನದಲ್ಲಿ[೧೪೦] ಕರಣದ ಕಲ್ಲರಸ ಮತ್ತು ಹಲವು ವ್ಯಾಪಾರಸ್ಥರು ಮಲ್ಲಿನಾಥ ದೇವಾಲಯಕ್ಕಾಗಿ ಮೂರುಜಾವಿ ದೇವರಿಗೆ ಬಿಟ್ಟದಾನ ಹಾಗೂ ಕ್ರಿ.ಶ. ೧೨೩೮ರ ಮತ್ತೊಂದು ಶಾಸನದಲ್ಲಿ[೧೪೧] ಹೊನ್ನಬಮ್ಮಿಸೆಟ್ಟಿಯರು ಮಲ್ಲೇಶ್ವರ, ರಾಜೇಶ್ವರ ದೇವರಿಗಾಗಿ ಸ್ಥಾನಂಚಾರ್ಯ ರಾಜಗುರು ಮೂರುಜಾವಿ ದೇವರಿಗೆ

ನೀಡಿದ ದಾನ ಮಾಹಿತಿ ಉಲ್ಲೇಖಗೊಂಡಿದೆ. ಕ್ರಿ.ಶ. ೧೨೪೧ರ ಸಾತೇನಹಳ್ಳಿ ಶಾಸನದಲ್ಲಿ[೧೪೨] ನಾಗರಖಂಡ ನಾಲ್ಪ್ರಭು ಬೊಮ್ಮಿಸೆಟ್ಟಿಯಿಂದ ಶಂಕರನಾರಾಯಣದೇವ ಪ್ರತಿಷ್ಠಾಪನೆ ಮತ್ತು ದಾನದ ಬಗ್ಗೆ ಪ್ರಸ್ತಾಪವಿದೆ. ಕ್ರಿ.ಶ. ೧೨೪೩ರ ಕಲಕೇರಿ ಶಾಸನದಲ್ಲಿ[೧೪೩] ರಾಜಗುರು ಅಮರೇಶ್ವರ ದೇವನು ತನ್ನ ಶಿಷ್ಯ ಮಲ್ಲಿಕಾರ್ಜುನ ಪಂಡಿತನಿಗೆ ಮಯಸಿಂಗೇಶ್ವರ ಸ್ಥಾನವನ್ನು ನೀಡಿದ ವಿಷಯ ತಿಳಿಯುತ್ತದೆ. ಕ್ರಿ.ಶ. ೧೨೬೧ರ ರಾಣಿಬೆನ್ನೂರ ತಾಲೂಕಿನ ಕರೂರ ಶಾಸನದಲ್ಲಿ[೧೪೪] ಮಹಾಪ್ರಧಾನ ವೀರಸೆಟ್ಟಿಯಿಂದ ಕಲಿದೇವ, ವಿಘ್ನೇಶ್ವರ, ಕ್ಷೇತ್ರಪಾಳ ಹಾಗೂ ನಾರಾಯಣ ದೇವಾಲಯಗಳಿಗೆ ಭೂದಾನ ಕೊಟ್ಟ ಬಗ್ಗೆ ಶಾಸನವು ತಿಳಿಸುತ್ತದೆ.

ಕ್ರಿ.ಶ. ೧೨೬೫ರ ಹಿರೇಕೆರೂರ ತಾಲೂಕಿನ ಚಪ್ಪರದಹಳ್ಳಿ ಶಾಸನದಲ್ಲಿ[೧೪೫] ವಿಠ್ಠಲ ದಣ್ಣಾಯಕಾದಿಗಳಿಂದ ಶ್ರೀಧರೇಶ್ವರ ದೇವಾಲಯಕ್ಕೆ ಭೂಮಿ ಹಾಗೂ ಗೋದಾನ ದಾಖಲೆಯಿದೆ. ಕ್ರಿ.ಶ. ೧೨೮೮ರ ಹಾವೇರಿ ತಾಲೂಕಿನ ಕಿತ್ತೂರ ಶಾಸನದಲ್ಲಿ[೧೪೬] ಮಹಾಮಂಡಳೇಶ್ವರ ಚಾವುಗೆ ದೇವರಾಣೆಯನಿಂದ ಕಲಿನಾಥ ಮೂಲಸ್ಥಾನ ಜಕ್ಕೇಶ್ವರ ದೇವಾಲಯದ ಬ್ರಾಹ್ಮಣರಿಗಾಗಿ ಬಾಚೆದೇವನಿಗೆ ಭೂದಾನ ಉಲ್ಲೇಖಗೊಂಡಿದೆ. ಕ್ರಿ.ಶ. ೧೫೫೭ರ ಹಾವೇರಿ ತಾಲೂಕಿನ ನರಸೀಪುರ ಶಾಸನದಲ್ಲಿ[೧೪೭] ಮಹಾನಾಯಕಾಚಾರ್ಯ ಚಿಕಯಲ್ಲಪ್ಪನಾಯಕನು ನರಸಿಂಹ ವಿಗ್ರಹ ಸ್ಥಾಪಿಸಿದ್ದಕ್ಕಾಗಿ ಕುರುಬನ ಹಳ್ಳಿಯನ್ನು ನರಸಿಂಹಪುರವೆಂದು ಹೆಸರಿಸಿ ತೊರವನಭಟ್ಟನಿಗೆ ದಾನ ನೀಡಿದ ಉಲ್ಲೇಖ ತಿಳಿದುಬರುತ್ತದೆ. ಕ್ರಿ.ಶ. ೧೭೧೭ರ ಕನವಳ್ಳಿ ಶಾಸನದಲ್ಲಿ ಗುತ್ತಲದ ದೇಸಾಯಿ ಹನುಮಂತಗೌಡನಿಂದ ನೀಲಕಂಠಯೋಗಿಶ್ವರನಿಗೆ ದಾನದ ಬಗ್ಗೆ ದಾಖಲೆ ತಿಳಿಯುತ್ತದೆ.

**ವಿದ್ಯಾಭ್ಯಾಸ:**

ಭರತಖಂಡದ ಒಂದು ಅಂಗವಾಗಿ ಕರ್ನಾಟಕ ಇತರ ಅಂಶಗಳಂತೆ ವಿದ್ಯಾಭ್ಯಾಸದ ವಿಚಾರದಲ್ಲಿಯೂ ಅದರ ಮಿತಿ ಮತ್ತು ವ್ಯಾಪ್ತಿಗಳನ್ನು ಅವಲಂಬಿಸಿ ಬೆಳೆದರೂ ತನ್ನದೇ ಆದ ವೈಶಿಷ್ಟ್ಯವನ್ನು ತೋರ್ಪಡಿಸಲು ಶಕ್ತವಾಯಿತು. ಪ್ರಾಚೀನ ಕರ್ನಾಟಕದ ವಿದ್ಯಾಭ್ಯಾಸದಲ್ಲಿ ಕಂಡುಬರುವ ಪ್ರಮುಖ ಅಂಶವೆಂದರೆ ಊರುಗಳಲ್ಲಿ, ಹಳ್ಳಿಗಳಲ್ಲಿ, ಅಗ್ರಹಾರಗಳು, ಮಠಗಳು, ಘಟಿಕಸ್ಥಾನಗಳು ನಿರ್ಮಾಣವಾಗಿ ವಿದ್ಯೆಯನ್ನು ಸಾಧ್ಯವಾದಷ್ಟು ವ್ಯಾಪಕವನ್ನಾಗಿಸಿ ಮಾಡುವ ಪ್ರಯತ್ನ[೧೪೮]. ಹೀಗಿರುವಾಗ ಹಿಂದೂ ಸಮಾಜವು ವಿದ್ಯೆಗೆ ಅತ್ಯಂತ ಉನ್ನತವಾದ ಸ್ಥಾನವನ್ನು ನೀಡಿದ್ದು ವಾಸ್ಥವಾಗಿ ಅಂದು ಸಮಾಜಕ್ಕೆ ಆಧಾರವಾಗಿದ್ದ ವ್ಯವಸ್ಥೆಯ ಅವಿಭಾಜ್ಯ ಅಂಗವಾಗಿತ್ತು. ಏಕೆಂದರೆ ವಿದ್ಯೆ ಸರ್ವಕಾಲಿಕವೂ ಶ್ರೇಷ್ಠತ್ವದ ಕೊಡುಗೆಯನ್ನೇ ನೀಡುವ ಉದ್ದೇಶವನ್ನು ಹೊಂದಿರುತ್ತದೆ. ಹೀಗಾಗಿ ವಿದ್ಯೆ ಮಾನವನ ಸಂಸ್ಕೃತಿಯ ಪ್ರತೀಕವಾಗಿದ್ದು ಒಂದು ದೇಶದ ಪದೋನ್ನತಿಗೆ ಆಧಾರವಾಗಿ ನಿಂತಿದೆ. ಆದ್ದರಿಂದ ಹಿಂದೂ ಸಮಾಜವು ಶಿಕ್ಷಣವನ್ನು ಒದಗಿಸುವುದು ತನ್ನ ಪ್ರಮುಖ ಕರ್ತವ್ಯಗಳಲ್ಲೊಂದು ಎಂದು ಪರಿಗಣಿಸಿತು.

ಸಂಸ್ಕೃತ ಪದವಾದ ವಿದ್ಯೆ ಎಂಬುದು ಜ್ಞಾನದ ಅರ್ಥವನ್ನು ಹೊಂದಿದ್ದು ವಿದ್ಯಾಭ್ಯಾಸ ಎಂದರೆ ವಿದ್ಯಾರ್ಜನೆ ಅಥವಾ ಜ್ಞಾನದ ಅಭ್ಯಾಸ "ನಹಿ ಜ್ಞಾನೇನ ಸದೃಶಃ, ವಿದ್ಯ ವಿ ಹೀನ; ಪಶುಭೀಃ ಸಮಾನಃ" ಎಂಬ ಮಾತುಗಳು ವಿದ್ಯೆಗೆ ಪ್ರಾಚೀನ ಕಾಲದಲ್ಲಿ ಹೆಚ್ಚಿನ ಮಹತ್ವವನ್ನು ನೀಡಿದಂತಿದೆ. ಇಂತಹ ವಿದ್ಯೆಯನ್ನು ಪಡೆಯಲು ಗುರುವಿನ ಪಾತ್ರ ಪ್ರಮುಖವಾಗಿತ್ತು. ಗುರುವಿಗೆ ಗುರು ಬ್ರಹ್ಮ ಗುರು ವಿಷ್ಣು ಗುರು ದೇವೋ ಮಹೇಶ್ವರ, ಗುರುಸಾಕ್ಷಾತ್ ಪರ ಬ್ರಹ್ಮ ತಸ್ಮೈಃ ಶ್ರೀ ಗುರುವೇ ನಮಃ ಹೀಗೆ ಗುರುವಿನ ಸ್ಥಾನದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಕಾಣುಬಹುದು. ಶ್ರದ್ಧೆ, ಭಕ್ತಿ, ನಂಬಿಕೆಗಳನ್ನು ಕಾಣುವ ಪ್ರಾಚೀನ ಕಾಲದ ವಿದ್ಯಾಭ್ಯಾಸವನ್ನು ಆಧ್ಯಾತ್ಮಿಕ ಜ್ಞಾನದ ಹಿನ್ನೆಲೆಯಲ್ಲಿ ಕಾಣಬಹುದಾಗಿದೆ[೧೪೯].

ಕ್ರಿ.ಶ. ೧೦೭೧-೭೨ರ ಕಲಕೇರಿ ಶಾಸನದಲ್ಲಿ[೧೫೦] ಎರಡು ಪ್ರಮುಖ ದೇವಾಲಯಗಳಿವೆ. ಒಂದು ಸೋಮೇಶ್ವರ, ಇನ್ನೊಂದು ಬಸವಣ್ಣ ದೇವಾಲಯ. (ಪ್ರಾಚೀನ ಹೆಸರು ಶಿವಾಲಯ). ಈ ಎರಡು ದೇವಾಲಯಗಳಲ್ಲಿ ವಿದ್ಯಾಭ್ಯಾಸ ನಡೆಸಲಾಗುತ್ತಿತ್ತು. ಸೋಮೇಶ್ವರ ದೇವಾಲಯವು ನೈಷ್ಠಿಕ ಸ್ಥಾನವಾಗಿತ್ತು. ಇಲ್ಲಿಯ ಕಾಳಾಮುಖ ಶೈವ ಗುರುಗಳು ಬ್ರಹ್ಮಚರ್ಯದಲ್ಲಿ ನಿಷ್ಠೆಯನ್ನಿಟ್ಟು ತಪಸ್ಸನ್ನು ಆಚರಿಸುತ್ತ ವಿದ್ಯಾ ದಾನ ಮಾಡುತ್ತಿದ್ದರು. ಬ್ರಹ್ಮಚಾರಿಯಾದ ವಿದ್ಯಾರ್ಥಿಗಳು ಇಲ್ಲಿ ಅಧ್ಯಯನ ಮಾಡುತ್ತಿದ್ದರು. ಅವರನ್ನು ತಪೋಧನರು ಎಂದು ಕರೆಯಲಾಗಿದೆ. ಹಿರಿಯ ಶೈವಗುರು ಸ್ಥಾನಪತಿಯಾಗಿರುತ್ತಿದ್ದು ಉದಯಾದಿತ್ಯನು ಸೋಮೇಶ್ವರ ದೇವರಿಗಾಗಿ ಹಾಗೂ ಅಲ್ಲಿಯ ಕಾಳಾಮುಖ 'ನೈಷ್ಠಿಕ ತಪೋಧನರ್ಗವಲ್ಲಿಯ ಚ್ಛಾತ್ರರ್ಗ್ಗ ವಲ್ಲಿಯ ಪಾವುಳಕ್ಕು' ಎಂದೂ ಪುಲ್ಲವಳ ಎಂಬ ಗ್ರಾಮವನ್ನು ದಾನ ಬಿಡುತ್ತಾಳೆ. ಮಂಳಲದೇವಿಯು ಈಕೆಯು ಶಾಲೆಯನ್ನು ನಿರ್ಮಿಸುತ್ತಾಳೆ. ಈಗ ಬಸವಣ್ಣ ದೇವಾಲಯಕ್ಕೆ ಹೊಂದಿರುವಂತೆ ಮಠದಲ್ಲಿ ನಡೆಯುತ್ತಿತ್ತು.

ಕ್ರಿ.ಶ. ೧೧೧೮ರ ತಿಳುವಳ್ಳಿ ಶಾಸನದಲ್ಲಿ[೧೫೧] ಮಲೆಯ ಭಟ್ಟೋಪಾಧ್ಯಾಯನ ಕೈವಲ್ಯಕ್ಕಾಗಿ ರುದ್ರಭಟ್ಟೋಪಾಧ್ಯಾಯ ಮತ್ತು ಮಂಚಿಮಬ್ಬೆ ದಂಪತಿಗಳಿಂದ ದಾನ ನೀಡಿದ ಉಲ್ಲೇಖವಿದೆ. ಕ್ರಿ.ಶ. ೧೧೪೩ರ ಚಿಕ್ಕೊಣತಿ ಶಾಸನದಲ್ಲಿ[೧೫೨] ಕ್ರಿಯಾಶಕ್ತಿ ಹಾಗೂ ಕಲ್ಯಾಣಶಕ್ತಿ ಪಂಡಿತ ದೇವರು, ಈ ಗುರು ಶಿಷ್ಯರು ಚಿಕ್ಕೇರು ಗ್ರಾಮೇಶ್ವರ ದೇವರ ಆಚಾರ್ಯರು ಎಂದು ಶಾಸನದಲ್ಲಿ ಉಲ್ಲೇಖಗೊಂಡಿದೆ. ಕ್ರಿ.ಶ. ೧೧೪೪ರ ಹಂಸಬಾವಿ ಶಾಸನದಲ್ಲಿ[೧೫೩] ಮಲ್ಲಿಕಾರ್ಜುನ ಪಂಡಿತರು ಸರ್ವೇಶ್ವರ ದೇವರ ದೇಗುಲದ ಸ್ಥಾನಪತಿಗಳು. ಅಷ್ಟಾಂಗಯೋಗಸಿದ್ದರು. ಶಾಸ್ತ್ರ ಪ್ರವೀಣರು, ತ್ಯೂಲಬೇಗೂರ (ಹಂಸಬಾವಿ), ಕೇತಗಾವುಂಡ ಹಾಗೂ ಅನೇಕ ಅಧಿಕಾರಿಗಳು ಇವರಿಗೆ ದತ್ತಿಗಳನ್ನು ನೀಡಿರುವ ಬಗ್ಗೆ ಉಲ್ಲೇಖಿಸುತ್ತದೆ. ಕ್ರಿ.ಶ. ೧೧೬೮ರ ಎಮ್ಮಿಗನೂರು ಶಾಸನದಲ್ಲಿ[೧೫೪] ಯೋಗೇಶ್ವರ ರಟ್ಟಹಾಸ ಮುನಿಗಳು ಎಮ್ಮಿಗನೂರಿನ ರಾಮೇಶ್ವರ ದೇವಾಲಯದ ಸ್ಥಾನಪತಿಗಳು. ಪಾಶುಪತ ಪಂಥವನ್ನು ಊರ್ಜಿತಗೊಳಿಸಿದವರು. ತಪಶ್ರೀಮಂಡನರು, ಮುಕ್ತಿಭಾಜನರು, ಈಶಾರ್ಚನ ತತ್ಪರರು, ಎಮ್ಮಿಗನೂರಿನ ಸಾಮಂತ ರೇಚಿಗಾಂಕ ತನ್ನ ತಂದೆ ನಿರ್ಮಿಸಿದ ರಾಮೇಶ್ವರ ದೇವಾಲಯವನ್ನು ಯತಿಗಳಿಗೆ ದಾನ ನೀಡಿದ್ದನ್ನು ದಾಖಲಿಸುತ್ತದೆ.

ಕ್ರಿ.ಶ. ೧೨ನೇ ಶತಮಾನದ[೧೫೫] ಚಿನ್ನಮುಳುಗುಂದ ಶಾಸನದಲ್ಲಿ ಭವಸೇನ ದೇವನ ಶಿಷ್ಯ ಹಾಗೂ ಬೆಳಿಸೆಟ್ಟಿಯ ಹೆಂಡತಿ ಸೋಮಬೆಯ ಮರಣದ ಉಲ್ಲೇಖವಿದೆ. ಕ್ರಿ.ಶ. ೧೨ನೇ ಶತಮಾನದ ಶಿಗ್ಗಾಂವಿ ತಾಲೂಕಿನ ಹಿರೆಬೆಂಡಿಗೇರಿ ಶಾಸನದಲ್ಲಿ[೧೫೬] ಗೊರವಬ್ಬೆಯ ಚಟ್ಟಿಸೆಟ್ಟಿ ಸ್ವಯಂಭೂದೇವರಿಗೆ ನಾಟ್ಯಶಾಲೆ ಕಟ್ಟಿಸಿದನ್ನು ದಾಖಲಿಸಿದೆ. ಕ್ರಿ.ಶ. ೧೨೭೧ ಹಿರೇಕೆರೂರು ತಾಲೂಕಿನ ಹಿರೇಕೋಣತಿ ಶಾಸನದಲ್ಲಿ[೧೫೭] ಅನಂತಕೀರ್ತಿ ಭಟ್ಟಾರಕರ ಶಿಷ್ಯ ಕಾಮವೆಯ ಸನ್ಯಸನ ಮರಣದ ವಿಷಯ ತಿಳಿಯುತ್ತದೆ. ಕ್ರಿ.ಶ. ೧೨೭೮ರ ಮತ್ತೊಂದು ಶಾಸನದಲ್ಲಿ[೧೫೮] ಸೇನಭಟ್ಟಾರಕ ದೇವ ಶಿಷ್ಯನಾದ ಸೆಟ್ಟಿಯ ಸನ್ಯಾಸಮರಣ ಸ್ವೀಕರಿಸಿದ್ದನ್ನು ಉಲ್ಲೇಖಿಸುತ್ತದೆ. ಹದಿಮೂರನೇ ಶತಮಾನದ ಆಲದಗೇರಿ ಶಾಸನದಲ್ಲಿ[೧೫೯] ಮಣಿಕದೇ ಹಾಗೂ ಮಲಯ್ಯಗಳ ಸನ್ಯಾಸನ ವಿಧಿಯಿಂದ ಮರಣ ಹೊಂದಿದ ಉಲ್ಲೇಖವಿದೆ.

### ಅಗ್ರಹಾರ:

ಇದರ ಮೂಲರೂಪ 'ಅಗ್ರಹಾರ' ಎಂದಿರಬೇಕೆಂದು ಅಗ್ರ + ಹಾರ ಎಂಬ ಎರಡು ಪದಗಳ ಸಮಾನವೆಂದು ಪ್ರೊ. ನರಸಿಂಹಚಾರ್ಯರ ಅಭಿಪ್ರಾಯ. ಆಗ್ರ ಎಂದರೆ ಶ್ರೇಷ್ಠ ಹಾರ ಎಂದರೆ ದೇಶ, ಸ್ಥಳ. ಅಗ್ರಹಾರ ಎಂದರೆ ಶ್ರೇಷ್ಠರಿಗೆ ಕೊಟ್ಟಿರುವ ಸ್ಥಳ ಅಥವಾ ಊರು ಎಂದು ಅರ್ಥ[೧೬೦]. ಒಟ್ಟಾರೆ ಅಗ್ರಹಾರವೆಂದರೆ ವಿದ್ಯಾವಂತ ಬ್ರಾಹ್ಮಣರ ನಿವಾಸಕ್ಕಾಗಿ ಕೆಲವು ಗ್ರಾಮಗಳನ್ನು ಅಗ್ರಹಾರಗಳನ್ನಾಗಿ ಮಾರ್ಪಡಿಸಿ ಅವರಿಗೆ ದಾನವಾಗಿ ಬಿಟ್ಟು ಕೊಡುತ್ತಿದ್ದರು. ಪ್ರಾಚೀನ ಕಾಲದಲ್ಲಿ ರಾಜ್ಯವು ವಿದ್ಯಾಭ್ಯಾಸದ ಹೊಣೆಯನ್ನು ಪ್ರತ್ಯಕ್ಷವಾಗಿ ವಹಿಸಿದ್ದರು ಅಗ್ರಹಾರಗಳನ್ನು ಸ್ಥಾಪಿಸುವುದರ ಮೂಲಕ ಪರೋಕ್ಷವಾಗಿ ಸಹಾಯವೆನ್ನಬಹುದು[೧೬೧] ಹೀಗಿರುವಾಗ ಅಗ್ರಹಾರದಲ್ಲಿ ಬ್ರಾಹ್ಮಣರೇ ಇರಬೇಕೆಂದು ಇಲ್ಲ ಬೇರೆ ಬೇರೆ ಜನಾಂಗಗಳು ಇರಬಹುದು. ಆದರೆ ಊರಿನ ಉತ್ಪತ್ತಿಯೆಲ್ಲವೂ ಬ್ರಾಹ್ಮಣರಿಗೆ ಸಲ್ಲುತ್ತದೆ ಅಂದರೆ ಊರಿನಿಂದ ರಾಜ್ಯಾದಾಯಕ್ಕೆ ಸಲ್ಲಬೇಕಾಗಿದ್ದ ಸಂಪತ್ತನ್ನು ಬ್ರಾಹ್ಮಣರು ಅನುಭವಿಸುತ್ತಿದ್ದರು ಎಂದು ಅಗ್ರಹಾರಗಳನ್ನು ಸಾಮಾನ್ಯವಾಗಿ ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ಗುರುಕುಲದಿಂದ ಹಿಂದಿರುಗಿದ ಬ್ರಾಹ್ಮಣರು ಗೃಹಸ್ಥರಾಗಿ ನೆಲೆಗೊಳ್ಳಲು ಸಹಾಯಕರಾಗಿ ಅಗ್ರಹಾರಗಳನ್ನು ದಾನ ಕೊಡುತ್ತಿದ್ದರು ಎಂದು ಡಿ.ಸಿ. ಸರ್ಕಾರ ಅವರ ಮಾತನ್ನು ಚಿದಾನಂದಮೂರ್ತಿಯವರು ಉಲ್ಲೇಖಿಸಿದ್ದಾರೆ. ಆದರೆ ಅಗ್ರಹಾರಗಳನ್ನು ಮಾಡುವುದು ಆ ಕಾಲದ ಧಾರ್ಮಿಕ ಕೆಲಸ ಕಾರ್ಯಗಳಲ್ಲಿ ಒಂದಾಗಿದ್ದು ಇದೊಂದು ಪುಣ್ಯಸಂಪಾದನೆಯ ಮಾರ್ಗವೆಂದು ತಿಳಿಯಬಹುದಾಗಿತ್ತು.

ಅಗ್ರಹಾರಗಳು ಒಂದು ಗ್ರಾಮದ, ಪಟ್ಟಣದ ಭಾಗವಾಗಿ ಬೆಳವಣಿಗೆ ಹೊಂದಿದ್ದವು. ಅಗ್ರಹಾರಗಳು ಗುರುಕುಲ ಭಾಗವಾಗಿದ್ದರಿಂದ ಅಧ್ಯಯನಗಳನ್ನು ಕೈಗೊಂಡ ಅಭ್ಯರ್ಥಿಗಳೇ ಮಹಾಜನಗಳಾಗಿ ಒಂದೆಡೆ ಇರುವುದನ್ನು ಅಗ್ರಹಾರಗಳ ಬೆಳವಣಿಗೆಗೆ ಕಾರಣವಾದವು ಎಂಬ

ಅಂಶವನ್ನು ಅಗ್ರಹಗಾರಗಳ ಬಗೆಗೆ ವಿಶೇಷ ಅಧ್ಯಯನ ಮಾಡಿದ ಎಸ್.ಎಲ್. ಶಾಂತಕುಮಾರಿಯವರು ಹೇಳುತ್ತಾರೆ[೧೬೨].

ಕ್ರಿ.ಶ. ೧೦೫೩ ಕಲಕೇರಿ ಶಾಸನದಲ್ಲಿ[೧೬೩] ಪ್ರಥಮ ಬಾರಿಗೆ ಕುಪ್ಪಟೂರು ಠಾಣೆಯ ಉಲ್ಲೇಖ ಮಾಡಿದೆ. ಆದಿಷ್ಠಾಯಕನೂ ನಾಗವರ್ಮಯ್ಯ ಹೆಸರಿನ ವ್ಯಕ್ತಿ ಗ್ರಾಮದ ಠಾಣೆಯನ್ನು ಐನೂರ್ವರು ಕಟ್ಟಿಕೊಂಡಿದ್ದ ಮಳಿಗೆಗಳೆಂದು ತೋರುತ್ತದೆ. ಕ್ರಿ.ಶ. ೧೦೫೪ರ ಬೆಳವತ್ತಿ ಶಾಸನದಲ್ಲಿ[೧೬೪] ಹರಿಕೇಸರಿದೇವನು ಮಹಾಸಾಮಂತ ರಾಮದೇವನ ವಿನಂತಿಯ ಮೇರೆಗೆ ಅಗ್ರಹಾರಕ್ಕೆ ಬೆಳವಂತಿಯ ಮನೆವಣವನ್ನು ಬಿಟ್ಟುಕೊಟ್ಟ ಉಲ್ಲೇಖವಿದೆ.

ಕ್ರಿ.ಶ. ೧೦೭೨ರ ತಿಳುವಳ್ಳಿ ಶಾಸನದಲ್ಲಿ[೧೬೫] ಮನೆಪೆರ್ಗಡೆ ದಂಡನಾಯಕ ಅಧಿಕಾರಿಯಿಂದ ತಿಳುವಳ್ಳಿಯ ಅಗ್ರಹಾರದ ಮಹಾಜನರಿಗೆ ಪೆರ್ಜುಂಕಾದಿ ಸುಂಕದಾನ ಹಾಗೂ ದೊಡ್ಡಕೆರೆಯ ಏರಿಯ ರಚನೆಗಾಗಿ ಬಂಟರಿಂದ ದಾನ ಹಾಗೂ ಯಳವತ್ತಿಯ ದಂಡನಾಯಕ ಚರೋಜನ ಆದೇಶದಂತೆ ಕುಪ್ಪಟೂರು ಗ್ರಾಮದ ಭೂದಾನ, ಬನವಾಸಿ-೧೨೦೦೦, ಪೆರ್ಗಡೆ ಮಾದಿರಾಜನ ಆದೇಶದಂತೆ ತಿಳುವಳ್ಳಿಯಲ್ಲಿ ಮಾಳವಯ್ಯ ಬಿಟ್ಟ ದತ್ತಿಯನ್ನು ತಿಳಿಸುತ್ತದೆ. ಕ್ರಿ.ಶ. ೧೦೮೭ರ ಸವಣೂರು ತಾಲೂಕಿನ ಶಾಸನದಲ್ಲಿ[೧೬೬] ಸವಣೂರ ಅಗ್ರಹಾರದ ಇನ್ನೂರು ಮಹಾಜನರು ಗಡಿಗ್ರಾಮದ ಸವಣನೂರಿನ ಸಂರಕ್ಷಕನೆಂದು ಮಧುಸೂಧನನ್ನು ಆಯ್ಕೆ ಮಾಡಿದ ಉಲ್ಲೇಖವಿದೆ.

ಕ್ರಿ.ಶ. ೧೨ನೇ ಶತಮಾನದ ತಿಳುವಳ್ಳಿ ಶಾಸನದಲ್ಲಿ[೧೬೭] ತಿಳುವಳ್ಳಿ ಅಗ್ರಹಾರದ ಸಾಸಿರ್ವರ ಪರಿಚಯವನ್ನು ಸಂಕ್ಷಿಪ್ತವಾಗಿ ಪ್ರಥಮ ಬಾರಿಗೆ ಪರಿಚಯಿಸುತ್ತದೆ ಹಾಗೂ ಕ್ರಿ.ಶ. ೧೨೯೯ರ ಮತ್ತೊಂದು ಶಾಸನದಲ್ಲಿ[೧೬೮] ಮಾತ್ರ ಸಾಸಿರ್ವರ ಪರಿಚಯವನ್ನು ಸಂಪೂರ್ಣವಾಗಿ ತಿಳಿಸುತ್ತದೆ. ಕ್ರಿ.ಶ. ೧೨೩೧ರ ಹಾವೇರಿ ಶಾಸನದಲ್ಲಿ[೧೬೯] ಜೋಯಿದೇವನಾಯಕನಿಂದ ಅಗ್ರಹಾರ ಹಾವೇರಿಯ ಸಿದ್ದೇಶ್ವರ ನಂದಾದೀವಿಗೆಗಾಗಿ ಹಣದಾನದ ಉಲ್ಲೇಖವಿದೆ.

ಕ್ರಿ.ಶ. ೧೨೩೫ರ ದೇವಿಹೊಸೂರ ಶಾಸನದಲ್ಲಿ[೧೭೦] ಸುಂಕವೆರ್ಗಡೆ ಆಯಿದೇವನಿಂದ ದೇವಿಯ ಹೊಸವೂರಿನ ಅನಾದಿ ಅಗ್ರಹಾರದ ಮಹಾಜನರಿಗೆ ಸುಂಕದಾನ ಉಲ್ಲೇಖಿಸುತ್ತದೆ. ಕ್ರಿ.ಶ. ತೇದಿರಹಿತ ಹಾವೇರಿ ಶಾಸನದಲ್ಲಿ[೧೭೧] ಚಾಮುಂಡರಾಯನ ಆಳ್ವಿಕೆಯಲ್ಲಿ ಹಾವೇರಿಯು ಮಹಾಅಗ್ರಹಾರದ ಪುನರ್ದತ್ತಿ ದಾಖಲಿಸುತ್ತದೆ. ಕ್ರಿ.ಶ. ೧೨೯೯ರ ಹಾವೇರಿ ಶಾಸನದಲ್ಲಿ[೧೭೨] ಸುಂಕಾಧಿಕಾರಿ ಮಂಡಯ್ಯನಿಂದ ಅಗ್ರಹಾರ ಹಾವೇರಿಯ ಸಿದ್ದನಾಥ ದೇವರಿಗೆ ಸುಂಕಗಳ ದಾನ ಉಲ್ಲೇಖವಿದೆ. ಕ್ರಿ.ಶ. ೧೭೮೫ರ ಹಾವೇರಿ ಶಾಸನದಲ್ಲಿ[೧೭೩] ಶ್ರೀನಿವಾಸ ದೇವರ ಅಗ್ರಹಾರದಲ್ಲಿಯ ಬ್ರಾಹ್ಮಣ ವೃತ್ತಿಗಳ ಉಲ್ಲೇಖ ಕಂಡುಬರುತ್ತದೆ.

**ಮಠಗಳು:**

ಸ್ಥಾನಪತಿಗಳ ವಾಸಕ್ಕಾಗಿ ದೇವಾಲಯಗಳ ಪಕ್ಕದಲ್ಲಿಯೇ ಇನ್ನೊಂದು ಗೃಹವನ್ನು ಕಟ್ಟಲಾಯಿತು. ಇದನ್ನೇ ಮಠವೆಂದು ಕರೆಯುತ್ತೇವೆ. ಮಠ ಎಂಬ ಪದಕ್ಕೆ ಇರುವ ಮೂಲ ಅರ್ಥ ಕುಟೀರ. ಇದು ತಪಸ್ಸಿನ ಜ್ಞಾನ ಅನ್ವೇಷಣೆಗೆ ಧಾರ್ಮಿಕ ಕೇಂದ್ರ, ಕ್ರಮೇಣ, ಆಶ್ರಮ, ಗುರುಮನೆ, ಗುರುಕುಲಗಳಾಗಿ ಉರುಳಿದಂತೆ ವಿದ್ಯಾಪ್ರಸಾರ, ಜ್ಞಾನಪ್ರಸಾರ, ಮತಪ್ರಚಾರ ಕೇಂದ್ರಗಳಾಗಿ ಪರಿಣಮಿಸಿವೆ[೧೭೪].

ಕರ್ನಾಟಕದ ಇತಿಹಾಸದಲ್ಲಿ ಈ ಮಠ ಸಂಸ್ಥೆಯ ಬೆಳವಣಿಗೆಯನ್ನು ಗುರುತಿಸುವ ಪ್ರಯತ್ನಗಳು ನಡೆದಿಲ್ಲ. ಭಾರತದಲ್ಲಿ ಕ್ರಿ.ಪೂ. ೫ನೇ ಶತಮಾನದಷ್ಟು ಪುರಾತನ ಕಾಲದಲ್ಲಿ ಗುರುಕುಲಗಳು ಇದ್ದವು. ರಾಮಾಯಣದಲ್ಲಿ ಕರ್ನಾಟಕದ ನಾನಾ ಸ್ಥಳಗಳಲ್ಲಿ ಋಷಿ ಮುನಿಗಳು ತಪಸ್ಸನ್ನು ಮಾಡಿಕೊಂಡಿದ್ದರೆಂದು ತಿಳಿದುಬರುತ್ತದೆ. ಇವುಗಳ ಜೊತೆಗೆ ಬೌದ್ಧವಿಹಾರಗಳು, ಸಂಘಾರಾಮಗಳು, ಜೈನವಸತಿಗಳು (ಬಸದಿ) ಇದ್ದವು. ಬೌದ್ಧ ಮತ್ತು ಜೈನವಿಹಾರಗಳು ಸುಮಾರು ಹಿಂದಿನ ಮಠದ ಸ್ವರೂಪವನ್ನೇ ಹೊಂದಿದ್ದವು. ಉದಾಹರಣೆಗೆ ಶ್ರವಣಬೆಳಗೊಳ, ಪ್ರಸಿದ್ಧ ಜೈನ ಧಾರ್ಮಿಕ ಕೇಂದ್ರವಾಗಿತ್ತೆಂದು ಜೈನ ಗ್ರಂಥಗಳಿಂದಲೂ ಕ್ರಿ.ಪೂ. ೩ನೇ ಶತಮಾನಗಳಲ್ಲಿಯೇ ಅಶೋಕ ಮೈಹೀಷಮಂಡಳಕ್ಕೆ ಧರ್ಮಪ್ರಚಾರಕರನ್ನು ಕಳುಹಿಸಿದನೆಂದು ಬೌದ್ಧ ಮುನಿಗಳಿಂದ ತಿಳಿದು ಬರುತ್ತದೆ[೧೭೫]. ಆದ್ದರಿಂದ ಈ ಕಾಲದಲ್ಲಿ ಅವರ ವಿಹಾರ ಮಠಗಳು ಇದ್ದರಿಬಹುದೆಂದು ಊಹಿಸಬಹುದು. ೧೦-೧೨ ಶತಮಾನಗಳಲ್ಲಿ ಪಾಶುಪಾತ, ಶೈವಪಂಥ ಅನೇಕ ದೇವಾಲಯಗಳು, ಮಠಗಳು, ಕರ್ನಾಟಕದ ನಾನಾ ಭಾಗಗಳಲ್ಲಿ ಹರಡಿರುವುದಕ್ಕೆ ಶಾಸನ ಆಧಾರಗಳು ಇವೆ. ಹೀಗಿರುವಾಗ ಹಾವೇರಿ ಜಿಲ್ಲೆಯ ಶಾಸನಗಳನ್ನು ಅವಲೋಕಿಸಿದಾಗ, ಕ್ರಿ.ಶ. ೧೦೨೮ರ ಹಾನಗಲ್ಲು ತಾಲೂಕಿನ ಉಪ್ಪಹುಣಸಿ ಶಾಸನದಲ್ಲಿ[೧೭೬] ಕುಂದರಾಜನ ಮಹಾದೇವಿ ಕುಂದಬ್ಬರಸಿಯಿಂದ ಕಲ್ಲೇಶ್ವರ ದೇವಾಲಯದ ಮಠಕ್ಕೆ ದಾನ ಉಲ್ಲೇಖವಿದೆ. ಕ್ರಿ.ಶ. ತೇದಿರಹಿತ ಸುರಳೇಶ್ವರ ಶಾಸನದಲ್ಲಿ ದೊಡ್ಡಬಸವಪ್ಪನಿಂದ ವಿರಕ್ತ ಮಠದ ನಿರ್ಮಾಣ ಉಲ್ಲೇಖಿಸುತ್ತದೆ. ಕ್ರಿ.ಶ. ತೇದಿರಹಿತ ಹಂಸಬಾವಿ ಶಾಸನದಲ್ಲಿ[೧೭೭] ತೊಗರಸೆ ಸಿಂಹಾಸನದ ಸಿರುಸಾಳದೇವಮಠ ಎಂಬ ದಾಖಲೆಯಿದೆ. ಶಿಗ್ಗಾಂವಿ ತಾಲೂಕಿನ ಬಾಬಾ ಪೂರ ತೇದಿರಹಿತ ಶಾಸನದಲ್ಲಿ[೧೭೮] ಮಠದ ಪೂಜಾರಿ ಸಾಂತದೇವನಿಗೆ ಬಸವಣ್ಣ ದೇವರ ಭೂಮಿಯ ಕೊಡುಗೆಯನ್ನು ತಿಳಿಸುತ್ತದೆ ಹಾಗೂ ಗುಂಡೂರ ಶಾಸನದಲ್ಲಿ[೧೭೯] ಬಸವಗೌಡನು ಮಠಕ್ಕೆ ನೀಡಿದ ಜಾಗ ಎಂಬ ಉಲ್ಲೇಖ ಕಂಡುಬರುತ್ತದೆ.

ಹಾನಗಲ್ಲು ತಾಲೂಕಿನ ಯಳವಟ್ಟಿ ಕ್ರಿ.ಶ. ೧೧೧೪ರ ಶಾಸನದಲ್ಲಿ[೧೮೦] ಮಾಳಬೇಶ್ವರ ದೇವಾಲಯದ ದೇವಾಲಯಕ್ಕೆ ಹೊಂದಿಕೊಂಡಂತೆ ತೆಂಗಿನಮಠವಿತ್ತೆಂದು ಹಾಗೂ ಈ ಮಠದ ಮತ್ತು ದೇವಾಲಯದ ಆಚಾರ್ಯನಾಗಿ ವಾರೇಶ್ವರ ಪಂಡಿತ ದೇವರ ಶಿಷ್ಯನಾದ

ಸೂರ್ಯಭರಣ ಪಂಡಿತ ದೇವನು ಇದ್ದನೆಂದು ಹಾಗೂ ಈಶಾನ್ಯ ಶಕ್ತಿ ಪಂಡಿತ ದೇವನು ಕೂಡ ಅಧಿಕಾರವನ್ನು ಹೊಂದಿದ್ದನೆಂದು ಹೇಳುತ್ತದೆ.

ಇದೇ ಕಾಲದ ಸಾತೇನಹಳ್ಳಿಯ ಕ್ರಿ.ಶ. ೧೧೧೪ರ[೧೮೧] ಶಾಸನದಲ್ಲಿ ಗುಂಡೇಶ್ವರ ದೇವಾಲಯದ ಮಠವನ್ನು ಹೊಂದಿತ್ತೆಂದು ಚಂದ್ರಭೂಷಣ ಪಂಡಿತನು ಸ್ಥಾನಪತಿಯಾಗಿದ್ದನೆಂದು ಹೇಳುತ್ತದೆ.

ಕ್ರಿ.ಶ. ೧೨ನೇ ಶತಮಾನ ಹಿರೇಕೆರೂರು ತಾಲೂಕಿನ ಅನಜಿ ಶಾನಸದಲ್ಲಿ[೧೮೨] ಜೋಗರಸನು ಎಡವಟ್ಟಿ – ೭೦, ಅತ್ತಿಗೇರಿ – ೧೨, ಎಳಂಬಾರು – ೧೨, ಆಳುವಾಗ ಮಠಕ್ಕೆ ಬಿಟ್ಟ ದಾನ ದತ್ತಿ ಉಲ್ಲೇಖವಿದೆ. ಕ್ರಿ.ಶ. ೧೫ನೇ ಶತಮಾನದ ಶಿಗ್ಗಾಂವ ತಾಲೂಕಿನ ಹಿರೆಬೆಂಡಿಗೇರಿ ಶಾಸನದಲ್ಲಿ[೧೮೩] ಬಿಳಿಗೆಯ ಘಂಟ ಒಡೆಯನಿಂದ ಕೋರ್ಯಾನ್ನಮಠಕ್ಕೆ ಭೂದಾನ ಉಲ್ಲೇಖಿಸಿದೆ. ಕ್ರಿ.ಶ. ೧೨೦೪ರ ಸಾತೇನಹಳ್ಳಿ ಶಾಸನದಲ್ಲಿ[೧೮೪] ಸುದೀರ್ಘ ಶಾಸನ ಈ ಮುನಿಗಳನ್ನು ಇವರ ಗುರುಪರಂಪರೆಯನ್ನು ಸೂರಲಿ ಗ್ರಾಮದವರು, ಕಾಳಮುಖದ ಪಂಥದ ಇವರು ಸೂರಿಲಿ ಅಗ್ರಹಾರ ಭಾಯಿಲೇಶ್ವರ ದೇವರ ಆಚಾರ್ಯರು, ಇವರದು ಬಿಲ್ಲಿಮಠ ಇವರ ವಂಶಾವಳಿ ಹೀಗೆ ಇದೆ. ಪಿನಾಕಪಾಣಿ, ಶಿವರಾಶಿ, ಅಮೃತರಾಶಿ, ಹರರಶಕ್ತಿ, ಈ ವಂಶದ ಮೂಲ ಯತಿಗೆ 'ಪಿನಾಕಪಾಣಿ' ಎಂಬ ಹೆಸರು ಬಂದ ಬಗೆಯನ್ನು ಶಾಸನದಲ್ಲಿ ವಿವರವಾಗಿ ಹೇಳಲಾಗಿದೆ. 'ಪಿನಾಕಪಾಣಿ' ಇವರ ಮಠಕ್ಕೆ 'ಬಿಲ್ಲಮಠ' ಎಂಬ ಹೆಸರುಗಳು ಉಂಟಾದವು. ಈ ಮಠವು ಪುತ್ರಸಂತಾನ ಪರಂಪರೆಗೆ ಸೇರಿದ್ದು, ಸಾತೇನಹಳ್ಳಿ ಹರಿಹರೇಶ್ವರ ದೇವಾಲಯಕ್ಕೆ ಹರಶಕ್ತಿ ದೇವರ ಕಾಲಂಕರ್ಚಿ ದತ್ತಿ ಬಿಡಲಾಯಿತು. ಶಾಸನ ಹರಶಕ್ತಿದೇವನನ್ನು ಬಹುವಾಗಿ ಪ್ರಶಂಸಿಸಿದೆ. ಕ್ರಿ.ಶ. ೧೮೨೭ರ ಹಿರೇಕೆರೂರ ತಾಲೂಕಿನ ಶಾಸನದಲ್ಲಿ[೧೮೫] ಚಿಕ್ಕೆರೂರ ಹಿರೇಮಠದಪ್ಪನಿಂದ ವಿರುಕ್ತಮಠದ ಮರಳು ಸಿದ್ದಪ್ಪನಿಗೆ ಭೂದಾನ ಉಲ್ಲೇಖವಿದೆ. ಹೀಗೆ ಹಾವೇರಿ ಜಿಲ್ಲೆಯ ಶಾಸನಗಳಲ್ಲಿ ಮಠಗಳನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

**ಟಿಪ್ಪಣಿಗಳು:**

೧. ತಿಪ್ಪೇರುದ್ರಸ್ವಾಮಿ ಹೆಚ್., ೨೦೧೦, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಮೈಸೂರು, ಪುಟ. ೧೯೩.

೨. ಚಿದಾನಂದ ಮೂರ್ತಿ ಎಂ., ೨೦೦೮, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಬೆಂಗಳೂರು, ಪುಟ ೭೭- ೭೮.

೩. ಕನ್ನಡ ವಿಷಯ ವಿಶ್ವಕೋಶ, ೨೦೦೯, ಇತಿಹಾಸ ಮತ್ತು ಪುರಾತತ್ವ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪ್ರಸಾರಾಂಗ, ಪುಟ. ೬೮೪.

೪. ಎಚ್ಚೆಸ್ಕೆ (ಸಂ.), ಅವಲೋಕನ, ಕರ್ನಾಟಕ ಪರಂಪರೆಯ ಸಮೀಕ್ಷೆ, ಪುಟ. ೧೫೪.

೫. ಎಸ್.ಐ.ಐ. ಸಂ. XX ಪುಟ. ೪೯, ೧೦೭೧–೭೨.

೬. ಚಿದಾನಂದಮೂರ್ತಿ ಎಂ. ೨೦೦೮, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಬೆಂಗಳೂರು, ಪುಟ. ೭೭–೭೮.

೭. ಎಚ್ಚೆಸ್ಕೆ (ಸಂ.), ಅವಲೋಕನ, ಕರ್ನಾಟಕ ಪರಂಪರೆಯ ಸಮೀಕ್ಷೆ, ಪುಟ. ೧೫೪.

೮. ಕ.ಇ.ಸಂ.I, ೩, ಎಸ್.ಐ.ಐ.ಸಂ.XX ೯, ಐ.ಐ.ಸಂ. XI, ಪುಟ. ೬೯.

೯. ಕ.ಇ.ಸಂ.VI, ೧, ಕೆ.ಆರ್.ಐ.ಪಿ.ಆರ್.೧೫೫೩–೫೭, ಪುಟ. ೭೦–೭೧.

೧೦. ಕ.ಇ.ಸಂ.II, ೫, ಎಸ್.ಐ.ಐ.ಸಂ.XX ೯, ಐ.ಐ.ಸಂ. XI, ಪುಟ. ೬೯.

೧೧. ಧಾ.ಜಿ.ಶಾ.ಸೂ. ಶಾ.ಸಂ. ೮೩, ಪುಟ. ೫೩.

೧೨. ಅದೇ, ಶಾ.ಸಂ. ೭೨, ಪುಟ. ೨೯.

೧೩. ಅದೇ, ಶಾ.ಸಂ. ೮೬, ಪುಟ. ೪೬.

೧೪. ಎಸ್.ಐ.ಐ.ಸಂ. ೧೮, ಪುಟ. ೧೫೧, ಕ್ರಿ.ಶ. ೧೧೪೮.

೧೫. ಧಾ.ಜಿ.ಶಾ.ಸೂ., ಶಾ.ಸಂ. ೬೭, ಪುಟ. ೪೫.

೧೬. ಎಸ್.ಐ.ಐ.ಸಂ. ೧೮, ಪುಟ. ೧೮೦, ಕ್ರಿ.ಶ. ೧೧೬೮.

೧೭. ಧಾ.ಜಿ.ಶಾ.ಸೂ., ಶಾ.ಸಂ. ೫೦, ಪುಟ. ೫೫.

೧೮. ಧಾ.ಜಿ.ಶಾ.ಸೂ. ಶಾ.ಸಂ. ೨೩೨, ೨೩೯, ೨೪೦, ೨೪೯, ಪುಟ. ೬೬

೧೯. ಅದೇ, ಶಾ.ಸಂ. ೧೩೧, ಪುಟ. ೪೭.

೨೦. ಧಾ.ಜಿ.ಶಾ.ಸೂ. ಶಾ.ಸಂ. ೧೨, ೧೩, ೧೬, ಪುಟ. ೭೦.

೨೧. ಎಫ್.ಇ. ಸಂ. V, ಪುಟ. ೨೩೭–೬೦.

೨೨. ಎಂ.ಎ.ಆರ್., ೧೯೨೮, ಪುಟ. ೯೫.

೨೩. ಧಾ.ಜಿ.ಶಾ.ಸೂ. ಶಾ.ಸಂ. ೬೭, ಪುಟ. ೬೦.

೨೪. ಅದೇ, ಶಾ.ಸಂ. ೧೮೬, ಪುಟ. ೬೪.

೨೫. ಅದೇ, ಶಾ.ಸಂ. ೧೯೪, ಪುಟ. ೬೪.

೨೬. ಅದೇ, ಶಾ.ಸಂ. ೧೦೭, ಪುಟ. ३೦.

೨೭. ಕ.ಇ.ಸಂ.V, ಪುಟ. ೪೭.

೨೮. ಹನುಮಾಕ್ಷಿಗೋಗಿ, ೨೦೦೨, ಅನುಶಾಸನ ಮಹಿಳಾ ಸಾಹಿತ್ಯ ನವನಗರ ಹುಬ್ಬಳ್ಳಿ, ಪುಟ. ३३೫-३೬.

೨೯. ಧಾ.ಜಿ.ಶಾ.ಸೂ. ಶಾ.ಸಂ. ೧೪೦, ಪುಟ. ೪೭.

३೦. ಕ.ಇ.ಸಂ.,VI, ಪುಟ. ೪೯, ಹಿರೇಕೋಣತಿ ಕ್ರಿ.ಶ. ೧೨೭೧.

३೧. ಕ.ಇ.ಸಂ.,V, ಪುಟ. ೫೦, ಹಿರೇಕೋಣತಿ ಕ್ರಿ.ಶ. ೧೨೭೮.

३೨. ಧಾ.ಜಿ.ಶಾ.ಸೂ. ಶಾ.ಸಂ. ೨೭೮, ೨೭೯, ಪುಟ. ೮೦.

३३. ಅದೇ, ಪುಟ ೭೨.

३೪. ಹನುಮಾಕ್ಷಿಗೋಗಿ, ಅನುಶಾಸನ ೨೦೦೨, ಮಹಿಳಾ ಸಾಹಿತ್ಯ ನವನಗರ ಹುಬ್ಬಳ್ಳಿ, ಪುಟ. ३೪೦.

३೫. ಎಸ್.ಐ.ಐ.ಸಂ.XX, ಪುಟ. ೨೨३, ಕ್ರಿ.ಶ. ೨೪೯, ಕಲಕೇರಿ, ಹಾನಗಲ್ಲು ತಾಲ್ಲೂಕು.

३೬. ಕ.ಇ.ಸಂ.IV, ೯.

३೭. ಧಾ.ಜಿ.ಶಾ.ಸೂ. ಶಾ.ಸಂ. ೧೮३, ಪುಟ. ३३.

३೮. ಅದೇ, ಶಾ.ಸಂ. ೧೮೪, ಪುಟ. ೪೯.

३೯. ಅದೇ, ಶಾ.ಸಂ. ೨೮೧, ಪುಟ. ೬೭.

೪೦. ಹನುಮಾಕ್ಷಿಗೋಗಿ, ೨೦೦೨, ಅನುಶಾಸನ, ಮಹಿಳಾ ಸಾಹಿತ್ಯ ನವನಗರ ಹುಬ್ಬಳ್ಳಿ, ಪುಟ. ३೪೦.

೪೧. ಅದೇ, ಪುಟ. ೨೫೧.

೪೨. ಚಿದಾನಂದಮೂರ್ತಿ ಎಂ. ೨೦೦೮, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಬೆಂಗಳೂರು, ಪುಟ. ೧೭೭.

೪३. ಕನ್ನಡ ಸಾಹಿತ್ಯ ಚರಿತ್ರೆ, ಸಂ. ೧, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೫೧೬-೫೧೭.

೪೪. ಕೆ.ಆರ್.ಐ. ಪಿ.ಆರ್. ೧೯೫३-೫೭, ಪುಟ. ೭೨.

೪೫. ಅದೇ, ಪುಟ-೭೨.

೪೬. ಎಪಿ, ಇಂ. ಸಂ. XXXIII ಪುಟ. ೧३೧-३३

೪೭. ಕೆ.ಕೆ. ಪುಟ. ೪೨೭-३३.

೪೮. ಧಾ.ಜಿ.ಶಾ.ಸೂ.ಶಾ.ಸಂ.೭೭ ಪುಟ. ೨೯

೪೯. ಅದೇ ಶಾ.ಸಂ.೨೫೮, ಪುಟ. ೬೭

೫೦. ಅದೇ ಶಾ.ಸಂ. ೨೮ ಪುಟ. ೫೯.

೫೧. ಅದೇ ಶಾ.ಸಂ. ೩೬ ಪುಟ. ೫೧.

೫೨. ಎಸ್.ಐ.ಐ.ಸಂ xx ಪುಟ. ೩೧.

೫೩. ಕ.ಇ.ಸಂ. IV ಪುಟ. ೪೧.

೫೪. ಧಾ.ಜಿ.ಶಾ.ಸೂ.ಶಾ.ಸಂ. ೧೯೯ ಪುಟ. ೬೫.

೫೫. ಅದೇ ಶಾ.ಸಂ. ೪೬ ಪುಟ. ೭೧.

೫೬. ಧಾ.ಜಿ.ಶಾ.ಸೂ.ಶಾ.ಸಂ.೧೦೮ ಪುಟ. ೪೬.

೫೭. ಅದೇ ಶಾ.ಸಂ.೨೦೦. ಪುಟ. ೬೫.

೫೮. ನಾಗಯ್ಯ ಜೆ.ಎಂ., ೧೯೯೫, ಕಲಕೇರಿ, ಶ್ರೀಬಸವೇಶ್ವರ ದೇವಸ್ಥಾನ ಟ್ರಸ್ಟ್ ಕಲಕೇರಿ, ಹಾನಗಲ್ಲು ತಾಲೂಕು ಹಾವೇರಿ.

೫೯. ಧಾ.ಜಿ. ಶಾ.ಸೂ.ಶಾ.ಸಂ.೩೧ ಪುಟ. ೪೪.

೬೦. ಧಾ.ಜಿ.ಶಾ.ಸೂ.ಶಾ.ಸಂ.೧೦೫ ಪುಟ. ೫೩.

೬೧. ಅದೇ ಶಾ.ಸಂ.೯, ಪುಟ. ೪೬.

೬೨. ಎಫಿ, ಇಂ. ಸಂ.XIX ಪುಟ. ೧೮೩-೮೭.

೬೩. ಧಾ.ಜಿ.ಶಾ.ಸೂ.ಶಾ.ಸಂ. ೨೦೩. ಪುಟ. ೬೫.

೬೪. ಧಾ.ಜಿ.ಶಾ.ಸೂ.ಶಾ.ಸಂ ೭, ಪುಟ. ೬೫.

೬೫. ಅದೇ ಶಾ.ಸಂ.೪೬, ಪುಟ. ೪೪.

೬೬. ಎಫಿ, ಇಂ. ಸಂ. XIX ಪುಟ. ೧೮೩-೮೭.

೬೭. ಎಫಿ, ಇಂ. ಸಂ. XX ಪುಟ. ೪೯.

೬೮. ಎಸ್.ಐ.ಐ.ಸಂ XXIII ಪುಟ. ೮೮ ಕ್ರಿ.ಶ.೧೦೮೦.

೬೯. ಅದೇ ಶಾ.ಸಂ.೨೭೨, ಪುಟ. ೬೭.

೭೦. ಅದೇ ಶಾ.ಸಂ. ೧೦೨, ಪುಟ. ೭೩.

೭೧. ಅದೇ ಶಾ.ಸಂ. ೯೨, ಕ್ರಿ.ಶ.೧೦೮೭.

೭೨. ಎಸ್.ಐ.ಐ.ಸಂ XX, ಪುಟ. ೯೮ ಕ್ರಿ.ಶ.೧೧೯೨.

೭೩. ಅದೇ ಶಾ.ಸಂ.೫೯, ಪುಟ. ೪೬.

೭೪. ಅದೇ ಶಾ.ಸಂ. ೧೫೫, ಪುಟ. ೪೮

೭೫. ಅದೇ ಶಾ.ಸಂ. ೪, ಪುಟ. ೪೩.

೭೬. ಎಸ್.ಐ.ಐ.ಸಂ XX, ಪುಟ. ೭೬.

೭೭. ಕ.ಇ.ಸಂ. V, ಪುಟ. ೮೦.

೭೮. ಕ.ಇ.ಸಂ. IV, ಪುಟ. ೧೦.

೭೯. ಧಾ.ಜಿ.ಶಾ.ಸೂ.ಶಾ.ಸಂ.೧೭. ಪುಟ. ೫೦.

೮೦. ಅದೇ ಸಂ. ೨೬೨ ಪುಟ. ೭೯.

೮೧. ಕ.ಇ.ಸಂ. VI ಪುಟ. ೨೦.

೮೨. ಧಾ.ಜಿ.ಶಾ.ಸೂ.ಶಾ.ಸಂ. ೧೧೦. ಪುಟ. ೪೬.

೮೩. ಎಸ್.ಐ.ಐ.ಸಂ XX, ಪುಟ. ೮೭.

೮೪. ಧಾ.ಜಿ.ಶಾ.ಸೂ.ಶಾ.ಸಂ.೧೫೨. ಪುಟ. ೩೨.

೮೫. ಕ.ಇ.ಸಂ. VI, ಪುಟ. ೨೫.

೮೬. ಕ.ಇ.ಸಂ. II, ಪುಟ. ೧೯.

೮೭. ಎಫಿ, ಇಂ. ಸಂ. IX, ಪುಟ. ೧೮೩–೮೭.

೮೮. ಧಾ.ಜಿ.ಶಾ.ಸೂ.ಶಾ.ಸಂ.೧. ಪುಟ. ೨೭.

೮೯. ಕ.ಇ.ಸಂ. VI, ಪುಟ. ೨೮.

೯೦. ಕ.ಇ.ಸಂ. IV, ಪುಟ. ೨೯.

೯೧. ಧಾ.ಜಿ.ಶಾ.ಸೂ.ಶಾ.ಸಂ.೧೦೦. ಪುಟ. ೪೬.

೯೨. ಅದೇ ಶಾ.ಸಂ ೧೫೯ ಪುಟ. ೪೮.

೯೩. ಕ.ಇ.ಸಂ. IV ಪುಟ. ೧೩.

೯೪. ಎಫಿ, ಇಂ. ಸಂ. XX ಪುಟ. ೧೦೯–೨೨.

೯೫. ಕ.ಇ.ಸಂ. VI ಪುಟ. ೩೩.

೯೬. ಧಾ.ಜಿ.ಶಾ.ಸೂ.ಶಾ.ಸಂ.೭೧. ಪುಟ. ೫೨.

೯೭. ಎಸ್.ಐ.ಐ.ಸಂ XX ಪುಟ. ೧೯೬.

೯೮. ಸಿ.ಎಂ. ಪುಟ. ೧೦೮–೧೧.

೯೯. ಧಾ.ಜಿ.ಶಾ.ಸೂ.ಶಾ.ಸಂ.೧೯೫. ಪುಟ. ೬೪.

೧೦೦. ಅದೇ ಶಾ.ಸಂ ೨೪೬ ಪುಟ. ೬೯.

೧೦೧. ಚಿದಾನಂದಮೂರ್ತಿ ಎಂ. ೨೦೦೮ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಬೆಂಗಳೂರು ಪುಟ. ೧೪೨.

೧೦೨. ಕ.ಇ.ಸಂ. VI ಪುಟ. ೩.

೧೦೩. ನಾಗಯ್ಯ ಜೆ.ಎಂ., ೧೯೯೫ ಕಲಕೇರಿ ಶ್ರೀ ಬಸವೇಶ್ವರ ದೇವಸ್ಥಾನ ಟ್ರಸ್ಟ್, ಕಲಕೇರಿ ಹಾನಗಲ್ಲು ತಾಲ್ಲೂಕು ಹಾವೇರಿ ಪುಟ. ೪೪.

೧೦೪. ಅದೇ.

೧೦೫. ಎಸ್.ಐ.ಐ.ಸಂ XX ಪುಟ. ೪೯ ಕ್ರಿ.ಶ.೧೦೭೬ ಕಲಕೇರಿ

೧೦೬. ಕ.ಇ.ಸಂ. V ಪುಟ. ೧೮.

೧೦೭. ಕ.ಇ.ಸಂ. V ಪುಟ. ೯೫.

೧೦೮. ಕ.ಇ.ಸಂ. VI ಪುಟ. ೩೩.

೧೦೯. ಕ.ಇ.ಸಂ. V ಪುಟ. ೭.

೧೧೦. ಕ.ಇ.ಸಂ. VI ಪುಟ. ೩೭–೭೪

೧೧೧. ಕ.ಇ.ಸಂ. VI ಪುಟ. ೭೫.

೧೧೨. ವಿರೂಪಾಕ್ಷ ಕುಲಕರ್ಣಿ, ೨೦೦೫, ಕಾಪಾಲಿಕರು ಮತ್ತು ಕಾಳಮುಖರು, ಬೆಂಗಳೂರು, ಪುಟ. ೨೯೧

೧೧೩. ಅದೇ ಪುಟ.೨೮೩.

೧೧೪. ಅದೇ ಪುಟ ೨೮೪.

೧೧೫. ಅದೇ ಪುಟ ೨೮೧.

೧೧೬. ಶಿವರುದ್ರಪ್ಪ ಎಲ್.ಎ. ಶರಣಧರ್ಮದಲ್ಲಿ ವೀರಶೈವತತ್ವದ ಮೌಲ್ಯಗಳು ಪುಟ. ೪೫.

೧೧೭. ಅಬ್ಬಲೂರು ಚರಿತೆ (ಶಾಂತ ನಿರಂಜನ) ೧೯೭೩ ಸಂ.ಎನ್.ಬಸವಾರಾಧ್ಯ ಪ್ರಸಾರಂಗ, ಮೈಸೂರು ವಿ.ವಿ.ಮೈಸೂರು ಪುಟ. ೪೪.

೧೧೮. ಧಾ.ಜಿ.ಶಾ.ಸೂ.ಶಾ.ಸಂ. ೩೫೩ ಪುಟ. ೭೯.

೧೧೯. ಅದೇ ಶಾ.ಸಂ.೧೦೫, ಪುಟ. ೭೪.

೧೨೦. ಅದೇ ಶಾ.ಸಂ.೯೩. ಪುಟ ೫೭.

೧೨೧. ವಿರೂಪಾಕ್ಷ ಕುಲಕರ್ಣಿ, ೨೦೦೫ ಕಾಪಾಲಿಕರು ಮತ್ತು ಕಾಳಮುಖರು, ಬೆಂಗಳೂರು ಪುಟ. ೨೮೯.

೧೨೨. ಚಿದಾನಂದಮೂರ್ತಿ ಎಂ. ೨೦೦೮ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಬೆಂಗಳೂರು ಪುಟ. ೧೭೯.

೧೨೩. ಎಂ.ಎಂ.ಆರ್ ೧೯೩೦, ಪುಟ. ೭೩.

೧೨೪. ಭೋಜರಾಜ ಪಾಟೀಲ, ೧೯೯೫ ನಾಗರಖಂಡ ೭೦ ಒಂದು ಅಧ್ಯಾಯದ ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ, ಆನಂದಪುರ. ಪುಟ. ೨೪೨.

೧೨೫. ಧಾ.ಜಿ.ಶಾ.ಸೂ.ಶಾ.ಸಂ.೧೩೯. ಪುಟ. ೭೫.

೧೨೬. ನಾಗಯ್ಯ ಜೆ.ಎಂ., ೧೯೯೫ ಕಲಕೇರಿ ಶ್ರೀ ಬಸವೇಶ್ವರ ದೇವಸ್ಥಾನ ಟ್ರಸ್ಟ್, ಕಲಕೇರಿ ಹಾನಗಲ್ಲು ತಾಲ್ಲೂಕು ಹಾವೇರಿ ಪುಟ. ೪೬

೧೨೭. ಧಾ.ಜಿ.ಶಾ.ಸೂ.ಶಾ.ಸಂ.೫೩. ಪುಟ. ೨೮.

೧೨೮. ಐ.ಐ.ಸಂ X ಪುಟ. ೨೪೯-೫೫.

೧೨೯. ಧಾ.ಜಿ.ಶಾ.ಸೂ.ಶಾ.ಸಂ.೧೨೯-೧೩೦ ಪುಟ. ೬೨

೧೩೦. ಅದೇ, ಪುಟ ೬೨.

೧೩೧. ಅದೇ ಶಾ.ಸಂ.೨೨೬ ಪುಟ. ೬೬.

೧೩೨. ಅದೇ ಶಾ.ಸಂ.೨೦೮ ಪುಟ. ೬೫.

೧೩೩. ಕ.ಇ.ಸಂ. II, ಪುಟ. ೫೮.

೧೩೪. ಎಸ್.ಐ.ಐ.ಸಂ XX ಪುಟ. ೧೪೨.

೧೩೫. ಕ.ಇ.ಸಂ. VI ಪುಟ. ೩೯.

೧೩೬. ಕ.ಇ.ಸಂ. VI ಪುಟ. ೭೪.

೧೩೭. ಧಾ.ಜಿ.ಶಾ.ಸೂ.ಶಾ.ಸಂ.೧೩ ಪುಟ. ೫೮.

೧೩೮. ಕ.ಇ.ಸಂ. IV ಪುಟ. ೧.

೧೩೯. ಧಾ.ಜಿ.ಶಾ.ಸೂ.ಶಾ.ಸಂ.೬೧ ಪುಟ. ೫೨.

೧೪೦. ಕ.ಇ.ಸಂ. VI ಪುಟ. ೪೨ ಕೆ.ಕೆ. ಪುಟ. ೪೬೦-೬೫.

೧೪೧. ಕ.ಇ.ಸಂ. VI ಪುಟ. ೪೪.

೧೪೨. ಕ.ಇ.ಸಂ. IV ಪುಟ. ೨.

೧೪೩. ಧಾ.ಜಿ.ಶಾ.ಸೂ.ಶಾ.ಸಂ. ೫೨ ಪುಟ. ೬೦.

೧೪೪. ಅದೇ ಶಾ.ಸಂ.೨೨ ಪುಟ. ೫೪.

೧೪೫. ಅದೇ ಶಾ.ಸಂ. ೯೫, ಪುಟ ೭೩.

೧೪೬. ಅದೇ ಶಾ.ಸಂ.೪೦, ಪುಟ ೪೪.

೧೪೭. ಅದೇ ಶಾ.ಸಂ.೧೦೨ ಪುಟ ೪೬.

೧೪೮. ತಿಪ್ಪೇರುದ್ರಸ್ವಾಮಿ ಎಚ್. ೨೦೧೦ ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಮೈಸೂರು, ಪುಟ ೨೧೫.

೧೪೯. ವೆಂಕಟರಾಯ ಬಿ., ಯೋಗವೇದಾಂತ ದರ್ಶನ, ಪುಟ – ೨೨.

೧೫೦. ನಾಗಯ್ಯ ಜೆ.ಎಂ., ೧೯೯೫ ಕಲಕೇರಿ ಶ್ರೀ ಬಸವೇಶ್ವರ ದೇವಸ್ಥಾನ ಜೀರ್ಣೋದ್ಧಾರ ಟ್ರಸ್ಟ್, ಕಲಕೇರಿ ಹಾನಗಲ್ಲು ತಾಲ್ಲೂಕು ಹಾವೇರಿ ಪುಟ. ೬೭.

೧೫೧. ಕ.ಇ.ಸಂ.V, ಪುಟ. ೧೭.

೧೫೨. ಕ.ಇ.ಸಂ.VI, ಪುಟ. ೨೮, ಕ್ರಿಶ. ೧೧೪೩.

೧೫೩. ಕ.ಇ.ಸಂ. IV, ಪುಟ. ೨೨, ಕ್ರಿ.ಶ. ೧೧೪೪.

೧೫೪. ಕ.ಇ.ಸಂ. IV, ಪುಟ. ೧೫, ಕ್ರಿ.ಶ. ೧೧೬೮.

೧೫೫. ಧಾ.ಜಿ.ಶಾ.ಸೂ., ಶಾ.ಸಂ. ೧೨೩, ಪುಟ ೭೪.

೧೫೬. ಅದೇ, ಶಾ.ಸಂ. ೧೫೦ ಪುಟ. ೩೨.

೧೫೭. ಕ.ಇ.ಸಂ.VI, ಪುಟ. ೪೯.

೧೫೮. ಅದೇ, ಪುಟ. ೫೦.

೧೫೯. ಧಾ.ಜಿ.ಶಾ.ಸೂ., ಶಾ.ಸಂ. ೪೧, ಪುಟ ೭೧.

೧೬೦. ಚಿದಾನಂದ ಮೂರ್ತಿ ಎಂ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೨೦೦೮, ಬೆಂಗಳೂರು, ಪುಟ. ೨೩೦.

೧೬೧. ಅದೇ, ಪುಟ. ೨೩೮.

೧೬೨. ಶಾಂತಕುಮಾರಿ ಎಲ್.ಎಸ್-೧೯೮೬, 'ಅಗ್ರಹಾರಸ್ ಇನ್ ಏನ್ಷಂಟ್ ಕರ್ನಾಟಕ', ನ್ಯೂ ಇರ ಪಬ್ಲಿಕೇಷನ್, ಮದ್ರಾಸ್, ಪುಟ. ೨೫, ೨೬.

೧೬೩. ಎಸ್.ಐ.ಐ.ಸಂ.XX, ಪುಟ. ೩೫, ಕ್ರಿ.ಶ. ೧೦೫೩.

೧೬೪. ಧಾ.ಜಿ.ಶಾ.ಸೂ.ಶಾ.ಸಂ. ೨೦೦, ಪುಟ. ೬೫.

೧೬೫. ಕ.ಇ.ಸಂ. ೨, ೮, ತಿಳುವಳ್ಳಿ, ಕ್ರಿ.ಶ. ೧೦೭೨.

೧೬೬. ಧಾ.ಜಿ.ಶಾ.ಸೂ.,ಶಾ.ಸಂ. ೧೦೩, ಪುಟ. ೩೦.

೧೬೭. ಕ.ಇ.ಸಂ.ll, ಪುಟ. ೧೦೩.

೧೬೮. ಧಾ.ಜಿ.ಶಾ.ಸೂ., ಶಾ.ಸಂ. ೧೨೨, ಪುಟ. ೬೨.

೧೬೯. ಅದೇ, ಶಾ.ಸಂ. ೧೭೪, ಪುಟ. ೪೯.

೧೭೦. ಅದೇ, ಶಾ.ಸಂ. ೧೭೪, ಪುಟ. ೪೬.

೧೭೧. ಅದೇ, ಶಾ.ಸಂ. ೧೭೬, ಪುಟ. ೪೯.

೧೭೨. ಅದೇ, ಶಾ.ಸಂ. ೧೮೩, ೧೮೮, ಪುಟ. ೪೯.

೧೭೩. ಅದೇ, ಪುಟ ೪೯.

೧೭೪. ಕನ್ನಡ ವಿಷಯ ವಿಶ್ವಕೋಶ ೨, ೨೦೦೭(ಪರಿಷ್ಕೃತ), ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪುಟ. ೫೮೬.

೧೭೫. ಅದೇ, ಪುಟ-೫೮೬.

೧೭೬. ಶಾ.ಸಂ. ೨೮, ಪುಟ. ೫೯.

೧೭೭. ಅದೇ, ಆ.ಸಂ. ೨೫೩, ಪುಟ. ೭೯.

೧೭೮. ಅದೇ, ಶಾ.ಸಂ. ೨೩, ೨೫, ಪುಟ. ೨೮.

೧೭೯. ಅದೇ, ಪುಟ–೨೮.

೧೮೦. ಎ.ಆರ್.ಐ.ಇ. ೧೯೪೪–೪೫, ಎಫ್. ೫೬, ಕ್ರಿ.ಶ. ೧೧೧೪.

೧೮೧. ಕ.ಇ.ಸಂ.IV, ಪುಟ. ೩, ಕ್ರಿ.ಶ. ೧೧೧೪.

೧೮೨. ಧಾ.ಜಿ.ಶಾ.ಸೂ., ಶಾ.ಸಂ. ೪, ಪುಟ. ೭೦.

೧೮೩. ಅದೇ, ಶಾ.ಸಂ. ೧೫೬, ಪುಟ. ೩೯, ೧೯೯೫.

೧೮೪. ಭೋಜರಾಜ ಪಾಟೀಲ, ೧೯೯೫, ನಾಗರಖಂಡ – ೭೦ ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ, ಆನಂದಪುರ, ಪುಟ. ೨೩೭–೩೮.

೧೮೫. ಅದೇ, ಪುಟ–೨೩೭–೩೮.

## ಅಧ್ಯಾಯ – ೭

# ದೇವಾಲಯಗಳು ಮತ್ತು ಶಿಲ್ಪಗಳು

- ಶೈವ ದೇವಾಲಯಗಳು
- ವೈಷ್ಣವ ದೇವಾಲಯಗಳು
- ಜೈನ ಬಸದಿಗಳು
- ಶಾಕ್ತ ದೇವಾಲಯಗಳು
- ಶಿಲ್ಪಗಳು

# ದೇವಾಲಯಗಳು ಮತ್ತು ಶಿಲ್ಪಗಳು

ಸಮಾಜದ ಅಭಿವೃದ್ಧಿಯ ಹಾಗೂ ನಂಬಿಕೆಯ ಸಂಕೇತವಾಗಿ ದೇವಾಲಯಗಳು ಪ್ರಮುಖ ಪಾತ್ರವಹಿಸುತ್ತವೆ. ಪ್ರಾಚೀನ ಕಾಲದಿಂದಲೂ ದೇವಾಲಯಗಳು ನಮ್ಮ ಸಂಸ್ಕೃತಿಯ ಅವಿಭಾಜ್ಯ ಅಂಗ ಎನಿಸಿವೆ. ದೇವಾಲಯಗಳು ಸಾರ್ವಜನಿಕರ ಬದುಕಿನಲ್ಲಿ ಮಹತ್ವದ ಪಾತ್ರವಹಿಸಿದ ವಿದ್ಯಾಕೇಂದ್ರಗಳಾನ್ನಾಗಿ, ಅನ್ನಸಂತರ್ಪಣಗಳಾಗಿ ಧಾರ್ಮಿಕ ಸಂಸ್ಥೆಗಳಾಗಿ, ಸಂಗೀತ, ನೃತ್ಯ ಕಲೆಗಳ ಬೆಳವಣಿಗೆಗೆ ಆಸರೆಯಾಗಿ ಸಾರ್ವಜನಿಕ ಬದುಕಿನೊಂದಿಗೆ ಅನುಕೂಲಕ್ಕಾಗಿ, ಪ್ರಾಚೀನ ಕಾಲದಲ್ಲಿ ದೇವಾಲಯಗಳನ್ನು ನಿರ್ಮಿಸುವುದು ಮತ್ತು ಅದರ ಪ್ರತಿನಿತ್ಯವೂ, ಪೂಜೆ, ಪುನಸ್ಕಾರಗಳು ನೆಡೆಸಿಕೊಂಡು ಹೋಗಲು ದಾನದತ್ತಿಗಳನ್ನು ನೀಡುವುದು ಇವೆಲ್ಲವೂ ಅಂದಿನ ಸಮಾಜದ ಭಾಗಗಳಾಗಿದ್ದವು ಪ್ರಾಚೀನ ನಂಬಿಕೆಗಳಂತೆ "ಕೆರೆಯಂ ಕಟ್ಟಿಸು, ಬಾವಿಯಂ ತೋಡಿಸು ದೇವಗಾರಂ ಮಾಡಿಸು" ಎಂಬ ಉಲ್ಲೇಖವಿದೆ.

ದೇವಾಲಯ ನಿರ್ಮಾಣವು ಅಂದಿನ ಮೋಕ್ಷಸಾಧನೆಯ ದಾರಿಗಳಂತಾಯಿತು. ಹೀಗಾಗಿ ದೇವಾಲಯದ ನಿರ್ಮಾಣ ಕಾರ್ಯ ಶಾಸನಗಳಲ್ಲಿ ಉಲ್ಲೇಖವಾದಂತೆ, ರಾಜ, ರಾಣಿ, ಮಂತ್ರಿ, ಮಾಂಡಲೀಕ, ಸಾಮಂತ ಅಧಿಕಾರಿಗಳು ಮತ್ತು ಪ್ರಜೆಗಳ ಸಹಸಂಬಂಧಿತವಾದ ಸಾಮಾಜಿಕ ಕಾರ್ಯಗಳಾಗಿದನೆಂದು ಹೇಳಬಹುದು ಪ್ರಾಚೀನ ದೇವಾಲಯದ ನಿರ್ಮಾಣ ಸಾಮಾಜಿಕ ಕಾರ್ಯಗಳಲ್ಲಿ ಒಂದಾಗಿತ್ತು. ಬೌದ್ಧ – ಜೈನ ಧರ್ಮದ ಪ್ರಚಾರ ಕಾರ್ಯಗಳಲ್ಲಿ ರಚನೆಗೊಂಡಂತಹ ಸ್ತೂಪಗಳಾಗಿ ಸಂಗ್ರಹಾಲಯಗಳಾಗಲಿ, ಇವೆಲ್ಲವು ಒಂದು ರೀತಿಯಲ್ಲಿ ದೇವಾಲಯಗಳೇ ಆದರೆ ಪ್ರಾಚೀನ ಕಾಲದ ವೇದೋಪನಿಷತ್ತುಗಳ ಹಿನ್ನೆಲೆಯಲ್ಲಿ ಆಗಿನ ಕಾಲದ ನೈಸರ್ಗಿಕ ಶಕ್ತಿಗಳನ್ನು ಪೂಜಿಸುತ್ತ ಬಂದ ಆರ್ಯರು ದೇವಾಲಯಗಳನ್ನಾಗಲಿ ಮಠಗಳನ್ನಾಗಲಿ ನಿರ್ಮಿಸಲಿಲ್ಲ. ಕ್ರಮೇಣ ಪ್ರಕೃತಿಯ ದೇವತೆಗಳಿಗೆ ಮೂರ್ತಿ ಸ್ವರೂಪ ನೀತಿ ಅವುಗಳ ರಕ್ಷಣೆಗೆ ಕಟ್ಟಿದ ಕಟ್ಟಡಗಳು ಕಾಲ ನಂತರದಲ್ಲಿ ದೇವಾಲಯಗಳಾಗಿ ರೂಪುಗೊಂಡವು ಇದಕ್ಕೆ ಬ್ರಹ್ಮ, ವಿಷ್ಣು, ಮಹೇಶ್ವರ ಎನ್ನುವಂತಹ ಆಕಾರವನ್ನು ನೀಡಿ ಅವರ ವಿವಿಧ ಅವತಾರವನ್ನು ನೀಡಿ ಅವುಗಳ ರಕ್ಷಣೆಗೆ ದೇವಾಲಯಗಳನ್ನು ಪ್ರಾಚೀನ ಕಾಲದಿಂದಲೂ ಮಾನವ ನೆಲೆಬೀಡಾಗಿ ಹಾವೇರಿ ಜಿಲ್ಲಾ ಪ್ರದೇಶವು ಕರ್ನಾಟಕದ ವಿವಿಧ ರಾಜಮನೆತನಗಳ ಆಳ್ವಿಕೆಯಡಿಯಲ್ಲಿ ಬೆಳವಣಿಗೆ ಹೊಂದಿ ಕರ್ನಾಟಕದ ಸಂಸ್ಕೃತಿಯನ್ನು ಸಮೃದ್ಧಿಗೊಳಿಸುವಲ್ಲಿ ಪ್ರಮುಖ ಪಾತ್ರವಹಿಸಿವೆ. ಈ ಜಿಲ್ಲೆಯ ದೇವಾಲಯಗಳನ್ನು ಗಮನಿಸಿದಾಗ ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಿಚಾಲುಕ್ಯ, ಹೊಯ್ಸಳ, ಕಲಚೂರಿಗಳು, ಹೊಯ್ಸಳ, ವಿಜಯನಗರ, ಗುತ್ತಲದಗುತ್ತರು, ಪೂರ್ವಕದಂಬ ಇವರ ಕಾಲದ ದೇವಾಲಯದ

ನಿರ್ಮಾಣವು ಶೈವ, ವೈಷ್ಣವ, ಜೈನಮತಗಳಿಗೆ ಸಂಬಂಧಿಸಿದ ದೇವಾಲಯಗಳು ನಿರ್ಮಾಣವಾಗಿ ಸಮಾಜದ ಏಳಿಗೆ ಅದರಲ್ಲಿ ಧಾರ್ಮಿಕತೆಯ ಎತ್ತಿ ಹಿಡಿಯುವಲ್ಲಿ ಸಹಕಾರಿಯಾಗಿದೆ.

ಪ್ರಾಚೀನ ದೇವಾಲಯಗಳನ್ನು ಅಧ್ಯಯನ ಮಾಡುವಾಗ ದ್ರಾವಿಡ, ನಾಗರಶೈಲಿಯಲ್ಲಿ ದೇವಾಲಯಗಳು ಈ ಭಾಗದಲ್ಲಿ ನಿರ್ಮಾಣವಾಗಿರುವುದು, ದೇವಾಲಯಗಳಲ್ಲಿ ದ್ರಾವಿಡ ವಿಮಾನದ ಶೈಲಿ ವಿನ್ಯಾಸಗಳು, ಕೂಟ, ಪಂಜರ, ಕೋಷ್ಠಕ ನಂತರ ಜೀರ್ಣೋದ ಕಾರ್ಯಗಳು ಹೊಸದಾದ ರಚನೆಗಳಾಗಿದೆ. ಹಾವೇರಿ ಜಿಲ್ಲೆಯಲ್ಲಿ ಹಲವಾರು ದೇವಾಲಯಗಳಿವೆ. ಶೈವ, ವೈಷ್ಣವ, ಜೈನ, ಶಾಕ್ತ ಇದ್ದುದೂ ಶಾನಸಗಳಿಂದ ತಿಳಿದುಬರುತ್ತದೆ. ಇವೆಲ್ಲವೂ ಹಾವೇರಿ ಜಿಲ್ಲೆಯ ಗತವೈಭವಕ್ಕೆ ಸಾಕ್ಷಿಯಾಗಿವೆ. ಹಾವೇರಿಯಲ್ಲಿ ಹಿಂದೆ ಇದ್ದ ಮತ್ತು ಈಗ ಇರುವ ದೇವಾಲಯಗಳ ವಿವರವನ್ನು ಇನ್ನೂ ಮುಂದೆ ನೋಡಬಹುದು.

**ಶೈವ ದೇವಾಲಯಗಳು:**

ಭಾರತದ ಪ್ರಾಚೀನ ಧರ್ಮಗಳಲ್ಲಿ ಶೈವಧರ್ಮವು ಒಂದಾಗಿದೆ. ಈ ಧರ್ಮವು ಭಾರತದ ಅವಿಭಾಜ್ಯ ಅಂಗವಾಗಿರುವ ಕರ್ನಾಟಕದ ಇತರ ಜಿಲ್ಲೆಗಳಂತೆ ಹಾವೇರಿ ಜಿಲ್ಲೆಯಾದ್ಯಂತ ವ್ಯಾಪಿಸಿದೆ ಆದರೆ ಇದರ ಮೂಲ ಯಾವುದೆಂದು ಸ್ಪಷ್ಟವಾಗಿ ಹೇಳುವುದಕ್ಕೆ ಸಾಧ್ಯವಾಗುತ್ತಿಲ್ಲ ಇದು ವೈದಿಕ ಪೂರ್ವಕಾಲದ್ದೆಂದೂ, ಆರ್ಯಪರವೆಂದು ಹಲವು ವಿದ್ವಾಂಸರು ಪ್ರತಿಪಾದಿಸುತ್ತಾರೆ. ಆದರೆ ಇದಕ್ಕೆ ನಿರ್ದಿಷ್ಟ ಆಧಾರಗಳಿಲ್ಲ[೧].

ಪುರಾತನ ಕಾಲದ ನಾಗರೀಕತೆಗಳಿಂದ ಹರಪ್ಪ ಮತ್ತು ಮಹೆಂಜೋದಾರೊಗಳಲ್ಲಿ ಪಶುಪತಿಯ ಚಿತ್ರವನ್ನೊಳಗೊಂಡ ಮುದ್ರಿಕೆಗಳನ್ನು ಕಾಣುತ್ತೇವೆ. ಇದರಲ್ಲಿ ಯೋಗಮುದ್ರೆಯಲ್ಲಿ ಕುಳಿತ ವ್ಯಕ್ತಿಯ ಸುತ್ತಮುತ್ತ ಮತ್ತು ಪೀಠದ ಕೆಳಗೆ ಆನೆ, ಹುಲಿ, ಖಡ್ಗ, ಮೃಗ, ಎಮ್ಮೆ ಮತ್ತು ಜಿಂಕೆಗಳ ಚಿತ್ರಗಳನ್ನು ಕೆತ್ತಲಾಗಿದ್ದು ಈ ವಿಗ್ರಹವು ಪಶುಪತಿಯೂ ಆದ ಶಿವನ ಪ್ರಾಚೀನ ರೂಪವೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ[೨]. ಹೀಗಿರುವಾಗ ಶೈವ ಸಂಸ್ಕೃತಿಯು ಭಾರತದಲ್ಲಿ ಸಿಂಧೂಬಯಲಿನ ನಾಗರೀಕತೆಯಿಂದಲೂ ಇತ್ತೆಂದು ಹೇಳಬಹುದು.

ಶೈವ ಸಂಪ್ರದಾಯಕ್ಕೆ ಸೇರಿದವರು ಶಿವನನ್ನು ಲಿಂಗದ ರೂಪದಲ್ಲಿರುವ ಶಿಲ್ಪಕ್ಕೆ ಪೂಜೆಗಳನ್ನು ಮಾಡುವ ಸಂಪ್ರದಾಯವನ್ನು ಪ್ರಾರಂಭಿಸಿದರು. ಲಿಂಗ ಪೂಜೆಯ ಆರಂಭ ಇತ್ತೀಚಿನ ಕಾಲವೆನ್ನಬಹುದಾದರೂ ಇದರ ವ್ಯಾಪ್ತಿ ಬಹುವಿಸ್ತಾರವಾಗಿದೆ[೩].

ಈ ದೃಷ್ಟಿಯಿಂದ ಹಾವೇರಿ ಜಿಲ್ಲೆಯಲ್ಲಿ ಕಂಡುಬರುವ ದೇವಾಲಯಗಳನ್ನು ಅವುಗಳ ಅಂಶಗಳಾದ ಗರ್ಭಗೃಹ, ಸುಖವಾಸಿ, ಅಂತರಾಳ, ನವರಂಗ, ಮುಖಮಂಟಪ, ಅದಿಷ್ಠಾನ, ಭಿತ್ತಿ ಶಿಖರ, ಪ್ರಕಾರ ಇವುಗಳ ಮುಖಲೇಖನ ಸಂಕ್ಷಿಪ್ತವಾಗಿ ತಿಳಿಸಲಾಗಿದೆ. ಹಾವೇರಿ

ಜಿಲ್ಲೆಯಲ್ಲಿ ದೊರಕಿರುವ ಶಾಸನೂಕ್ತ ದೇವಾಲಯಗಳಲ್ಲಿ ಶೈವ ಸಂಪ್ರದಾಯಕ್ಕೆ ಸಂಬಂಧಿಸಿದವುಗಳೇ ಅಧಿಕವು. ಆದರೆ ಬಹಳಷ್ಟು ಶೈವ ದೇವಾಲಯಗಳು ಸಂಪೂರ್ಣವಾಗಿ ಭಗ್ನಗೊಂಡಿದ್ದು ಕೇವಲ ಆದಿಷ್ಠಾನದ ಭಾಗಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿರುವ ಬಾಗಿಲವಾಡ, ಭಿತ್ತಿಭಾಗದ ಕೆಲ ಅವಶೇಷಗಳು ಸ್ತಂಭಗಳ ಕಾಂಡ ಭಾಗ, ಭಗ್ನಗೊಂಡು ಮುಖ್ಯ ಹಾಗೂ ಇನ್ನಿತರ ದೇವತಾ ಶಿಲ್ಪಗಳು ಮಾತ್ರ ಕಂಡುಬರುತ್ತವೆ. ಜಿಲ್ಲೆಯಲ್ಲಿ ಕಂಡುಬರುವ ಶಾಸನೋಕ್ತ ಶೈವ ದೇವಾಲಯಗಳು ವಿವರಣಾತ್ಮಕ ಅಧ್ಯಯನವನ್ನು ಈ ಮುಂದೆ ನಡೆಸಲು ಪ್ರಯತ್ನಿಸಲಾಗಿದೆ.

**ಸಂ.** – ೧

**ಹೆಸರು** – ಕಾಂತೇಶ ದೇವಾಲಯ

**ಗ್ರಾಮ** – ಕದರಮಂಡಲಗಿ

**ತಾಲೂಕು** – ಬ್ಯಾಡಗಿ

**ಕಾಲಮಾನ** – ಕ್ರಿ.ಶ. ಸುಮಾರು ೧೭ನೇ ಶತಮಾನ

ದೇವಾಲಯದಲ್ಲಿ ಮೂರು ಗರ್ಭಗೃಹಗಳು. ಒಂದು ಅಂತರಾಳ ಹಾಗೂ ಸಭಾಮಂಟಪಗಳಿವೆ. ಮುಖ್ಯಗರ್ಭಗೃಹ ಅಂತರಾಳವಿದ್ದು ಗರ್ಭಗುಡಿಯೊಳಗೆ ಸುಮಾರು ಆರು ಅಡಿ ಎತ್ತರದ ಆಂಜನೇಯ ಮೂತಿ ಶಿಲ್ಪವಿದೆ. ಇದನ್ನೇ ಜನರು ಕಾಂತೇಶ ಎಂದು ಕರೆಯುತ್ತಾರೆ. ದೇವಾಲಯದ ಹೊರಭಾಗದಲ್ಲಿ ಸತೀಕಲ್ಲು ಮತ್ತು ಧ್ವಜಸ್ತಂಭದಲ್ಲಿ ಒಂದು ಶಾಸನವಿದೆ.

ಆ ಶಾಸನ ಕ್ರಿ.ಶ. ೧೭೫೩ರಲ್ಲಿ ಸಂತೆಬೆನ್ನೂರಿನ ರಂಗಪ್ಪ ನಾಯಕನು ಹನುಮಂತ ದೇವರಿಗೆ ಕದರುವುಂಟಲಗೆ ಗ್ರಾಮವನ್ನು ದಾನಮಾಡಿರುವುದನ್ನು ಶಾಸನ ಉಲ್ಲೇಖಿಸುತ್ತದೆ[*].

**ಸಂ** – ೨

**ಹೆಸರು** – ಸಿದ್ಧೇಶ್ವರ ದೇವಾಲಯ

**ಗ್ರಾಮ** – ಬ್ಯಾಡಗಿ

**ತಾಲೂಕು** – ಬ್ಯಾಡಗಿ

**ಕಾಲಮಾನ** – ಕ್ರಿ.ಶ. ಸುಮಾರು ೧೧ – ೧೭ ನೇ ಶತಮಾನ

ದೇವಾಲಯದಲ್ಲಿ ಗರ್ಭಗೃಹ, ಅಂತರಾಳ ಮತ್ತು ನವರಂಗಗಳಿವೆ. ಗರ್ಭಗೃಹದ ಬಾಗಿಲುವಾಡವು ಸರಳವಾಗಿದೆ. ನವರಂಗದಲ್ಲಿ ನಾಲ್ಕು ಕಂಬಗಳಿದ್ದು ಅವುಗಳು ಭುವನೇಶ್ವರಿಯನ್ನು ಹೊತ್ತಿವೆ. ದೇವಾಲಯಕ್ಕೆ ಉತ್ತರದಿಂದ ಈಗ ಪ್ರವೇಶವಿದೆ. ಗರ್ಭಗೃಹದಲ್ಲಿ ಲಿಂಗವಿದೆ. ನವರಂಗದಲ್ಲಿ ನಂದಿಯ ಶಿಲ್ಪವಿದೆ. ಅರ್ಧಮಂಟಪದ ಭಾಗದಲ್ಲಿ ನಂದಿ

ಶಾಸನಕಲ್ಲು ಶಾಸನ ರಹಿತ ವೀರಗಲ್ಲು ಮತ್ತು ನಾಗಶಿಲ್ಪಗಳಿವೆ. ಕ್ರಿ.ಶ. ೯೦೨ರ ಬ್ಯಾಡಗಿ ಶಾಸನವು ರಾಷ್ಟ್ರಕೂಟ ಅರಸ ಆ ಕಾಲವರ್ಷನು ಲಕೋಟಿ ಬನವಾಸಿ ೧೨೦೦೦ ಆಳುವಾಗ ಪಿಟ್ಟಮ್ಮನು ಸುಂಕದಾನ ಮಾಡಿದ ಮಾಹಿತಿಯನ್ನು ದಾಖಲಿಸಿದೆ. ಮತ್ತೊಂದು ಕ್ರಿ.ಶ. ೧೧೯೨ರ ಶಾಸನವು ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯ ಆಳ್ವಿಕೆ ಕಾಲದಲ್ಲಿ ಮಹಾಮಂಡಳೇಶ್ವರ ವೀರಗಾಂಗೇಯರಾಯ ಬನವಾಸಿ – ೧೨೦೦೦ ಆಳುವಾಗ ಬ್ಯಾಡಗಿಯ ಮಲ್ಲಿಕಾರ್ಜುನ ದೇವರಿಗೆ ಬಿಟ್ಟ ದತ್ತಿಯನ್ನು ತಿಳಿಸುತ್ತದೆ[೫].

| | | |
|---|---|---|
| **ಸಂ** | – | ೩ |
| **ಹೆಸರು** | – | ಕಲ್ಮೇಶ್ವರ ದೇವಾಲಯ |
| **ಗ್ರಾಮ** | – | ಮಣಸಗಿ |
| **ತಾಲೂಕು** | – | ಬ್ಯಾಡಗಿ |
| **ಕಾಲಮಾನ** | – | ಕ್ರಿ.ಶ. ಸುಮಾರು ೧೨ – ೧೩ ನೇ ಶತಮಾನ |

ದೇವಾಲಯದಲ್ಲಿ ಗರ್ಭಗೃಹ. ಅಂತರಾಳ ಮತ್ತು ನವರಂಗಗಳಿವೆ. ಗರ್ಭಗೃಹದ ಬಾಗಿಲುವಾಡ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಅಂತರಾಳದ ಬಾಗಿಲ ಇಕ್ಕೆಲಗಳಲ್ಲಿ ಜಾಲಂಧ್ರಗಳಿವೆ. ನವರಂಗದ ನಾಲ್ಕು ಕಂಬಗಳು ಭುವನೇಶ್ವರಿಯನ್ನು ಹೊತ್ತಿವೆ. ನವರಂಗದಲ್ಲಿ ಗರ್ಭಗೃಹದಂತೆ ಇರುವ ಒಂದು ಕೋಣೆಯನ್ನು ಅದಕ್ಕೆ ಅಂತರಾಳವಿಲ್ಲ. ದೇವಾಲಯಕ್ಕೆ ಎರಡು ಗರ್ಭಗೃಹಗಳಿರುವ ಕಾರಣದಿಂದ ದೇವಾಲಯವನ್ನು ದ್ವಿಕೂಟವೆಂದು ಕರೆಯಬಹುದು. ಕ್ರಿ.ಶ. ೯೩೫ರ ಶಾಸನದಲ್ಲಿ ಅಮ್ಮಣನು ಯುದ್ಧದಲ್ಲಿ ಮರಣ ಹೊಂದಿದನೆಂದು ದಾಖಲಿಸಿದೆ ಇನ್ನೊಂದು ಶಾಸನದಲ್ಲಿ ಲೋಕಟೆ ಬನವಾಸಿಯನ್ನಾಳುವಾಗ ಬಸವೂರ ನಾಳ್ಗಾವುಂಡ ನೆಲ್ಲಿಗನು ಮಾಸಳಿಗೆಯ ದೇವಾಲಯಕ್ಕೆ ದಾನನೀಡಿದನೆಂದು ಉಲ್ಲೇಖಿಸುತ್ತದೆ. ಗರ್ಭಗೃಹದಲ್ಲಿ ಲಿಂಗವಿದೆ. ನವರಂಗದಲ್ಲಿ ನಾರಾಯಣನ ಮತ್ತು ನಾಗಶಿಲ್ಪಗಳು ಇವೆ. ಗುಡಿಯ ಮುಂಭಾಗದದಲ್ಲಿ ನಂದಿಯ ವಿಗ್ರಹವಿಡಲಾಗಿದೆ. ದೇವಾಳಯಕ್ಕೆ ದಕ್ಷಿಣ ಮತ್ತು ಪೂರ್ವದಿಕ್ಕಿನಿಂದ ಪ್ರವೇಶವಿದೆ[೬].

| | | |
|---|---|---|
| **ಸಂ** | – | ೪ |
| **ಹೆಸರು** | – | ಭುಜಲಿಂಗೇಶ್ವರ ದೇವಾಲಯ |
| **ಗ್ರಾಮ** | – | ಮೋಟೆಬೆನ್ನೂರ |
| **ತಾಲೂಕು** | – | ಬ್ಯಾಡಗಿ |
| **ಕಾಲಮಾನ** | – | ಕ್ರಿ.ಶ. ಸುಮಾರು ೧೧ – ೧೭ ನೇ ಶತಮಾನ |

ಗರ್ಭಗೃಹ ಅಂತರಾಳ ಮತ್ತು ನವರಂಗಗಳಿಂದ ಕೂಡಿರುವ ಈ ದೇವಾಲಯದ ಶಿಖರ ಭಾಗವು ನಶಿಸಿದೆ. ಆದರೆ ಕೆಲವು ತಲಗಳು ಕಂಡುಬರುತ್ತವೆ. ಅಧಿಷ್ಠಾನ ಭಾಗವು ಸ್ಪಷ್ಟವಾಗಿ

ಕಂಡುಬರುತ್ತದೆ. ಗರ್ಭಗೃಹದ ಬಾಗಿಲವಾಡವು ಸರಳವಾಗಿದ್ದು ಅದರ ಮುಂದಿರುವ ಅಂತರಾಳದ ಬಾಗಿಲ ಎರಡೂ ಬದಿಗೆ ಜಾಲಂಧ್ರಗಳಿವೆ. ಗರ್ಭಗೃಹದಲ್ಲಿ ಶಿವಲಿಂಗ. ನವರಂಗದಲ್ಲಿ ನಂದಿಯ ಶಿಲ್ಪ ಹಾಗೂ ದೇವಕೋಷ್ಠಗಳಲ್ಲಿ ಸರಸ್ವತಿ ಮತ್ತು ಕಾರ್ತಿಕೇಯನ ಮೂರ್ತಿಶಿಲ್ಪಗಳಿವೆ. ಕ್ರಿ.ಶ. ೧೦೫೨ರ ಶಾಸನದಲ್ಲಿ ಕಲ್ಯಾಣಚಾಲುಕ್ಯ ಅರಸ ಒಂದನೆಯ ಸೋಮೇಶ್ವರನು ದೇವಾಲಯಕ್ಕೆ ಭೂಮಿದಾನ ಮಾಡಿದ ಮಾಹಿತಿಯನ್ನು ನೀಡುತ್ತದೆ[೭].

**ಸಂ** – ೫
**ಹೆಸರು** – ಕಲ್ಲೇಶ್ವರ ದೇವಾಲಯ
**ಗ್ರಾಮ** – ಗುಡ್ಡದ ಆನವೇರಿ
**ತಾಲೂಕು** – ರಾಣೇಬೆನ್ನೂರ
**ಕಾಲಮಾನ** – ಕ್ರಿ.ಶ. ಸುಮಾರು ೧೭ ನೇ ಶತಮಾನ

ರಾಣೇಬೆನ್ನೂರಿನಿಂದ ಉತ್ತರಕ್ಕೆ ಐದು ಕಿ.ಮೀ. ದೂರದಲ್ಲಿರುವ ಈ ದೇವಾಲಯವು ಕಾಲಕಾಲಕ್ಕೆ ದುರಸ್ತಿಗೊಂಡಿದೆ. ಮುಖ್ಯ ಗರ್ಭಗೃಹದ ಅದಿಷ್ಠಾನ ಭಾಗ ೧೧/೨ ಅಡಿ ಎತ್ತರವಾಗಿದೆ. ಜಗತಿ, ಪದ್ಮ ಊರ್ಧ್ವಕಂಪ ಭಾಗಗಳನ್ನು ಮಂತ್ರ ಹೊಂದಿದೆ. ಅಕ್ಕಪಕ್ಕದ ಗೃಹಗಳ ಅದಿಷ್ಠಾನವು ಕೇವಲ ಜಗತಿಭಾಗವನ್ನು ಹೊಂದಿ ಸರಳಮಾದರಿಯಲ್ಲಿವೆ. ಮುಖ್ಯಗರ್ಭಗೃಹ ಭಿತ್ತಿಯನ್ನು ೧×೪ ಅಡಿ ಉದ್ದ ಅಗಲದ ಚಪ್ಪಡಿ ಕಲ್ಲುಗಳನ್ನು ಬಳಸಿ ಮೂರು ಅಡಿ ದಪ್ಪವಾಗಿ ರಚಿಸಲಾಗಿದೆ. ದೇವಾಲಯದ ಮೇಲ್ಕಟ್ಟಡದಲ್ಲಿ ಮುಖ್ಯಗರ್ಭಗೃಹವು ಮಂತ್ರ ಕದಂಬನಾಗರ ಶೈಲಿಯ ಶಿಖರವನ್ನು ಹೊಂದಿದೆ. ಇದು ತ್ರಿಕೂಟ ದೇವಾಲಯ. ಮಧ್ಯದ ಗರ್ಭಗೃಹಕ್ಕೆ ಅಂತರಾಳವುಂಟು. ಉಳಿದೆರಡು ಗರ್ಭಗೃಹಗಳು ನವರಂಗಕ್ಕೆ ಹೊಂದಿಕೊಂಡಿವೆ. ಕಲ್ಯಾಣಚಾಲುಕ್ಯರ ಕಾಲದ ಈ ದೇವಾಲಯ ಪೂರ್ಣಪ್ರಮಾಣದಲ್ಲಿ ಜೀರ್ಣೋದ್ಧಾರಗೊಂಡಿದೆ. ಬಳಗಿರುವ ಶಾಸನ (ಕ್ರಿ.ಶ. ೧೧೮೩) ಮಲ್ಲಿಕಾರ್ಜುನ ಮತ್ತು ಯೋಗೇಶ್ವರ ದೇವಾಲಯಗಳಿಗೆ ನೀಡಿದ ಸುಂಕವನ್ನು ತಿಳಿಸುವುದು ಹೊರಗಿರುವ ಶಾಸನದಲ್ಲಿ (ಕ್ರಿ.ಶ. ೧೧೮೩) ಮಲ್ಲಿಕಾರ್ಜುನ ದೇವಾಲಯಕ್ಕೆ ಭೂದಾನದ ಉಲ್ಲೇಖವಿದೆ. ಇದರಿಂದ ದೇವಾಲಯದ ಹಳೆಯ ಹೆಸರು ಮಲ್ಲಿಕಾರ್ಜುನನೆಂದು ಸ್ಪಷ್ಟವಾಗುವುದು. ಇದರಿಂದ ಈ ಕಲ್ಲೇಶ್ವರ ದೇವಾಲಯವು ಶಾಸನೋಕ್ತ ಮಲ್ಲಿಕಾರ್ಜುನ ದೇವಾಲಯವಾಗಿದೆ[೮].

**ಸಂ** – ೬
**ಹೆಸರು** – ಮುಕ್ತೇಶ್ವರ ದೇವಾಲಯ
**ಗ್ರಾಮ** – ಚೌಡದಾನಪುರ
**ತಾಲೂಕು** – ರಾಣೇಬೆನ್ನೂರು
**ಕಾಲಮಾನ** – ಕ್ರಿ.ಶ. ಸುಮಾರು ೧೨ ನೇ ಶತಮಾನ

ಕಲ್ಯಾಣ ಚಾಲುಕ್ಯರ ಶೈಲಿಯಲ್ಲಿರುವ ಮುಕ್ತೇಶ್ವರ ದೇವಾಲಯವು ಏಕಕೂಟಾಚಲ ಕಟ್ಟಡವಾಗಿದೆ. ತುಂಗಭದ್ರಾನದಿ ದಡದ ಮೇಲೆ ಎತ್ತರದ ಪ್ರದೇಶದಲ್ಲಿ ನಿರ್ಮಿಸಲಾಗಿರುವ ಮುಕ್ತೇಶ್ವರ ದೇವಾಲಯವು ಗರ್ಭಗೃಹ, ಅಂತರಾಳ, ನವರಂಗ ಪ್ರವೇಶ ಮಂಟಪ ಮತ್ತು ಮುಖಮಂಟಪಗಳಿವೆ. ಅಂತರಾಳ ದ್ವಾರದ ಜಾಲಂಧ್ರಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿವೆ. ನವರಂಗದ ಕಂಬಗಳು ರಚನೆಯಲ್ಲಿ ಸರಳ. ಭುವನೇಶ್ವರಿಯಲ್ಲಿ ಕಮಲದ ಅಲಂಕರಣವಿದೆ. ಪೂರ್ವ ಮತ್ತು ದಕ್ಷಿಣ ಭಾಗಗಳಲ್ಲಿ ಪ್ರವೇಶ ಮಂಟಪಗಳಿದ್ದು ಕಕ್ಷಾಸನದಿಂದ ಕೂಡಿವೆ. ಮೇಲೆ ಇಳಿಬಿದ್ದ ಸೂರಿನ ರಚನೆಯುಂಟು. ದೇವಾಲಯವು ಎತ್ತರದ ಅದಿಷ್ಠಾನವನ್ನು ಹೊಂದಿದ್ದು, ಅದರ ಪ್ರತಿಯೊಂದು ಭಾಗದ ಮುಖದಲ್ಲಿ ಲತಾಬಳ್ಳಿ ಹಂಸ ಮತ್ತಿತರ ರಚನೆಗಳ ಸೂಕ್ಷ್ಮ ಕೆತ್ತನೆಯ ಅಲಂಕರಣವನ್ನು ಕಾಣಬಹುದು. ದೇವಾಲಯದಲ್ಲಿ ಲಿಂಗ ನಂದಿ, ಭಗ್ನಸೂರ್ಯ, ನಾಗಿಣಿ, ಗಣೇಶ, ಸಪ್ತಮಾತೃಕೆಯರ ಫಲಕ ಮುಂತಾದ ಶಿಲ್ಪಗಳಿವೆ. ಕ್ರಿ.ಶ. ೧೧೧೫–೧೧೨೦ರ ಚೌಡದಾನಪುರ ಶಾಸನದಲ್ಲಿ ಚಟಾಚೋಳ ವಂಶದ (ಗುತ್ತರಸರ) ಗುಪ್ತರ ಮಂಡಲೀಕನಾಗಿದ್ದ ಮಲ್ಲುಗಿ ಈ ದೇವಾಲಯವನ್ನು ನಿರ್ಮಿಸಿದ ಎಂದು ಇಲ್ಲಿನ ಶಿಲಾಲೇಖನಗಳಲ್ಲಿ ದಾಖಲಿಸಿದೆ ಇದರಿಂದ ಮುಕ್ತೇಶ್ವರ ದೇವಾಲಯವು ಶಾಸನೋಕ್ತ ದೇವಾಲಯವಾಗಿದೆ.

| | | |
|---|---|---|
| **ಸಂ** | – | ೭ |
| **ಹೆಸರು** | – | ಕಲ್ಲೇಶ್ವರ ದೇವಾಲಯ |
| **ಗ್ರಾಮ** | – | ಮಾಕನೂರು |
| **ತಾಲೂಕು** | – | ರಾಣೇಬೆನ್ನೂರು |
| **ಕಾಲಮಾನ** | – | ಕ್ರಿ.ಶ. ಸುಮಾರು ೧೧ – ೧೨ ನೇ ಶತಮಾನ |

ದೇವಾಲಯವು ಪೂರ್ಣ ಭಗ್ನಗೊಂಡಿರುವ ಗರ್ಭಗೃಹ ಮತ್ತು ಅಂತರಾಳಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಲಿಂಗವುಂಟು. ಸಮೀಪದ ಮಾರ್ಕಂಡೇಶ್ವರ ಗುಡಿಯ ಹತ್ತಿರವಿರುವ ಶಾಸನಗಳು ಮಾಕನೂರಿನ ಬಪ್ಪೇಶ್ವರ ಅಥವಾ ಬೊಪ್ಪೇಶ್ವರ ದೇವರನ್ನು ಉಲ್ಲೇಖಿಸಿ, ನೀಡಿದ ಭೂದಾನ ಮತ್ತು ಸುಂಕದಾನಗಳನ್ನು ತಿಳಿಸುತ್ತವೆ. ಮೇಲೆ ಹೇಳಿದ ದೇವಾಲಯ ಶಾಸನೂಕ್ತ ಬಪ್ಪೇಶ್ವರ ದೇವಾಲಯವಿರಬಹುದು[೮].

| | | |
|---|---|---|
| **ಸಂ** | – | ೮ |
| **ಹೆಸರು** | – | ಶ್ರೀ ನಗರೇಶ್ವರ ದೇವಾಲಯ |
| **ಗ್ರಾಮ** | – | ಬಂಕಾಪುರ |
| **ತಾಲೂಕು** | – | ಶಿಗ್ಗಾವಿ |
| **ಕಾಲಮಾನ** | – | ಕ್ರಿ.ಶ. ಸುಮಾರು ೧೧ – ೧೭ ನೇ ಶತಮಾನ |

ಶಿಗ್ಗಾವಿ ತಾಲೂಕಿನ ಬಂಕಾಪುರ ಗ್ರಾಮದಲ್ಲಿ ನಗರೇಶ್ವರ ದೇವಾಲಯವಿದೆ. ಪಾಳುಬಿದ್ದ ೧೨೯ ಎಕರೆ ವ್ಯಾಪ್ತಿಯ ಕೋಟೆಯಲ್ಲಿ ಚಾಲುಕ್ಯ ಮಾದರಿಯ ನಗರೇಶ್ವರ ದೇವಾಲಯ ಬಹಳ ಸುಂದರವಾಗಿದೆ. ಹೊಯ್ಸಳ ಮಹಾರಾಜನಾದ ವಿಷ್ಣುವರ್ಧನ ಕರ್ಮಭೂಮಿ. ರಾಷ್ಟ್ರಕೂಟ ಚಕ್ರವರ್ತಿ ನೃಪತುಂಗನ ಗಣ್ಯಸೇನಾನಿ ಮಾಂಡಲೀಕನೊರ್ವನ ಹೆಸರಿನಿಂದ ನಿರೂಪಿಸಲ್ಪಟ್ಟು ಚಾಲುಕ್ಯ ಸಾಮಂತ ಕದಂಬ ಅರಿಕೇಸರಿಯ ಆಡಳಿತಕ್ಕೆ ಒಳಪಟ್ಟಿದ್ದ ಪ್ರತೀತಿಯನ್ನು ಬಂಕಾಪುರ ತನ್ನ ಗತ ಇತಿಹಾಸದಲ್ಲಿ ಕಾಣಬಹುದಾಗಿದೆ. ನಗರೇಶ್ವರ ದೇವಾಲಯದ ಪ್ರಮುಖ ಆಕರ್ಷಣೆ ಎಂದರೆ ಬೃಹದಾಕಾರದ ಎತ್ತರದ ೬೦ ಕಂಬಗಳ ಈ ದೇವಾಲಯದ ಮೇಲೆ ಸೂರ್ಯ, ಬ್ರಹ್ಮ, ವಿಷ್ಣು, ಶಿವ, ರಾಂ, ಭೈರವ, ಗಣೇಶ, ಬೇತಾಳ, ಸಪ್ತಮಾತೃಕೆಯರ ಚಿತ್ರವಿರುವುದನ್ನು ಕಾಣಬಹುದು.

ಕ್ರಿ.ಶ. ೧೧೭೯ರ ಬಂಕಾಪುರ ಶಾಸನದಲ್ಲಿ ಅರನಿಂದ ಬಂಕಾಪುರ ನಗರೇಶ್ವರ ದೇವಾಲಯಕ್ಕೆ ಸ್ಥಳವೃತ್ತಿಯೆಂದು ಗಾವುಂಡವಳ್ಳಿ ಗ್ರಾಮದಾನ ಮತ್ತು ಭೂದಾನ ಮಾಡಿದ ಉಲ್ಲೇಖವಿದೆ.

| | | |
|---|---|---|
| **ಸಂ** | – | ೯ |
| **ಹೆಸರು** | – | ಮೂರುದೇವರ ಗಲುಡಿ |
| **ಗ್ರಾಮ** | – | ಗುಂಡೂರು |
| **ತಾಲೂಕು** | – | ಸವಣೂರು |
| **ಕಾಲಮಾನ** | – | ಕ್ರಿ.ಶ. ಸುಮಾರು ೧೧ ನೇ ಶತಮಾನ |

ಸವಣೂರಿನಿಂದ ದಕ್ಷಿಣಕ್ಕೆ ಮೂರು ಕಿ.ಮೀ. ದೂರದಲ್ಲಿರುವ ಈ ದೇವಾಲಯವು ಕನಿಷ್ಠ ಸ್ಥಿತಿಯಲ್ಲಿದೆ. ಅದಿಷ್ಠಾನ ಭಾಗಗಳು ನೆಲದಲ್ಲಿ ಹೊತ್ತಿವೆ. ಭಿತ್ತಿಯು ಹಾಳಾಗಿದ್ದು ಮುಖಗರ್ಭಗೃಹವನ್ನು ಮಂತ್ರ (ಪೂರ್ವಾಭಿಮುಖ) ಸ್ಥಳಿಯರು ನಿರ್ಮಿಸಿದ್ದಾರೆ. ಶಿವದೇವಾಲಯವು ಮೂರು ಗರ್ಭಗೃಹಗಳನ್ನೊಳಗೊಂಡಿದೆ. ನಾಶವಾದ ದೇವಾಲಯದ ಅಂತರಾಳ ಮತ್ತು ಗರ್ಭಗುಡಿಯಮಂತ್ರಿ ಕಾಣುತ್ತೇವೆ. ಇವುಗಳಿಗೆ ಹೊಂದಿಕೊಂಡಂತೆ ನವರಂಗಗಳು ಇದ್ದಿರಬಹುದೆಂದು ಊಹಿಸಬಹುದು. ಕ್ರಿ.ಶ. ೯೭೩-೭೪ರ ಗುಂಡೂರ ಶಾಸನದಲ್ಲಿ ರಾಷ್ಟ್ರಕೂಟ ದೊರೆ ಕಕ್ಕಲ ದೇವವನ್ನು ಹೆಸರಿಸುತ್ತದೆ[೧೦]. ಈ ಶಾಸನದಲ್ಲಿ ಶ್ರೀಮುಖ ಸಂವತ್ಸರ, ಆಷಾಢಮಾಸ ದಕ್ಷಿಣಾಯನ ಸಂಕ್ರಾಂತಿ, ಆದಿತ್ಯವಾರದಂದು ಬೋಳಯ್ಯ, ವೋಬಯ್ಯ ಮತ್ತು ರಾಜಯ್ಯ ಎಂಬ ಮೂರು ಜನ ಸೇರಿಕೊಂಡು ಕಡಕೇರಿ ಮಹದೇವನಿಗೆ ಏಳು ಮತ್ತರ ಕರಿನೆಲ ಮತ್ತು ಒಂದು ಮತ್ತರ ಗದ್ದೆಯನ್ನು ದಾನವಾಗಿ ಕೊಟ್ಟ ಪ್ರಸ್ತಾಪವಿದೆ[೧೦]

ಸಂ – ೧೦

ಹೆಸರು – ಕದಂಬೇಶ್ವರ ದೇವಾಲಯ

ಗ್ರಾಮ – ಅರಳೇಶ್ವರ

ತಾಲೂಕು – ಹಾನಗಲ್ಲು

ಕಾಲಮಾನ – ೧೧ ನೇ ಶತಮಾನ

ದೇವಾಲಯವು ಗರ್ಭಗೃಹ – ಅಂತರಾಳ, ನವರಂಗ ಮತ್ತು ಪ್ರವೇಶ ಮಂಟಪಗಳನ್ನು ಒಳಗೊಂಡಿದೆ. ಅಂತರಾಳದಲ್ಲಿ ಬಾಗಿಲುವಾಡಗಳ ಬದಲಿಗೆ ಜಾಲಂಧ್ರಗಳುಂಟು. ಮೇಲ್ಭಾಗದಲ್ಲಿ ಅಲಂಕರಣ ಫಲಕವಿದೆ. ನವರಂಗದಲ್ಲಿ ಚತುರಸ್ರಾಕಾರದ ಕಂಬಗಳಿದ್ದು, ನಿಮ್ನ ಮುಖಗಳ ಅಲಂಕರಣದಿಂದ ಕೂಡಿದೆ. ಪ್ರವೇಶ ಮಂಟಪದಲ್ಲಿ ಮಕರ ತೋರಣವನ್ನು ಅಳವಡಿಸಿದೆ. ಭಿತ್ತಿಯು ಸಂಪೂರ್ಣವಾಗಿ ಇಟ್ಟಿಗೆಯ ರಚನೆಯಾಗಿದ್ದು, ಗರ್ಭಗೃಹದ ಭಿತ್ತಿ ಭಾಗ ಮಾತ್ರ ಉಳಿದಿವೆ. ಕ್ರಿ.ಶ. ೧೧ನೇ ಶತಮಾನದ ಅರಳೇಶ್ವರ ಶಾಸನದಲ್ಲಿ ಎಡವೊಳಲ್ – ೭೦ ರ ಅಳಿಯ ಸಿರಿವೂರನಾಳುವ ರಾಮಸಿಂಗಿ ಪಂಡಿತರಿಂದ ಕದಂಬೇಶ್ವರನ ಪ್ರತಿಷ್ಠಾಪನೆ ತಿಳಿಸುತ್ತದೆ. ಮತ್ತೊಂದು ಕ್ರಿ.ಶ. ೧೨ನೇ ಶತಮಾನದ ಶಾಸನದಲ್ಲಿ ರಾಮಸಿಂಗಿ ಪಂಡಿತನ ಮಗ ತ್ರಿಭುವನ ಸಿಂಗಿ ಪಂಡಿತನು ಕದಂಬೇಶ್ವರ ದೇವಾಲಯವನ್ನು ಪಂಚಕೂಟವಾಗಿ ವಿಸ್ತರಿಸಿ ದಾನ ನೀಡಿರುವುದು ತಿಳಿಸುತ್ತದೆ ಹಾಗೂ ಇನ್ನು ಉಳಿದ ಶಾಸನಗಳು ದೇವರಿಗೆ ದಾನದತ್ತಿಗಳನ್ನು ಉಲ್ಲೇಖಿಸುತ್ತದೆ.

ಸಂ – ೧೧

ಹೆಸರು – ಕೆರೆಯ ಸೋಮೇಶ್ವರ ದೇವಾಲಯ

ಗ್ರಾಮ – ಕಲಕೇರಿ

ತಾಲೂಕು – ಹಾನಗಲ್ಲು

ಕಾಲಮಾನ – ೧೨ – ೧೩ ನೇ ಶತಮಾನ

ಕೆರೆಯ ಸೋಮೇಶ್ವರ ದೇವಾಲಯ ಗರ್ಭಗೃಹದ ಪ್ರಾಚೀನ ಹೊರಗೋಡೆ. ಅದಿಷ್ಠಾನ ಭಾಗಗಳು ಸ್ಪಷ್ಟವಾಗಿ ಕಂಡುಬರುತ್ತವೆ. ಪಾಳುಬಿದ್ದ ಶಿವಾಲಯದ ಅವಶೇಷಗಳಿವೆ. ದೇವಾಲಯವು ಹೆಚ್ಚು ಕಡಿಮೆ ಕ್ಷೀಣಿಸಿದ ಅದು ಕೂಡ ನಾಶವಾಗುವ ಸ್ಥಿತಿಯಲ್ಲಿದೆ. ಕಲಕೇರಿ ಗ್ರಾಮದಲ್ಲಿಯೇ ಅತ್ಯಂತ ಪ್ರಾಚೀನ ದೇವಾಲಯವೆಂದು ತಿಳಿಯುತ್ತದೆ. ಏಕೆಂದರೆ ದೊಡ್ಡ ಗಾತ್ರದ ಇಟ್ಟಿಗೆಗಳನ್ನು ಬಳಸಲಾಗಿದೆ. ಕಲ್ಲಿನಿಂದ ಕಟ್ಟಲ್ಪಟ್ಟ ದೇವಾಲಯಗಳಿಗಿಂತ ಇಟ್ಟಿಗೆಯಿಂದ ಕಟ್ಟಲ್ಪಟ್ಟಿದ್ದ ದೇವಾಲಯಗಳು ಪ್ರಾಚೀನವಾಗಿದೆ. ಪ್ರಾಚೀನ ಅವಶೇಷಗಳು, ಬಿಡಿಭಾಗಗಳಾದ ಶಿವಲಿಂಗ, ನಂದಿ, ಗಣಪತಿ ಮತ್ತು ವಿಗ್ರಹಗಳು ಕಂಡುಬರುತ್ತವೆ. ಕ್ರಿ.ಶ. ೧೦೫೩ ಕಲಕೇರಿ ಶಾಸನದಲ್ಲಿ ಸೋಮೇಶ್ವರನಿಗೆ ದಾನ ನೀಡಿದನ್ನು ತಿಳಿಸುತ್ತದೆ. ಮತ್ತೊಂದು ೧೦೫೫ರ

ಶಾಸನದಲ್ಲಿ ಒಂದನೇ ಸೋಮೇಶ್ವರ ಕಾಲದಲ್ಲಿ ಬೇಗೇರಿಯ ಸೋಮಗಾವುಂಡನ ಮಗ ಬರ್ಮಯ್ಯನು ಊರ್ಗಾವುಂಡುಗೆಯತ್ತಿವಾಗ ಪರೋಕ್ಷ ವಿನಯವಾಗಿ ಸೋಮೇಶ್ವರ ದೇವರಿಗೆ ಗಂಧ ಖಂಡಸ್ಫುಟಿಕಕ್ಕೆ ಪಶುಪತಿದೇವರ ಕಾಲು ತೊಳೆದು ಬೆಂಗೇರಿಯ ಕೆರೆಯ ಕೆಳಗೆ ಗದ್ದೆಯನ್ನು ಕಲೆಯೂರ ಹಾದಿಯಲ್ಲಿ ಬೆರ್ದ್ದಲೆ ಎರಡು ಮತ್ತರು ಭೂಮಿಯನ್ನು ಕೆರೆಯ ಕೆಳಗೆ ತುಂಬಿನ ಮೊದಲಲ್ಲಿಯೇ ಇರುವ ತೋಟದಲ್ಲಿ ನೂರು ಅಡಿಕೆ ಮರಗಳನ್ನು, ಭೋಗದ ಸೂಳೆಯರಿಗೆ ೧೨ ಮನೆಗಳನ್ನು ಬಿಡುತ್ತಾನೆ. ಇದರಿಂದ ಇಂದು ಕೆರೆ ಬಸವಣ್ಣನೆಂದು ಕರೆಯುವ ದೇವಾಲಯವೇ ಕೆರೆಸೋಮೇಶ್ವರ ದೇವಾಲಯವಾಗಿದ್ದು ಇದನ್ನು ಕಕಾಂಚಿಸೆಟ್ಟಿ ಎಂಬುವವನು ಕಟ್ಟಿಸಿದನೆಂಬುದು ಸ್ಪಷ್ಟವಾಗುತ್ತದೆ[೧೧].

**ಸಂ** – ೧೨

**ಹೆಸರು** – ಶಾಂತೇಶ್ವರ ದೇವಾಲಯ

**ಗ್ರಾಮ** – ತಿಳುವಳ್ಳಿ

**ತಾಲೂಕು** – ಹಾನಗಲ್ಲು

**ಕಾಲಮಾನ** – ಕ್ರಿ.ಶ. ಸುಮಾರು ೧೨ – ೧೩ ನೇ ಶತಮಾನ

ಪೂರ್ವಭಿಮುಖವಾಗಿರುವ ಈ ದೇವಾಲಯಕ್ಕೆ ಮೂರು ಕಡೆಗಳಿಂದ ತೆರದ ಪ್ರವೇಶ ಮಾರ್ಗವಿದೆ. ತೆರೆದ ಮಂಟಪ ನವರಂಗ, ಶುಕನಾಸಿ, ಗರ್ಭಗೃಹ ಈ ದೇವಾಲಯದ ಅಂಶಗಳಾಗಿವೆ. ಅಂತರಾಳ ಹಾಗೂ ಗರ್ಭಗೃಹಗಳ ದ್ವಾರಗಳ ಮೇಲೆ ಸಾಲು ಗೋಪುರಗಳನ್ನು ಬಿಡಿಸಿದ್ದಾರೆ. ಗರ್ಭಗೃಹದ ಬಾಗಿಲವಾಡದ ಮೇಲೆ ಇಂತಹ ಸಾಲುಗೋಪುರಗಳ ಮಧ್ಯದ ಸ್ಥಳಾವಕಾಶದಲ್ಲಿ ಚಿಕ್ಕ ಚಿಕ್ಕ ವಿಗ್ರಹಗಳನ್ನು ಕಂಡರಿಸಲಾಗಿದೆ. ಗರ್ಭಗೃಹದಲ್ಲಿ ಶಾಂತೇಶ್ವರ ಲಿಂಗವಿದ್ದು ಅಂತರಾಳದಲ್ಲಿ ನಂದಿ ಇದೆ. ಕ್ರಿ.ಶ. ೧೨೪೯ರ ತಿಳುವಳ್ಳಿ ಶಾಸನದಲ್ಲಿ ಸಾವಂತ ಕಲಿದೇವನಿಂದ ಸಾವಂತೇಶ್ವರ ದೇವರಿಗೆ ಸೂಂಡಂಗಿ ಗ್ರಾಮವನ್ನು ದಾನ ನೀಡಿದ ಉಲ್ಲೇಖವಿದೆ.

**ಸಂ** – ೧೩

**ಹೆಸರು** – ಸರ್ವೇಶ್ವರ ದೇವಾಲಯ

**ಗ್ರಾಮ** – ನರೇಗಲ್

**ತಾಲೂಕು** – ಹಾನಗಲ್ಲು

**ಕಾಲಮಾನ** – ಕ್ರಿ.ಶ. ಸುಮಾರು ೧೧ – ೧೨ ನೇ ಶತಮಾನ

ಪುರಾತನ ಸ್ಥಳವಾದ ನರೇಗಲ್ ಗ್ರಾಮವು ಹಾವೇರಿ ಜಿಲ್ಲಾ ಕೇಂದ್ರದಿಂದ ೧೯ ಕಿ.ಮೀ., ಹಾನಗಲ್ಲು ತಾಲ್ಲೂಕಿನಿಂದ ೧೬ ಕಿ.ಮೀ. ದೂರದಲ್ಲಿದೆ. ಕಲ್ಯಾಣಚಾಲುಕ್ಯರ ಶೈಲಿಯ ಕ್ರಿ.ಶ. ೧೧–೧೨ ಶತಮಾನದ ಈ ದೇವಾಲಯವನ್ನು ನಿರ್ಮಿಸಲಾಗಿದೆ.

ಈ ದೇವಾಲಯವು ಗರ್ಭಗೃಹ, ಅಂತರಾಳ ಮತ್ತು ತೆರೆದ ಸಭಾಮಂಟಪಗಳನ್ನು ಹೊಂದಿದೆ ಗರ್ಭಗೃಹದಲ್ಲಿ ಶಿವಲಿಂಗವಿದ್ದು, ಗರ್ಭಗೃಹ ದ್ವಾರದ ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪ ಹಾಗೂ ಅಂತರಾಳ ದ್ವಾರದ ಲಲಾಟಬಿಂಬದಲ್ಲಿ ಬ್ರಹ್ಮ, ಮಹೇಶ್ವರ ಮತ್ತು ವಿಷ್ಣುವಿನ ಉಬ್ಬುಶಿಲ್ಪಗಳಿವೆ. ಬಾಗಿಲವಾಡಕ್ಕೆ ಸೇರಿದಂತೆ ಜಾಲಂಧ್ರಗಳುಂಟು. ಆಯತಾಕಾರದ ಸಭಾಮಂಟಪವು ಕಕ್ಷಾಸನದಿಂದ ಕೂಡಿದ್ದು ಚಾವಣಿಯು ಎರಡೂ ಕಡೆ ದೀರ್ಘ ಇಳಿಜಾರಿನಿಂದ ಕೂಡಿದೆ. ಈ ದೀರ್ಘ ಇಳಿಜಾರಿನ ರಚನೆ, ಹಂಚಿನ ಮನೆಯ ಛಾವಣಿ ರಚನೆಯನ್ನು ಹೋಲುತ್ತದೆ. ಈ ರೀತಿ ದೇವಾಲಯದ ನಿರ್ಮಾಣದಲ್ಲಿ ಸ್ಥಳೀಯ ಶೈಲಿಯನ್ನೇ ಅಳವಡಿಸಿಕೊಂಡಿರುವುದು ಗಮನಾರ್ಹ ನೆಲದಲ್ಲಿ ಉದ್ದಕ್ಕೂ ಮೂರು ಶಿಲಾವೇದಿಕೆಗಳಿವೆ ಇದನ್ನು ಉತ್ತರ, ದಕ್ಷಿಣ ಮತ್ತು ಪೂರ್ವ ಭಾಗಗಳಿಂದ ಪ್ರವೇಶಿಸಬಹುದು. ಗರ್ಭಗೃಹ ಮತ್ತು ಅಂತರಾಳಗಳು ಅಧಿಷ್ಠಾನದ ಪೂರ್ವ ಪ್ರವೇಶ ದ್ವಾರದವರೆಗಿನ ತೆರೆದ ಸಭಾಮಂಟಪದ ಇಳಿಜಾರು ಚಾವಣಿ ರಚನೆಯು ವಿಶಿಷ್ಟವಾಗಿದೆ. ನಾಲ್ಕು ಬಗೆಯ ವೈವಿಧ್ಯ ಕೆತ್ತನೆ ಹೊಂದಿದ ಒಟ್ಟು ೩೨ ಕಂಬಗಳ ಮೇಲೆ ನಿಂತಿರುವ ಆಯತಾಕಾರದ ತೆರೆದ ಸಭಾ ಮಂಟಪದ ಅಂಚಿನುದ್ದಕ್ಕೂ ಕಕ್ಷಾಸನವಿದೆ.

ಕ್ರಿ.ಶ. ೧೧೨೬ ನರೇಗಲ್ ಶಾಸನದಲ್ಲಿ ಮೂಲಸ್ಥಾನ ದೇವರಿಗೆ ಬಿಟ್ಟ ದತ್ತಿಯನ್ನು ಹಾಗೂ ಸೂರ್ಯ ದೇವಾಲಯ ನಿರ್ಮಾಣವನ್ನು ಉಲ್ಲೇಖಿಸುತ್ತದೆ.

| | | |
|---|---|---|
| **ಸಂ** | – | ೧೫ |
| **ಹೆಸರು** | – | ಕಲ್ಮೇಶ್ವರ ದೇವಾಲಯ |
| **ಗ್ರಾಮ** | – | ಬಾಳಂಬೀಡು |
| **ತಾಲೂಕು** | – | ಹಾನಗಲ್ಲು |
| **ಕಾಲಮಾನ** | – | ೧೨ ನೇ ಶತಮಾನ |

ದೇವಾಲಯದಲ್ಲಿ ಗರ್ಭಗೃಹ, ಅಂತರಾಳ, ನವರಂಗ ಮತ್ತು ಸಭಾಮಂಟಪಗಳಿವೆ. ಗರ್ಭಗೃಹದಲ್ಲಿ ಶಿವಲಿಂಗವಿದ್ದು, ಅಂತರಾಳ ದ್ವಾರದ ಲಲಾಟ ಬಿಂಬದಲ್ಲಿ ಬ್ರಹ್ಮ, ಮಹೇಶ್ವರ ಮತ್ತು ವಿಷ್ಣುವಿನ ಉಬ್ಬುಶಿಲ್ಪಗಳಿವೆ. ನವರಂಗದಲ್ಲಿ ಐದು ದೇವಕೋಷ್ಟಗಳಿದ್ದು, ಎರಡರಲ್ಲಿ ಸಪ್ತಮಾತೃಕೆಯ ಪಟ್ಟಿಕೆ ಇದ್ದು, ಒಂದರಲ್ಲಿ ಗಣಪತಿ, ಇನ್ನೊಂದರಲ್ಲಿ ಕಾರ್ತಿಕೇಯನ ಶಿಲ್ಪಗಳಿವೆ. ನವರಂಗದಲ್ಲಿ ಹೊಳಪಿನಿಂದ ಕೂಡಿದ ತಿರುಗಣೆ ಯಂತ್ರದಿಂದ ರಚಿಸಿರುವ ಘಂಭಾಕಾರದ ಕಂಬಗಳು, ಬಳೆಗಳ ಮತ್ತು ಸೂಕ್ಷ್ಮ ಕೆತ್ತನೆಗಳ ಅಲಂಕರಣಗಳನ್ನು ಹೊಂದಿವೆ. ತೆರೆದ ಸಭಾಮಂಟಪದಲ್ಲಿ ೧೬ ಕಂಬಗಳಿವೆ.

ಈ ಸಭಾಮಂಟಪದ ಮುಂದೆ ಮುಖಮಂಟಪ ಇದೆ. ಅಧಿಷ್ಠಾನದ ಮೇಲಿರುವ ಹೊರಭಿತ್ತಿ ಸರಳ ರಚನೆಯದು. ಗರ್ಭಗೃಹದ ಮೇಲೆ ದ್ವಿತಲ ಶಿಖರವಿದ್ದು, ಸುಖನಾಸದಿಂದ ಕೂಡಿದೆ. ಈ ದೇವಾಲಯವನ್ನು ಬೋಳದೇವರ ಗುಡಿ ಎಂದು ಶಾಸನ ಉಲ್ಲೇಖಿಸುತ್ತದೆ.

ಕ್ರಿ.ಶ. ೧೧೨೩ರ ಬಾಳಂಬೀಡು ಶಾಸನದಲ್ಲಿ ಮಹಾಪ್ರಭು ಬಮ್ಮಗಾವುಂಡ ಬಳ್ಳಾರೆಯ ಬೀಡುಗ್ರಾಮದಲ್ಲಿ ಬ್ರಹ್ಮೇಶ್ವರ ದೇವಾಲಯವನ್ನು ಕಟ್ಟಿದನೆಂದು ಉಲ್ಲೇಖಿಸುತ್ತದೆ. ಇದರಿಂದ ಈಗಿನ ಕಲ್ಮೇಶ್ವರ ದೇವಾಲಯದ ಪ್ರಾಚೀನ ಹೆಸರು ಬ್ರಹ್ಮೇಶ್ವರ ಎಂದು ಸ್ಪಷ್ಟವಾಗುವುದು. ಕ್ರಿ.ಶ. ೧೧೬೫ ಮತ್ತೊಂದು ಶಾಸನದಲ್ಲಿ ಬಳ್ಳರಬೀಡು ಗ್ರಾಮದ ಚಿಕ್ಕೇಶ್ವರ ದೇವಾಲಯಕ್ಕೆ ಹೊಂದಿರುವ ಬ್ರಹ್ಮೇಶ್ವರ ದೇವಾಲಯಕ್ಕೆ ಸುಂಕದಾನ ನೀಡಿದ ಉಲ್ಲೇಖವುಂಟು. ಇಲ್ಲಿ ಚಿಕ್ಕೇಶ್ವರ ಎನ್ನುವ ಯಾವ ದೇವಾಲಯವೂ ಇಲ್ಲ. ಹತ್ತಿರದಲ್ಲಿರುವ ರಾಮೇಶ್ವರ ದೇವಾಲಯವು ಬ್ರಹ್ಮೇಶ್ವರ ದೇವಾಲಯಕ್ಕಿಂತ ಹಳೆಯದು. ಹೊಸದಾಗಿ ನಿರ್ಮಿಸಿದ ಬ್ರಹ್ಮೇಶ್ವರ ದೇವಾಲಯದ ನಿರ್ವಹಣೆಯನ್ನು ರಾಮೇಶ್ವರ ದೇವಾಲಯಕ್ಕೆ ವಹಿಸಿರಬೇಕು. ಅಲ್ಲದೆ ವಾಸ್ತುರಚನೆಯಲ್ಲಿ ಬ್ರಹ್ಮೇಶ್ವರ ದೇವಾಲಯವೇ ದೊಡ್ಡದು. ಹೀಗಾಗಿ ನಂತರದ ಶಾಸನದಲ್ಲಿ ರಾಮೇಶ್ವರ ದೇವಾಲಯವನ್ನು ಚಿಕ್ಕೇಶ್ವರ ದೇವಾಲಯವೆಂದು ಕರೆದಿರಬಹುದು.

| | | |
|---|---|---|
| **ಸಂ** | – | ೧೫ |
| **ಹೆಸರು** | – | ತಾರಕೇಶ್ವರ ದೇವಾಲಯ |
| **ಗ್ರಾಮ** | – | ಹಾನಗಲ್ಲು |
| **ತಾಲೂಕು** | – | ಹಾನಗಲ್ಲು |
| **ಕಾಲಮಾನ** | – | ಕ್ರಿ.ಶ. ಸುಮಾರು ೧೧ – ೧೨ ನೇ ಶತಮಾನ |

ಹಾನಗಲ್ಲು ಹಾವೇರಿ ಜಿಲ್ಲಾ ಕೇಂದ್ರದಿಂದ ૩૫ ಕಿ.ಮೀ. ಅಂತರದಲ್ಲಿದೆ. ದೇವಾಲಯವು ಗರ್ಭಗೃಹ, ಅಂತರಾಳ, ನವರಂಗ, ಸಭಾಮಂಟಪ ಮತ್ತು ಮುಖಮಂಟಪಗಳನ್ನು ಒಳಗೊಂಡಿದೆ. ವಿಶಾಲವಾದ ಈ ದೇವಾಲಯ ಕಲ್ಯಾಣಚಾಲುಕ್ಯ ಶೈಲಿಗೆ ಉತ್ತಮ ಉದಾಹರಣೆ. ಮೊದಲಿಗೆ ನವರಂಗವು ಉತ್ತರ, ದಕ್ಷಿಣ ಮತ್ತು ಪೂರ್ವದಿಕ್ಕುಗಳಲ್ಲಿ ಪ್ರವೇಶ ಮಂಟಪಗಳನ್ನು ಹೊಂದಿತ್ತು. ಈಗ ಉತ್ತರ ಮತ್ತು ದಕ್ಷಿಣದ ಪ್ರವೇಶ ಮಂಟಪಗಳು ಗರ್ಭಗಳಾಗಿವೆ. ಗರ್ಭಗೃಹವು ಬಹುಕೋನಾಕಾರವಾದ ತಲವಿನ್ಯಾಸವನ್ನು ಹೊಂದಿದೆ. ಕದಂಬರ ಲಕ್ಷಣವುಳ್ಳ ಪಾಣಿಪೀಠದ ಮೇಲೆ ಎತ್ತರವಾದ ಶಿವಲಿಂಗವಿದೆ. ಗರ್ಭಗೃಹದ ದ್ವಾರಬಂಧ ಕಲಾಪೂರ್ಣವಾಗಿದ್ದು, ಇದರ ಬಾಗಿಲುವಾಡವು ಪಂಚಶಾಖಾಲಂಕಾರವನ್ನು ಹೊಂದಿದೆ. ಮುಂಭಾಗದಲ್ಲಿರುವ ಅಂತರಾಳವು ಅಲಂಕೃತ ಬಾಗಿಲುವಾಡವನ್ನು ಹೊಂದಿದ್ದು, ಇಕ್ಕೆಲಗಳಲ್ಲಿ ಜಾಲಿಂಧ್ರಗಳಿವೆ. ಮಧ್ಯದ ಕಂಬಗಳು ತಿರುಗಣೆಯಂತ್ರದವು. ಮಧ್ಯದ ಭುವನೇಶ್ವರಿ ಸುಂದರವಾದ ರಚನೆ ಪ್ರವೇಶದ್ವಾರ ಸೂಕ್ಷ್ಮ ಕೆತ್ತನೆಗಳ ಅಲಂಕರಣದಿಂದ ಕೂಡಿದೆ. ತೆರೆದ

ಸಭಾಮಂಟಪ ನಕ್ಷತ್ರಾಕಾರದಲ್ಲಿದ್ದು, ಹೊಯ್ಸಳ ಮಾದರಿಯ ಆಕರ್ಷಕ ಕಂಬ ಭಾರಿ ಗಾತ್ರದ ತೊಲೆಗಳನ್ನು ಆದರಿಸಿವೆ. ನವರಂಗವು ನಾಲ್ಕು ಪ್ರವೇಶ ದ್ವಾರಗಳನ್ನು ಹೊಂದಿದೆ. ಸುತ್ತಲೂ ಕಕ್ಷಾಸನವನ್ನು ಒಳಗೊಂಡಿದೆ. ಹೊಳಪಿನ ಕಂಬಗಳು ವಿವಿಧಾಕೃತಿಯಲ್ಲಿವೆ. ಗುಮ್ಮಟಾಕಾರದ ಭುವನೇಶ್ವರಿಯಲ್ಲಿ ಅನೇಕ ವಪಗುಮ್ಮಟ ರಚನೆಗಳನ್ನು ಜಿಡಿಸಿದ್ದು ಮಧ್ಯದಲ್ಲಿ ಇಳಿಜಿದ್ದ ಮಾಗ್ಗಿನ ರಚನೆಯನ್ನು ಕಾಣಬಹುದು. ಮುಖಮಂಟಪದಲ್ಲೂ ಕಕ್ಷಾಸನದ ರಚನೆಯುಂಟು. ದೇವಾಲಯದ ಹೊರಭಿತ್ತಿಯಲ್ಲಿ ಅರ್ಧಕಂಬ ಮತ್ತು ದೇವಕೋಷ್ಠಗಳ ಅಲಂಕರಣವಿದೆ. ಗರ್ಭಗೃಹ ಮೇಲೆ ನಾಲ್ಕು ತಲದ ಶಿಖರ ಸುಖಾನಾಸದಿಂದ ಕೂಡಿದ್ದು ಮುಂಭಾಗದಲ್ಲಿ ಎತ್ತರವಾದ ಶಿಲಾಸ್ತಭವಿದೆ.

ಸುಖನಾಸಿಯು ಕಲಾತ್ಮಕವಾಗಿ ಕಂಡರಿಸಿದ ನಾಲ್ಕು ಕಂಬಗಳನ್ನು ಹೊಂದಿದ್ದು, ಗರ್ಭಗೃಹಕ್ಕೆ ಎದುರಾಗಿರುವ ಸುಖನಾಸಿಯಲ್ಲಿ ನಂದಿ ಇದೆ. ಬಲಭಾಗದ ಸುಖನಾಸಿಯಲ್ಲಿ ಈಶ್ವರ ಲಿಂಗ ಎಡಗಡೆ ಪಾರ್ವತಿ ಶಿಲ್ಪಗಳಿವೆ.

ಒಳಭಾಗದಲ್ಲಿ ತಾರಕೇಶ್ವರ ಲಿಂಗ, ವಿಷ್ಣು, ಬ್ರಹ್ಮ, ಕಾರ್ತಿಕೇಯ ಮತ್ತು ನಂದಿಶಿಲ್ಪಗಳಿವೆ. ಸಭಾಮಂಟಪದ ಹೊರಮೈಯಲ್ಲಿ ರಾಮಾಯಣದ ಘಟನಾವಳಿಗಳ ಉಬ್ಬು ಶಿಲ್ಪಗಳನ್ನು ಕಂಡರಿಸಲಾಗಿದೆ. ದ್ವಾರಪಾಲಕರ ಶಿಲ್ಪಗಳು ಮನಮೋಹಕವಾಗಿವೆ. ಕೆಲವೆಡೆ ಕೆತ್ತನೆ ಪೂರ್ಣವಾಗಿಲ್ಲ. ಮುಖಮಂಟಪದಲ್ಲಿ ವೀರಗಲ್ಲು ಶಾಸನಶಿಲ್ಪಗಳು ಮತ್ತು ಇತರ ಭಗ್ನಗೊಂಡ ಶಿಲ್ಪಾವಶೇಷಗಳಿವೆ. ಕ್ರಿ.ಶ.೧೧೨೧ರ ಹಾನಗಲ್ಲು ಶಾಸನದಲ್ಲಿ ತೈಲೇಶ್ವರ ದೇವಾಲಯವನ್ನು ನಿರ್ಮಿಸಿ, ಭೂದಾನ ಮಾಡಿದ ಬಗ್ಗೆ ಉಲ್ಲೇಖವಿದೆ. ಇನ್ನೊಂದು ಶಾಸನದಲ್ಲಿ ತಾರಕೇಶ್ವರ ದೇವಾಲಯಕ್ಕೆ ನೀಡಿದ ದತ್ತಿಯನ್ನು ಉಲ್ಲೇಖಿಸಿದೆ.

| | | |
|---|---|---|
| **ಸಂ** | – | ೧೬ |
| **ಹೆಸರು** | – | ಗಳಗೇಶ್ವರ ದೇವಾಲಯ |
| **ಗ್ರಾಮ** | – | ಗಳಗನಾಥ |
| **ತಾಲೂಕು** | – | ಹಾವೇರಿ |
| **ಕಾಲಮಾನ** | – | ೧೧ – ೧೨ ನೇ ಶತಮಾನ |

ಹಾನಗಲ್ಲು ಗರ್ಭಗೃಹ ಅಂತರಾಳ ಹಾಗೂ ನವರಂಗಗಳನ್ನು ಒಳಗೊಂಡಿದೆ. ಗರ್ಭಗೃಹದಲ್ಲಿ ಎತ್ತರವಾದ ಬೃಹದಾಕಾರದ ಶಿವಲಿಂಗವಿದೆ. ಜಿಡಿಶಿಲ್ಪಗಳಾದ, ಆದಿಶಕ್ತಿ ಪಾರ್ವತಿಯ ವಿವಿಧ ಭಂಗಿಯ ಶಿಲ್ಪಗಳು, ಜಟಾಧಾರಿ ಶಿವನಶಿಲ್ಪ, ವಿಷ್ಣು ಮತ್ತು ವರಾಹಮೂರ್ತಿ ಶಿಲ್ಪಗಳನ್ನು ಇದರಲ್ಲಿ ಇಡಲಾಗಿದೆ. ಗರ್ಭಗೃಹದ ಒಳ ಹಿಂದಿನ ಗೋಡೆಯಲ್ಲಿ ಶಿಖರವುಳ್ಳ ಕೋಷ್ಠಗಳನ್ನು, ಮೇಲ್ಛಾವಣಿಯಲ್ಲಿ ಅಲಂಕೃತಾದ ಅರ್ಧಗಂಬಗಳಿವೆ. ಗರ್ಭಗೃಹದ ಬಾಗಿಲು ೧೨ ಅಡಿ ಎತ್ತರವು ಹಾಗೂ ಆಕರ್ಷಕವೂ ಆಗಿದೆ. ಇದರಲ್ಲಿ ತ್ರಿಶಾಖ ಪಟ್ಟಿಗಳನ್ನು

ಕಂಡರಿಸಿದ್ದಾರೆ. ಬಾಗಿಲದ ಲಾಲಾಟಬಿಂಬದಲ್ಲಿ ಹಲವಾರು ಬಿಡಿಶಿಲ್ಪಗಳನ್ನು ಕೆತ್ತಿದ್ದಾರೆ. ಗರ್ಭಗೃಹದ ಹೊರಗೆ ಎಡಭಾಗದಲ್ಲಿ ಪಾನಬಟ್ಟಲನ್ನು ಕಟ್ಟಲಾಗಿದೆ. ವಿಶಾಲವಾದ ಅಂತರಾಳವು ಜಾಲಂಧ್ರಗಳನ್ನು ಹೊಂದಿದೆ. ಇದರಲ್ಲಿನ ಎರಡೂ ಬದಿಯ ಗೋಡೆಗಳಿಗೆ ಹೊಂದಿಸಿ, ಸರಸ್ವತಿ, ನಂದಿ, ಪಂಚಲಿಂಗ ಮತ್ತು ವಿಷ್ಣುವಿನ ಬಿಡಿಶಿಲ್ಪಗಳನ್ನು ಇಡಲಾಗಿದೆ. ಅಂತರಾಳದಲ್ಲಿ ಸಾದಾ ಭುವನೇಶ್ವರಿ ಹಾಗೂ ಅಲಂಕೃತ ಅರ್ಧಕಂಬಗಳಿವೆ. ಇದರ ಎತ್ತರವಾದ ಬಾಗಿಲದ ಲಾಲಾಟ ಬಿಂಬದಲ್ಲಿ ಅನೇಕ ಬಿಡಿಶಿಲ್ಪಗಳನ್ನು ಕೆತ್ತಿದ್ದಾರೆ. ವಿಶಾಲವಾದ ತೆರೆದ ನವರಂಗವನ್ನು ಊರು ಕಡೆಗಳಿಂದ ಪ್ರವೇಶಿಸಬಹುದು. ನವರಂಗದಲ್ಲಿ ದೊಡ್ಡದಾದ ನಾಲ್ಕು ದೇವಕೋಷ್ಠಗಳಿವೆ. ಈ ದೇವಕೋಷ್ಠಗಳಲ್ಲಿ ಐದು ಅಡಿ ಎತ್ತರವಿರುವ ಆದಿಶಕ್ತಿ ಗಣಪತಿ ಸೂರ್ಯನಾರಾಯಣ ಮತ್ತು ದಶಾವತಾರ ವಿಷ್ಣುವಿನ ಶಿಲ್ಪಗಳನ್ನು ಇಡಲಾಗಿದೆ. ಮಧ್ಯದಲ್ಲಿ ನಾಲ್ಕು ದೊಡ್ಡ ಕಂಬಗಳು ಚೌಕಾಕಾರವಾಗಿದ್ದು ಆಕರ್ಷಕವಾದ ಎತ್ತರವನ್ನು ಪಡೆದಿದೆ. ಈ ಕಂಬಗಳ ಮಧ್ಯದ ಕಟ್ಟೆಯ ಮೇಲೆ ನಂದಿಯನ್ನು ಸ್ಥಾಪಿಸಿದ್ದಾರೆ. ನವರಂಗದಲ್ಲಿ ಕಕ್ಷಾಸನವಿದ್ದು, ಇದರಲ್ಲಿ ಅರ್ಧಗಂಬಗಳನ್ನು ಸಹ ಕಾಣಬಹುದು. ಎಡಗಡೆಯ ಪ್ರವೇಶ ದ್ವಾರದ ಬಳಿ ಕಲ್ಯಾಣಚಾಲುಕ್ಯರ ಕಾಲದ ಶಾಸನಗಳನ್ನು ಇಡಲಾಗಿದೆ. ಅಧಿಷ್ಠಾನ ಭಾಗದಲ್ಲಿ ಜಗತಿ, ಕಪೋತ, ಕುಮುದಗಳು ಹಾಗೂ ಇತರ ಮೂರ್ತಿಶಿಲ್ಪಗಳು ಖಂಡಿಸಲಾಗಿದೆ. ಶಿಖರವು ಎತ್ತರವಾಗಿದ್ದು ಕುಶಲ, ಸ್ತೂಪಿ ಹಾಗೂ ಸುಖಾನಾಸವನ್ನು ಹೊಂದಿದೆ. ಕ್ರಿ.ಶ. ೧೦೭೯ರ ಗಳಗನಾಥ ಶಾಸನದಲ್ಲಿ ಬೊಮ್ಮಯ್ಯನಿಂದ ಗಳಗೇಶ್ವರ ದೇವಾಲಯ ಮಂಟಪ ನಿರ್ಮಾಣಕ್ಕಾಗಿ ಸುವರ್ಣದಾನ ಉಲ್ಲೇಖಿಸುತ್ತದೆ. ಮತ್ತೊಂದು ೧೦೮ರ ಶಾಸನದಲ್ಲಿ ಯುವರಾಜ ಜಯಸಿಂಘದೇವನ ಅಧೀನನಾದ ಮಹಾಮಂಡಳೇಶ್ವರ ಚನ್ನರಸನಿಂದ ಗಳಗೇಶ್ವರ ದೇವಾಲಯಕ್ಕೆ ಪುಲ್ಲಣಿ ಗ್ರಾಮದ ಪುನರ್ದತ್ತಿ ಉಲ್ಲೇಖ ಕಂಡುಬರುತ್ತದೆ.

| | | |
|---|---|---|
| **ಸಂ** | – | ೧೭ |
| **ಹೆಸರು** | – | ಶ್ರೀ ಪುರಸಿದ್ದೇಶ್ವರ ದೇವಾಲಯ |
| **ಗ್ರಾಮ** | – | ಹಾವೇರಿ |
| **ತಾಲೂಕು** | – | ಹಾವೇರಿ |
| **ಕಾಲಮಾನ** | – | ಕ್ರಿ.ಶ. ಸುಮಾರು ೧೨ ನೇ ಶತಮಾನ |

ಹಾವೇರಿ ಜಿಲ್ಲಾ ಕೇಂದ್ರವಾಗಿರುವ ಈ ನಗರದಲ್ಲಿ ಪುರಸಿದ್ದೇಶ್ವರ ದೇವಾಲಯವಿದೆ. ದೇಗುಲವಿದ್ದ ಮೇಲೆ ಅದಕ್ಕೊಂದು ಇತಿಹಾಸವಿದೆ. ಈ ದೇವಾಲಯ ತಗ್ಗುಪ್ರದೇಶದಲ್ಲಿರುವುದೂ ಆಶ್ಚರ್ಯ. ಕ್ರಿ.ಶ. ೧೧೧೯ರ ಹಾವೇರಿ ಶಾಸನದಲ್ಲಿ ಆರ್ಮಡಿ ವಿಕ್ರಮಾದಿತ್ಯನ ಕಾಲಕ್ಕೆ ಈ ದೇವಾಲಯಕ್ಕಾಗಿ ಆರ್ಮಡಿ ವಿಕ್ರಮಾದಿತ್ಯ ದಾನ ನೀಡಿದ ಉಲ್ಲೇಖಗಳು ಶಾಸನಗಳಲ್ಲಿ

ದೊರೆಯುತ್ತದೆ. ಪುರದ ಸಿದ್ದೇಶ್ವರ, ಸಿದ್ಧನಾಥ, ವಿಷಪ್ರಹಾರ ಸ್ವಯಂಭು ಸಿದ್ದೇಶ್ವರ ಸೇರಿದಂತೆ ಹಲವಾರು ಹೆಸರುಗಳಿಂದ ಕರೆಯಲ್ಪಡುವ ಹಾವೇರಿ ನಗರದ ದೇವಾಲಯದ ಮೇಲ್ಛಾವಣಿ ಮಾತ್ರ ಚಿತ್ತಾಕರ್ಷಕ ಕಪ್ಪುಶಿಲೆಯಾಗಿದೆ. ನವರಂಗದಲ್ಲಿ ಸ್ಥಾಪಿತ ಕಂಬಗಳು ಚಾಲುಕ್ಯರ ಶೈಲಿಯನ್ನು ಪ್ರತಿನಿಧಿಸುತ್ತವೆ. ನಕ್ಷತ್ರಾಕಾರದ ತಲವಿನ್ಯಾಸ ಪಡೆದುಕೊಂಡಿರುವ ಪುರಸಿದ್ದೇಶ್ವರ ದೇವಾಲಯಕ್ಕೆ ವಿಶಿಷ್ಠ ವ್ಯಕ್ತಿತ್ವವಿರುವುದನ್ನು ನೋಡಬಹುದು. ಸುಂದರ ದ್ರಾವಿಡ ಶೈಲಿಯ ಶಿಖರ ಹೊಂದಿರುವ ಗರ್ಭಗೃಹವು ಸುಖನಾಸಿ ಅಥವಾ ಸುಖನಾಸ ಹೊಂದಿದೆ. ಅಲಂಕಾರಿಕವಾದ ಹೊರಭಿತ್ತಿಯು ದೇವಾಲಯದ ಆಕರ್ಷಣೆಯನ್ನು ಮತ್ತಷ್ಟು ಹೆಚ್ಚಿಸಿದೆ. ಬಾರಿ ಬಾರಿ ಈ ಪ್ರಾಚೀನ ದೇವಾಲಯವನ್ನು ಸುತ್ತು ಹಾಕಬೇಕೆಂಬ ಬಯಕೆ ಕೆರಳಿಸುವ ಶಿಲ್ಪ ಸೌಂದರ್ಯವನ್ನು ಇಲ್ಲಿ ಕಾಣಬಹುದು..

| | | |
|---|---|---|
| **ಸಂ** | – | ೧೮ |
| **ಹೆಸರು** | – | ಶ್ರೀ ಸೋಮೇಶ್ವರ ದೇವಾಲಯ |
| **ಗ್ರಾಮ** | – | ಹರಳಹಳ್ಳಿ |
| **ತಾಲೂಕು** | – | ಹಾವೇರಿ |
| **ಕಾಲಮಾನ** | – | ೧೧–೧೨ ನೇ ಶತಮಾನ |

ತ್ರಿಕೋಟಾಚಲ ದೇಗುಲವಿದ್ದು, ಮೂರುಗರ್ಭಗೃಹ, ಮೂರು ಅಂತರಾಳವಿರುವ ಈ ದೇಗುಲ ಒಂದೇ ವಿಶಾಲ ಹರವಿನ ನವರಂಗ ಹೊಂದಿರುವುದು ಕುತೂಹಲಕ್ಕೆ ಕಾರಣವಾಗುತ್ತದೆ. ಮೂರು ಗರ್ಭಗೃಹಗಳಲ್ಲಿ ಪ್ರತ್ಯೇಕ ಮೂರು ಈಶ್ವರ ಲಿಂಗಗಳಿವೆ. ದೇವಾಲಯದ ಸುತ್ತಲೂ ಮಧ್ಯ ಭಾಗದಲ್ಲಿ ನಿರ್ದಿಷ್ಟ ಅಂತರದಲ್ಲಿ ಚಿಕ್ಕ ಚಿಕ್ಕ ಗೂಡುಗಳಿವೆ. ಇದು ಕಲ್ಯಾಣಚಾಲುಕ್ಯರ ದೇವಾಲಯ ನಿರ್ಮಿಸುವ ಶೈಲಿಯಲ್ಲಿ ನಿರೂಪಿಸುತ್ತದೆ. ಹೊಯ್ಸಳರ ಲಾಂಛನವಿರುವುದನ್ನು ಗಮನಿಸಿದಾಗ ರಾಜಾಡಳಿತ ವಂಶದಿಂದ ವಂಶಕ್ಕೆ ಹಸ್ತಾಂತರಗೊಂಡಂತೆ ಪ್ರತೀ ರಾಜವಂಶಸ್ಥರು ತಮ್ಮ ಕುರುಹು ಬೀರುವ ಶಿಲ್ಪ ರಚನೆಗಳನ್ನು ಸೇರಿಸಿರಬಹುದಾದ ಉಲ್ಲೇಖಗಳನ್ನು ಈ ದೇವಾಲಯವು ಇತಿಹಾಸದಲ್ಲಿಯೂ ಕಾಣಬಹುದು. ತುಂಗಭದ್ರ ನದಿ ದಡದ ಮೇಲೆ ನಿರ್ಮಿಸಲಾಗಿರುವ ಸೋಮೇಶ್ವರ ದೇವಾಲಯದಲ್ಲಿ ಹೊಯ್ಸಳ ಲಾಂಛನವಿರುವುದರಿಂದ ಹೊಯ್ಸಳ ಶೈಲಿಯ ದೇವಾಲಯವಿದೆಂದು ತಜ್ಞರು ಹೇಳುತ್ತಾರೆ. ಹರಳಹಳ್ಳಿ ಶಾಸನದಲ್ಲಿ ಕಲ್ಯಾಣಶಕ್ತಿ ಮುನಿಯ ವಿನಂತಿಯ ಮೇರೆಗೆ ಜೋಯಿದೇವರಸನು ತುಂಗಭದ್ರ ತೀರದಲ್ಲಿ ವಿಕ್ರಮಪುರ ನಿರ್ಮಿಸಿ ವಿಕ್ರಮೇಶ್ವರ ಮತ್ತು ಗುತ್ತೇಶ್ವರ ದೇವಾಲಯಗಳಿಗೆ ಗ್ರಾಮಗಳನ್ನು ದಾನ ಮಾಡಿದ ಉಲ್ಲೇಖವಿದೆ. ಇದರಿಂದ ಸ್ಪಷ್ಟವಾಗಿ ತಿಳಿದು ಬರುವ ಮಾಹಿಗಳೆಂದರೆ ಇಂದಿನ ಹರಳಹಳ್ಳಿ ಗ್ರಾಮ ಹಿಂದಿನ ವಿಕ್ರಮಪುರವಾಗಿತ್ತು ಎಂದು ತಿಳಿಯುತ್ತದೆ.

ಸಂ – ೧೯
ಹೆಸರು – ಕದಂಬೇಶ್ವರ ದೇವಾಲಯ
ಗ್ರಾಮ – ರಟ್ಟಿಹಳ್ಳಿ
ತಾಲೂಕು – ಹಿರೇಕೆರೂರು
ಕಾಲಮಾನ – ಕ್ರಿ.ಶ. ಸುಮಾರು ೧೧-೧೨ ನೇ ಶತಮಾನ

ಹಿರೆಕೆರೂರು ತಾಲೂಕಿನ ರಟ್ಟಿಹಳ್ಳಿ ಗ್ರಾಮದಲ್ಲಿರುವ ಕದಂಬೇಶ್ವರ ದೇವಾಲಯ. ಮೂರು ಗರ್ಭಗೃಹಗಳು ಮೂರು ಅಂತರಾಳಗಳು, ನವರಂಗ ಸಭಾಮಂಟಪಗಳಿಂದ ಕೂಡಿರುವ ದೇವಾಲಯ, ನವರಂಗದಿಂದ ಸುಖನಾಸಿಯ ಆರಂಭದ ಬಾಗಿಲುವಾಡದ ದ್ವಾರಬಂಧದಲ್ಲಿ ಉತ್ತಮ ಕುಸರಿ ಕೆತ್ತನೆ ಇದೆ. ಅಕ್ಕಪಕ್ಕ ಬಾಲಾಂಧ್ರಗಳಿಂದ ಕೂಡಿದೆ. ದ್ವಾರದ ಮೇಲೆ ಮಕರತೋರಣದ ರಚನೆಯಿದೆ. ಬ್ರಹ್ಮ, ವಿಷ್ಣು, ಮಹೇಶ, ಗಣಪತಿ, ಮಹಿಷಮರ್ದಿನಿ, ಚಾಮರಸ ಸುಂದರಿಯರ ಉಬ್ಬು ಶಿಲ್ಪಗಳಿವೆ. ಗರ್ಭಗೃಹದ ಬಾಗಿಲುವಾಡದಲ್ಲಿ ತಲೆಕೆಳಗಾದ ತಾವರೆ ಮಾಗಿನಾಕಾರದ ಶಿಲ್ಪವಿದೆ. ನವರಂಗದಲ್ಲಿನ ದುಂಡು ಕಡೆದ ನಾಲ್ಕು ಕಂಬಗಳ ಕುಂಬ ಭಾಗದಲ್ಲಿ ಬಳ್ಳಿ ಹಾರದ ರೇಖಾ ಚಿತ್ರವಿದ್ದು ಕರಿನುಣುಪು ಕಲ್ಲಿನ ಕಂಬಗಳು ಒಂಬತ್ತು ಅಡಿಗು ಎತ್ತರವಿದ್ದು ಭುವನೇಶ್ವರಿಯನ್ನು ಹೊತ್ತು ನಿಂತಿವೆ. ದೇವಾಲಯದ ತ್ರಿಕೋನಗಳಲ್ಲಿ ಎರಡು ಗೋಪುರಗಳು ಸುಸ್ಥಿತಿಯಲ್ಲಿವೆ. ಇನ್ನೊಂದು ಉತ್ತರಕ್ಕಿರುವ ದಕ್ಷಿಣಾಭಿಮುಖ ಗೋಪುರ ಪಾಳುಗೊಂಡಿರುವುದನ್ನು ಕಾಣಬಹುದು. ಮೂರು ಗರ್ಭಗೃಹಗಳಲ್ಲಿ ಲಿಂಗಗಳಿವೆ. ನವರಂಗದಲ್ಲಿ ಬೃಹತ್ ನಂದಿ ವಿಗ್ರಹವಿದೆ. ದೇವಾಲಯದ ಶಿಖರಗಳಲ್ಲಿ ನಟರಾಜ ವಿವಿಧ ಭಂಗಿಯ ಶಿವ, ನಾಟ್ಯಭೈರವರ ಕಿರು ಶಿಲ್ಪಗಳನ್ನು ಸುತ್ತಲೂ ವೃತ್ತಾಕಾರವಾಗಿ ಆವರಿಸುವ ಭಿತ್ತಿಚಿತ್ರಗಳು ಕಂಡುಬರುತ್ತವೆ. ಗೋಪುರದ ಮೇಲ್ಭಾಗದಲ್ಲಿ ಹೊಯ್ಸಳ ಲಾಂಛನವಿದೆ. ದೇವಾಲಯದ ಹೊರಗಡೆ ಜಿನ ಪ್ರತಿಮೆಗಳು ಹಾಗೂ ವೀರಗಲ್ಲುಗಳು ಕಂಡುಬರುತ್ತವೆ.

ಕ್ರಿ.ಶ. ೧೧೭೪ರ ರಟ್ಟಿಹಳ್ಳಿ ಶಾಸನದಲ್ಲಿ ಮಹಾಮಂಡಳೇಶ್ವರ ಪಾಂಡ್ಯದೇವನಿಂದ ಕದಂಬೇಶ್ವರ ದೇವರಿಗೆ ದಾನವನ್ನು ನೀಡಿದನೆಂದು ದಾಖಲಿಸುತ್ತದೆ. ಕ್ರಿ.ಶ. ೧೨೩೭ ಮತ್ತು ೩೮ರ ಶಾಸನದಲ್ಲಿ ಕರಣದ ಕಲ್ಲಅರಸ ಮತ್ತು ಹಲವು ವ್ಯಾಪಾರಸ್ಥರು ಮಲ್ಲಿನಾಥ ದೇವಾಳಯಕ್ಕೆ ಮೂರು ಜಾವಿ ದೇವರಿಗೆ ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ. ಇನ್ನೊಂದು ಶಾಸನವು ರಾಯಸೆಟ್ಟಿ ಬಿರುದಿನ ಗುಬ್ಬಿಯ ಕಲ್ಲಯೆನಿಂದ ಕದಂಬೇಶ್ವರ ದೇವಾಲಯದ ಸ್ಥಾನಚಾರ್ಯ ಮೂರು ಜಾವಿ ದೇವರಿಗೆ ಸುಂಕದಾನ ನೀಡಿದರೆಂಬ ಮಾಹಿತಿ ಲಭ್ಯವಾಗಿದೆ. ಇಲ್ಲಿ ವಿಜಯನಗರದ ಸದಾಶಿವರರಾಯನ ಶಾಸನಗಳು ಕಂಡುಬರುತ್ತವೆ. ಕದಂಬೇಶ್ವರ ದೇವಾಲಯ ಕ್ರಿ.ಶ. ೧೧-೧೨ನೇ ಶತಮಾನದಲ್ಲಿ ನಿರ್ಮಾಣವಾಗಿತ್ತೆಂದು ಶಾಸನಗಳಿಂದ ತಿಳಿದು ಬರುತ್ತದೆ.

ಸಂ – ೨೦

ಹೆಸರು – ಸೋಮೇಶ್ವರ ದೇವಾಲಯ

ಗ್ರಾಮ – ಅಬ್ಬಲೂರು

ತಾಲೂಕು – ಹಿರೇಕೆರೂರು

ಕಾಲಮಾನ – ಕ್ರಿ.ಶ. ಸುಮಾರು ೧೧–೧೨ ನೇ ಶತಮಾನ

ಈ ದೇವಾಲಯವು ಮೂರು ಗರ್ಭಗೃಹ, ಅಂತರಾಳ ಮತ್ತು ನವರಂಗಗಳನ್ನು ಹೊಂದಿದೆ. ನವರಂಗಕ್ಕೆ ಹೊಂದಿಕೊಂಡಂತೆ ಕಕ್ಷಾಸನವಿರುವ ಸಭಾಮಂಟಪವಿದೆ. ಸಭಾಮಂಟಪಕ್ಕೆ ಮೂರು ದಿಕ್ಕುಗಳಿಂದ ಪ್ರವೇಶದ್ವಾರಗಳಿವೆ. ನವರಂಗದ ಹೊರಭಾಗದ ಇಕ್ಕೆಲಗಳಲ್ಲಿಯೂ ಜಾಲಂಧ್ರಗಳಿದ್ದು ಅದರ ಪಟ್ಟಿಕೆಗಳಲ್ಲಿ ಏಕಾಂತರಾಮಯ್ಯನ ಪವಾಡ ಮತ್ತು ಅವನ ಜೀವನದ ಘಟನಾವಳಿಗಳನ್ನು ತಿಳಿಸುವ ಉಬ್ಬುಶಿಲ್ಪಗಳನ್ನು ಚಿತ್ರಿಸಲಾಗಿದೆ. ಗರ್ಭಗೃಹದ ಬಾಗಿಲುವಾಡದ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಈ ದೇವಾಲಯಕ್ಕೆ ಶಿಥಿಲಾವಸ್ಥೆಯಲ್ಲಿರುವ ಇಟ್ಟಿಗೆಯ ಏಳು ತಲಗಳ ಕದಂಬ – ನಾಗರ ಶಿಖರವಿದೆ. ದೇವಾಲಯದ ಮುಂದೆ ಎತ್ತರದ ಪ್ರವೇಶ ಮಂಟಪವಿದ್ದು ಅದರಿಂದ ಗುಡಿಯನ್ನು ಪ್ರವೇಶಿಸಬಹುದು. ಗರ್ಭಗೃಹದಲ್ಲಿ ಸುಮಾರು ೪ ಅಡಿ ಎತ್ತರವಿರುವ ಸೋಮೇಶ್ವರ ಲಿಂಗವಿದೆ. ಲಿಂಗದ ಎದುರಿಗೆ ಶುಕನಾಸಿಯ ಭಾಗದಲ್ಲಿ ನಂದಿ ಶಿಲ್ಪವನ್ನು ಇಡಲಾಗಿದೆ. ಅಕ್ಕ ಪಕ್ಕದ ಗರ್ಭಗೃಹಗಳು ಮುಖ್ಯ ಗರ್ಭಗೃಹಕ್ಕಿಂತ ಚಿಕ್ಕದಾಗಿದ್ದು ಮುಖ್ಯ ಗರ್ಭಗೃಹವನ್ನು ಹೋಲುತ್ತವೆ. ಇಲ್ಲಿಯೂ ಶಿವಲಿಂಗಗಳಿದ್ದು ಎದುರಿಗೆ ನಂದಿಶಿಲ್ಪವನ್ನು ಹೊಂದಿವೆ. ಸಭಾಮಂಟಪದ ಜಾಲಂಧ್ರದ ಪಟ್ಟಿಕೆಗಳಲ್ಲಿ ಏಕಾಂತರಾಮಯ್ಯನ ಜೀವನದ ಘಟನಾವಳಿಗಳನ್ನು ಚಿತ್ರಿಸಲಾಗಿದೆ. ಅಲ್ಲಿರುವ ಶಾಸನಗಳು ಏಕಾಂತರಾಮಯ್ಯನನ್ನು ಕುರಿತು ಉಲ್ಲೇಖಿಸಿವೆ. ಕ್ರಿ.ಶ. ೧೨೦೦ ಅಬ್ಬಲೂರು ಶಾಸನದಲ್ಲಿ ಏಕಾಂತರಾಮಯ್ಯ ಜೈನರೊಂದಿಗೆ ವಾದಕ್ಕೆ ನಿಂತು ಶಿರಸ್ಸು ಪವಾಡ ಮೆರೆದ ಘಟನೆ. ಇಲ್ಲಿ ಬೇರೆ ಶರಣರ ಹೆಸರುಗಳೂ ಇವೆ ಹಾಗೂ ಏಕಾಂತರಾಮಯ್ಯನ ಸಾಹಸ ಮತ್ತು ಜೀವನದ ಕ್ರಮವನ್ನು ಉಲ್ಲೇಖಿಸುತ್ತದೆ.

ಸಂ – ೨೧

ಹೆಸರು – ಈಶ್ವರ ದೇವಾಲಯ

ಗ್ರಾಮ – ಸಾತೇನಹಳ್ಳಿ

ತಾಲೂಕು – ಹಿರೇಕೆರೂರು

ಕಾಲಮಾನ – ಕ್ರಿ.ಶ. ಸುಮಾರು ೧೨ ನೇ ಶತಮಾನ

ಗರ್ಭಗೃಹ, ಅಂತರಾಳ ಹಾಗೂ ನವರಂಗಗಳನ್ನು ಈ ದೇವಾಲಯ ಹೊಂದಿದೆ. ಗರ್ಭಗೃಹದ ಬಾಗಿಲ ಲಲಾಟ ಬಿಂಬದಲ್ಲಿ ಸಣ್ಣ. ಐದು ಶಿಖರಗಳ ಚಿತ್ರಣದ ದ್ವಾರಬಂಧವಿದೆ. ಅಂತರಾಳದ ಬಾಗಿಲುವಾಡದ ಲಲಾಟಬಿಂಬದಲ್ಲಿ ತ್ರಿಮೂರ್ತಿಗಳ ಉಬ್ಬು ಶಿಲ್ಪಗಳಿವೆ.

ನವರಂಗದಲ್ಲಿ ತಿರುಗಣೆಯಿಂದ ರಚಿತವಾದ ನಾಲ್ಕು ಕಂಬಗಳು ಭುವನೇಶ್ವರಿಯನ್ನು ಹೊತ್ತಿವೆ. ಒಳಭಿತ್ತಿಯಲ್ಲಿ ದೇವಕೋಷ್ಠಗಳಿವೆ. ನವರಂಗವು ಮೂರು ಕಡೆಗಳಿಂದ ತೆರೆದಿದ್ದು ಅಲ್ಲಿಂದ ಗುಡಿಯನ್ನು ಪ್ರವೇಶಿಸಬಹುದು. ಕಕ್ಷಾಸನದಲ್ಲಿರುವ ಸಣ್ಣ ಕಂಬಗಳು ಚಾವಣಿಯನ್ನು ಹೊತ್ತಿವೆ. ಚಾವಣಿಯ ಒಳಭಾಗದಲ್ಲಿ ಮರದ ಪಟ್ಟಿಕೆಗಳಂತೆ ಮೂಡಿಸಲಾಗಿದೆ. ದೇವಾಲಯಕ್ಕೆ ಕದಂಬ – ನಾಗರ ಶೈಲಿಯ ಶಿಖರವಿದೆ. ಶಿಖರ ಭಾಗದಲ್ಲಿ ಹೊಯ್ಸಳರ ಲಾಂಛನವಿದೆ. ಇದೇ ರೀತಿ ರಟ್ಟಿಹಳ್ಳಿಯ ಕದಂಬೇಶ್ವರ ದೇವಾಲಯದ ಸುಖನಾಸಿಯ ಮೇಲೆಯೂ ಇದೆ. ಇಲ್ಲಿಯ ಗ್ರಾಮದ ಜನರು ಈ ದೇವಾಲಯವನ್ನು ಹರಿಹರೇಶ್ವರ ದೇವಾಲಯವೆಂದು ಕರೆಯುತ್ತಾರೆ. ಕ್ರಿ.ಶ. ೧೨೦೪ರ ಸಾತೇನಹಳ್ಳಿ ಶಾಸನದಲ್ಲಿ ಹೊಯ್ಸಳರ ಎರಡನೆಯ ಬಲ್ಲಾಳನ ಆಳ್ವಿಕೆಯು ಒಳಪಟ್ಟಿದೆ. ಕಾಮಿಸೆಟ್ಟಿ ವೆಣ್ಣಲೇಸೆಟ್ಟಿಯು ನಾಗರಖಂಡ ೭೦ರ ಸಾತೇನಹಳ್ಳಿಯಲ್ಲಿ ಹರಿಹರೇಶ್ವರ ದೇವಾಲಯವನ್ನು ನಿರ್ಮಿಸಿ ದಾನ ಮಾಡಿದ ವಿಷಯವನ್ನು ಉಲ್ಲೇಖಿಸುತ್ತದೆ. ದೇವಸ್ಥಾನದ ಬಲಗಡೆ ಸುಮಾರು ಆರು ಅಡಿ ಶಾಸನವಿದೆ[೧೨].

## ವೈಷ್ಣವ ದೇವಾಲಯಗಳು:

ಭಾರತದ ಪ್ರಮುಖ ಧರ್ಮಗಳಲ್ಲಿ ವೈಷ್ಣವ ಧರ್ಮವು ಒಂದಾಗಿದೆ. ವೈಷ್ಣವ ಧರ್ಮವೆಂದರೆ ಒಂದು ವಿಶಿಷ್ಠ ದೈವಾಸ್ತಿಕ್ಯ ಕಯ ಧರ್ಮ. ಅಲ್ಲಿ ವಿಷ್ಣುವಿನ ಪೂಜೆಯು ಪ್ರಮುಖವಾಗಿರುತ್ತದೆ. ಇವರು ವಿಷ್ಣುವೇ ಸರ್ವತ್ತೋಮನೆಂದು ನಂಬಿ ಅವನನ್ನೇ ಆರಾಧಿಸುವ ಪಂಥದವರಾಗಿದ್ದಾರೆ. ಇವರಲ್ಲಿ ಪ್ರಮುಖವಾಗಿ ಆರು ಪಂಗಡಗಳಿವೆ.

೧. ಶ್ರೀರಾಮಾನುಜ ಸಂಪ್ರದಾಯದ ಶ್ರೀವೈಷ್ಣವ.
೨. ಶ್ರೀ ಮಧ್ವಾಚಾರ್ಯರ ಸಂಪ್ರದಾಯದ ಸದ್ವೈಷ್ಣವರು (ಬ್ರಹ್ಮತಂತ್ರ ವೈಷ್ಣವರು, ಹರಿವೈಷ್ಣವರು).
೩. ಶ್ರೀ ಚೈತನ್ಯಸ್ವಾಮಿ ಸಂಪ್ರದಾಯದ ಶ್ರೀ ಚೈತನ್ಯದ ವೈಷ್ಣವರು
೪. ಶ್ರೀ ರಾಮನಂದ ಸಂಪ್ರದಾಯದ ಶ್ರೀ ರಾಮನಂದಿ ವೈಷ್ಣವರು
೫. ಶ್ರೀ ನಿಂಬಾರ್ಕ ಸಂಪ್ರದಾಯದ ನಿಂಬಾರ್ಕ ವೈಷ್ಣವರು.
೬. ವಲ್ಲಭವಾಯಿ ಸಂಪ್ರದಾಯದ ರಾಧವಲ್ಲಭ ವೈಷ್ಣವರು[೧೩].

ಈ ಎಲ್ಲಾ ಪಂಥದವರು ವಿಷ್ಣುವಿನ ನಿರೂಪಣ ಶಿಲ್ಪಗಳನ್ನು ಪೂಜಿಸುತ್ತಿದ್ದರು. ವಿಷ್ಣುವಿನ ನಿರೂಪಣ ಶಿಲ್ಪಗಳ ಉಗಮವು ಕಾನಾನಂತರದಲ್ಲಿ ಪ್ರಬುದ್ಧಮಾನವಾಗಿ ಬೆಳೆದು ಬಂದಿತು. ಇಲ್ಲಿ ಕೇಶವ, ನರಸಿಂಹ ಸೂರ್ಯನ ಆರಾಧನೆ ನಾರಾಯಣನ ಕಲ್ಪನೆಯ ಜೊತೆಗೆ ಕೃಷ್ಣ ವಾಸುದೇವ ಅನಂತರದಲ್ಲಿ ರಾಮನ ಆರಾಧನೆ ಪ್ರೇರಣೆ ನೀಡಲಾಯಿತು. ವೈಷ್ಣವ ಧರ್ಮದ ಪ್ರಾಚೀನತೆ ಭಾರತದ ಪವಿತ್ರಧರ್ಮ ಗ್ರಂಥಗಳಲ್ಲಿ ಉಲ್ಲೇಖವಾಗಿರುವುದನ್ನು ಕಾಣಬಹುದು.

ಋಗ್ವೇದದಲ್ಲಿ ವಿಷ್ಣುವು ಒಬ್ಬ ದೇವತೆಯಾಗಿ ಕಾಣಿಸಿಕೊಳ್ಳುತ್ತಾನೆ. ಆದರೆ ವೈದಿಕ ಸೂತ್ರಗಳಲ್ಲಿ ಇಂದ್ರನನ್ನೇ ಹೆಚ್ಚಾಗಿ ಸ್ತುತಿಸಲಾಗುತ್ತದೆ[೧೪].

**ಸಂ** – ೧

**ಹೆಸರು** – ಲಕ್ಷ್ಮೀನರಸಿಂಹ ದೇವಾಲಯ

**ಗ್ರಾಮ** – ಕಾಗಿನೆಲೆ

**ತಾಲೂಕು** – ಬ್ಯಾಡಗಿ ತಾಲೂಕು

**ಕಾಲಮಾನ** – ಕ್ರಿ.ಶ. ಸುಮಾರು ೧೨-೧೩ನೇ ಶತಮಾನ

ಲಕ್ಷ್ಮೀನರಸಿಂಹ ದೇವಾಲಯವು ಗರ್ಭಗೃಹ, ಅಂತರಾಳ, ನವರಂಗ ಮತ್ತು ಮುಖಮಂಟಪಗಳಿಂದ ಕೂಡಿದೆ. ನವರಂಗದಲ್ಲಿನ ನಾಲ್ಕು ಕಂಬಗಳು ಭುವನೇಶ್ವರಿಯನ್ನು ಹೊತ್ತಿವೆ. ಗುಡಿಗೆ ದಕ್ಷಿಣ ಮತ್ತು ಪಶ್ಚಿಮದಿಂದ ಎರಡು ಪ್ರವೇಶ ದ್ವಾರಗಳಿವೆ. ನವರಂಗದ ಮುಂದೆ ಮುಖಮಂಟಪವಿದ್ದು ಅದರಲ್ಲಿ ಆರು ಕಂಬಗಳಿವೆ. ಈ ಭಾಗದಲ್ಲಿ ಕಕ್ಷಾಸನವಿದೆ. ಅಂತರಾಳದ ಬಾಗಿಲ ಕೆಳಭಾಗದಲ್ಲಿ, ಇಕ್ಕೆಲಗಳಲಿ ಹನುಮಂತ ಮತ್ತು ಗರುಡನ ಉಬ್ಬು ಶಿಲ್ಪಗಳನ್ನು ಬಿಡಿಸಲಾಗಿದೆ.

ದೇವಾಲಯಕ್ಕೆ ಕದಂಬ – ನಾಗರ ಶೈಲಿಯ ಗಾರೆಯ ಶಿಖರವಿದ್ದು ಆಲಯದ ಮುಂಭಾಗದಲ್ಲಿ ಧ್ವಜಸ್ತಂಭವಿದೆ. ಅದರ ಕೆಳಗೆ ಒಂದು ಗುಂಡುರಚಿಸಿ ಒಳಗೆ ಹನುಮಂತನ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದಲ್ಲಿ ಲಕ್ಷ್ಮೀನರಸಿಂಹನ ಮೂರ್ತಿಶಿಲ್ಪವಿದೆ. ದೇವಾಲಯದ ಆವರಣದಲ್ಲಿ, ಲಕ್ಷ್ಮೀನರಸಿಂಹ ಗುಡಿಯ ಬಲಬದಿಗೆ ಕನಕದಾಸರ ಇಷ್ಟದೇವತೆಯಾದ ಆದಿಕೇಶವನ ಗುಡಿಯಿದೆ. ಈ ಗುಡಿಯಲ್ಲಿ ಅಷ್ಟಕೋನಾಕೃತಿಯ ಗರ್ಭಗೃಹ. ನವರಂಗ ಮತ್ತು ಮಹಾಮಂಟಪಗಳಿವೆ. ಗರ್ಭಗೃಹವನ್ನು ಪ್ರದಕ್ಷಿಣೆ ಮಾಡಲು ಪ್ರದಕ್ಷಿಣಾ ಪಥವನ್ನು ರಚಿಸಲಾಗಿದೆ. ನವರಂಗದಲ್ಲಿ ನಾಲ್ಕು ಕಂಬಗಳಿವೆ. ಗರ್ಭಗೃಹದಲ್ಲಿ ಆದಿಕೇಶವನ ಮೂರ್ತಿಶಿಲ್ಪವಿದೆ. ಮಹಾಮಂಟಪದಲ್ಲಿ ಇತ್ತೀಚಿನ ಕಾಲದ ಕನಕದಾಸರ ಶಿಲ್ಪವಿದೆ. ಈ ಮಂಟಪವು ವಿಜಯನಗರೋತ್ತರ ಕಾಲದ್ದಾಗಿದೆ[೧೫]

**ಸಂ** – ೨

**ಹೆಸರು** – ನಾರಾಯಣಸ್ವಾಮಿ ದೇವಾಲಯ

**ಗ್ರಾಮ** – ಹೊನ್ನತಿ (ಹಳೆಯ)

**ತಾಲೂಕು** – ರಾಣೇಬೆನ್ನೂರ

**ಕಾಲಮಾನ** – ಕ್ರಿ.ಶ. ೧೨ನೇ ಶತಮಾನ

ದೇವಾಲಯದಲ್ಲಿ ಗರ್ಭಗೃಹ, ಅಂತರಾಳ ಮತ್ತು ನವರಂಗಗಳಿವೆ. ದ್ವಾರಗಳು ಸರಳ ರಚನೆಯವು. ಅಂತರಾಳದ್ವಾರದಲ್ಲಿ ಜಾಲಾಂಧ್ರಗಳುಂಟು. ವಿಜಯನಗರೋತ್ತರ ಕಾಲದಲ್ಲಿ ನವರಂಗ ಜೀರ್ಣೋದ್ಧಾರಗೊಂಡಿದೆ. ಪೂರ್ವಭಾಗವನ್ನು ವಿಸ್ತರಿಸಿ, ದಕ್ಷಿಣ ಭಿತ್ತಿಯಲ್ಲಿ ಬಾಗಿಲನ್ನು ಅಳವಡಿಸಲಾಗಿದೆ. ಗರ್ಭಗೃಹ ಭಿತ್ತಿ ಅಪಾಯದ ಸ್ಥಿತಿಯಲ್ಲಿದೆ. ಗರ್ಭಗೃಹದಲ್ಲಿ ನಾರಾಯಣ ಶಿಲ್ಪವು ಸೂಕ್ಷ್ಮಕತೆತ್ತನೆ ಅಲಂಕರಣಗಳಿಂದ ಕೂಡಿ ನಯನ ಮನೋಹರವಾಗಿದೆ. ನವರಂಗದಲ್ಲಿರುವ ಅನಂತಶಯನ ಶಿಲ್ಪವು ಸಹ ಗಮನಾರ್ಹವಾದುದು. ಈ ಎರಡೂ ಶಿಲ್ಪಗಳು ಹೊಯ್ಸಳ ಶೈಲಿಯಲ್ಲೆ ರಚನೆಗೊಂಡಂತೆ ಕಾಣುತ್ತವೆ. ಕ್ರಿ.ಶ. ೧೧೯೮ರ ಹೊನ್ನತಿ ಶಾಸನದಲ್ಲಿ ಹೊಯ್ಸಳ ಎರಡನೇ ಬಲ್ಲಾಳ ಆಳ್ವಿಕೆಯ ಕಾಲದಲ್ಲಿ ರಾಜಾಧ್ಯಕ್ಷ ದಾವಣ್ಣನಿಂದ ಕೇಶವ ದೇವಾಲಯಕ್ಕೆ ಎಣ್ಣೆಗಾಣ ಮತ್ತು ನಿವೇಶನ ದಾನ ಉಲ್ಲೇಖಿಸುತ್ತದೆ.

| | | |
|---|---|---|
| **ಸಂ** | – | ೩ |
| **ಹೆಸರು** | – | ಮಾರುತಿ ದೇವಾಲಯ |
| **ಗ್ರಾಮ** | – | ಮಂತ್ರವಾಡಿ |
| **ತಾಲೂಕು** | – | ಸವಣೂರು |
| **ಕಾಲಮಾನ** | – | ಕ್ರಿ.ಶ. ಸು. ೧೦ – ೧೧ ನೇ ಶತಮಾನ |

ನವೀನ ದೇವಾಲಯದ ಎದುರುಗಡೆಗೆ ರಾಷ್ಟ್ರಕೂಟ ಹಾಗೂ ಯಾದವ ಸಿಂಘಣರ ಎರಡು ಶಾಸನಗಳು ದೊರಕಿದ್ದು, ಇವೆರಡು ದಾನ ಶಾಸನಗಳಾಗಿವೆ. ಚತುರ್ಮುಖ ಬ್ರಹ್ಮನ ಬಿಡಿ ಶಿಲ್ಪ ದೇವಾಲಯದ ಆವರಣದಲ್ಲಿದೆ. ಕ್ರಿ.ಶ. ೮೬೫ರ ಮಂತ್ರವಾಡಿ ಶಾಸನದಲ್ಲಿ ಎಳ್ವುಣುಸೆಯ ನಾಲ್ವತ್ತು ಮಹಾಜನರಾದಿಗಳಿಂದ ಮೂಲಸ್ಥಾನ ದೇವರಿಗಾಗಿ ಗೋಕರ್ಣ ಪಂಡಿತ ಭಟಾರರಿಗೆ ಭೂದಾನ ಮಾಡಿದ ಉಲ್ಲೇಖವಿದೆ. ಮತ್ತೊಂದು ಶಾಸನದಲ್ಲಿ ಹೊನ್ನಬೊಮ್ಮಿಶೆಟ್ಟಿಯಿಂದ ಸೊನ್ನಲಿಗೆಯ ಕಪಿಲಸಿದ್ಧ ಮಲ್ಲಿಕಾರ್ಜುನ ದೇವರಿಗೆ ಮಂತ್ರವಾಡಿ ಗ್ರಾಮದಾನ ಮಾಹಿತಿ ಲಭ್ಯವಾಗಿದೆ[೧೬].

| | | |
|---|---|---|
| **ಸಂ** | – | ೪ |
| **ಹೆಸರು** | – | ಶಂಕರ ದೇವಾಲಯ |
| **ಗ್ರಾಮ** | – | ಕರಗುದರಿ |
| **ತಾಲೂಕು** | – | ಹಾನಗಲ್ಲು ತಾಲೂಕು |
| **ಕಾಲಮಾನ** | – | ಕ್ರಿ.ಶ. ೧೧–೧೨ನೇ ಶತಮಾನ |

ಹಾನಗಲ್ಲಿನಿಂದ ಉತ್ತರಕ್ಕೆ ಐದು ಕಿ.ಮೀ. ದೂರದಲ್ಲಿರುವ ಈ ಗ್ರಾಮದಲ್ಲಿ ಕೆರೆಯ ಹತ್ತಿರ ಆಂಜನೇಯ ದೇವಾಲಯವಿರುವ ಸ್ಥಳದಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯವೊಂದರ ವಾಸ್ತು ಅವಶೇಷಗಳು ಕಂಡು ಬರುತ್ತವೆ. ಕ್ರಿ.ಶ. ೧೧೦೮–೦೯ರ

ಕರಕುದರಿ ಶಾಸನದಲ್ಲಿ ಮಹಾಮಂಡಲೇಶ್ವರನ ತೈಲಪ II ಹಾಗೂ ಆತನ ರಾಣಿ ಬಾಚಲದೇವ ಕರುಗುದರೆಯಲ್ಲಿ ದಂಡನಾಯಕಿತಿ ಮಲ್ಲಯಕ್ಕ ಪ್ರತಿಷ್ಠೆ ಮಾಡಿಸಿದ ಶಂಕರದೇವ, ಕೇಶವದೇವ ಮತ್ತು ಭಾಸ್ಕರದೇವರ ದೇವಾಲಯಗಳಿಗೆ ಭೂದಾನ ಮಾಡಿದನ್ನು ಉಲ್ಲೇಖಿಸುತ್ತದೆ.

**ಸಂ** – ೫

**ಹೆಸರು** – ಬನಶಂಕರಿ ದೇವಾಲಯ

**ಗ್ರಾಮ** – ದೇವಿ ಹೊಸೂರು

**ತಾಲೂಕು** – ಹಾವೇರಿ

**ಕಾಲಮಾನ** – ಕ್ರಿ.ಶ. ಸುಮಾರು ೧೦-೧೨ನೇ ಶತಮಾನ

ಬನಶಂಕರಿ ದೇವಾಲಯವು ಗರ್ಭಗೃಹ, ಅಂತರಾಳ, ನವರಂಗ ಹಾಗೂ ಮುಖಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಗಣೇಶನ ವಿಗ್ರಹವಿದೆ. ಕಾರಣ ಇಲ್ಲಿನ ಮೂಲ ವಿಗ್ರಹವು ನಾಶವಾಗಿರುವುದರಿಂದ ಲಿಂಗ ಪೀಠದ ಮೇಲೆಯೇ ಗಣೇಶನನ್ನು ಸ್ಥಾಪಿಸಿದ್ದಾರೆ. ಬರಿದಾದ ಅಂತರಾಳವು, ಎರಡೂ ಬದಿಯಲ್ಲಿ ಜಾಲಂಧ್ರಗಳನ್ನು ಹೊಂದಿದೆ. ನವರಂಗವು ವಿಶಾಲವಾಗಿದ್ದು, ನಾಲ್ಕು ಕಂಬಗಳನ್ನು ಒಳಗೊಂಡಿದೆ. ಈ ಕಂಬಗಳು ಕೆಳಭಾಗದಲ್ಲಿ ಚೌಕಾಕಾರವಾಗಿದ್ದರೆ, ಮಧ್ಯ ಹಾಗೂ ಮೇಲ್ಭಾಗವು ವೃತ್ತಾಕಾರವಾಗಿವೆ. ಇದಕ್ಕೆ ಸಾದಾ ಬಾಗಿಲವಾಡದ ರಚನೆಯಿದೆ. ದೇವಾಲಯದ ಮುಖ ಮಂಟಪದಲ್ಲಿ ಕಲ್ಯಾಣ ಚಾಲುಕ್ಯ ಶಾಸನಗಳನ್ನು ಇಡಲಾಗಿದೆ. ಈ ಶಾಸನಗಳ ಮುಂಭಾಗದಲ್ಲಿ ಬಲಿ ಪೀಠವಿದೆ. ಎಲ್ಲದಕ್ಕೂ ವಿಶೇಷ ಎಂಬಂತೆ ಅಲಂಕೃತವಾದ ಮಕರ ತೋರಣವುಳ್ಳ ಕಂಬಗಳನ್ನು ದೇವಾಲಯದ ಮುಂಭಾಗದಲ್ಲಿ ನಿಲ್ಲಿಸಿದ್ದಾರೆ. ದೇವಾಲಯದ ಸುತ್ತಲೂ ಅನೇಕ ಚಿಕ್ಕಪುಟ್ಟ ಗುಡಿಗಳನ್ನು ಕಟ್ಟಿದ್ದು, ಅವು ಸಹ ಹಾಳಾಗುವ ಸ್ಥಿತಿಯಲ್ಲಿವೆ. ವಿಶಾಲವಾದ ಪ್ರಾಕಾರ ಗೋಡೆಯು ಹಾಳಾಗಿದೆ. ದೇವಾಲಯವನ್ನು ಇಟ್ಟಿಗೆಯಲ್ಲಿ ಕಟ್ಟಿರುವ ಸ್ಪಷ್ಟ ಕುರುಹುಗಳು ಕಂಡುಬರುತ್ತವೆ. ಕ್ಷೀಣಿಸುತ್ತಿರುವ ಶಿಖರವು ಸುಖನಾಸ ಹೊಂದಿದೆ. ಕ್ರಿ.ಶ. ೧೦೬೩ರ ದೇವಿಹೊಸೂರ ಶಾಸನದಲ್ಲಿ ಅಂಘರಕ್ಕ ಇಂದಪಯ್ಯನಾಯಕನು ದೆಯ್ಯದ ಪೊಸವೂರಿನಲ್ಲಿಯ ಮಾಳಜದೇವಿಗೆ ಮಕರ ತೋರಣ ಮಾಡಿದ ಉಲ್ಲೇಖವಿದೆ. ಕ್ರಿ.ಶ. ೧೨೩೫ ರ ಮತ್ತೊಂದು ಶಾಸನದಲ್ಲಿ ಸುಂಕವೆರ್ಗಡೆ ಆಯಿದೇವನಿಂದ ದೇವಿಯ ಹೊಸವೂರಿನ ಅನಾದಿ ಅಗ್ರಹಾರದ ಮಹಾಜನರಿಗೆ ಸುಂಕದಾನ ಉಲ್ಲೇಖಿಸುತ್ತದೆ[೧೭].

**ಸಂ** – ೫

**ಹೆಸರು** – ನರಸಿಂಹ ದೇವಾಲಯ

**ಗ್ರಾಮ** – ನರಸಿಂಹಪುರ

**ತಾಲೂಕು** – ಹಾವೇರಿ

**ಕಾಲಮಾನ** – ಕ್ರಿ.ಶ. ಸುಮಾರು ೧೫-೧೬ನೇ ಶತಮಾನ

ಈ ಪ್ರದೇಶದಲ್ಲಿ ಕಂಡುಬರುವ ನರಸಿಂಹ ದೇವಾಲಯವು ಪ್ರಮುಖವಾದುದು ಆಗಿದೆ. ಈ ದೇವಾಲಯವು ತನ್ನ ರಚನೆಯ ಮೂಲಕ ವಿಶಿಷ್ಟವಾಗಿ ಗುರುತಿಸಿಕೊಂಡಿದೆ ಮತ್ತು ಬೃಹತ್‌ದಾಕಾರದಲ್ಲಿದೆ. ಈ ದೇವಾಲಯ ನಿರ್ಮಾಣ ಕಾರ್ಯದಲ್ಲಿ ಅನೇಕ ಜನರ ಶ್ರಮವಿರುವುದನ್ನು ಸ್ಪಷ್ಟವಾಗಿ ಹೇಳಬಹುದಾಗಿದೆ. ದೇವಾಲಯದ ಪ್ರತಿಯೊಂದು ಶಿಲ್ಪವು ಕೂಡ ಶಿಲ್ಪಿಯ ಕರಕುಶಲತೆಯಿಂದ ನಿರ್ಮಾಣವಾಗಿದೆ. ಅತಿ ಸೂಕ್ಷ್ಮ ಕೆತ್ತನೆಯಿಂದ ನಿರ್ಮಿತಗೊಂಡಿರುವುದು ವಿಶೇಷವಾಗಿದೆ. ಈ ಪ್ರದೇಶದ ನೈಸರ್ಗಿಕ ಸಂಪನ್ಮೂಲಗಳಲ್ಲಿ ಒಂದಾದ ಕಲ್ಲು ಈ ದೇವಸ್ಥಾನದ ನಿರ್ಮಾಣದ ಹಾಸುಹೊಕ್ಕಾಗಿ ನಿರ್ಮಿತಗೊಂಡಿದೆ. ಈ ದೇವಾಲಯ ನಿರ್ಮಾಣಕ್ಕೆ ಅರಸನು ವೈಷ್ಣವ ಪರಂಪರೆಯನ್ನು ಅತಿ ಹೆಚ್ಚಾಗಿ ಪ್ರೀತಿಸುವುದನ್ನು ಗಮನಿಸಬಹುದಾಗಿದೆ. ಈ ದೇವಾಲಯಕ್ಕೆ ಎಲ್ಲಾ ವರ್ಗದ ಜನರು ಆರಾಧಿಸುವುದು ಕಂಡುಬರುತ್ತದೆ. ಈ ಪ್ರದೇಶದಲ್ಲಿ ಕಂಡುಬರುವ ವೈಷ್ಣವ ದೇವಾಲಯಗಳಲ್ಲಿ ನಾಗರ ಶೈಲಿಯ ಶಿಖರ ಭಾಗವನ್ನು ಹೊಂದಿದ ದೇವಾಲಯವಾಗಿದೆ. ಈ ದೇವಾಲಯವನ್ನು ಕುರಿತು ಕ್ರಿ.ಶ. ೧೫೫೭ರ ನರಸಿಂಹಪುರ ಶಾಸನದಲ್ಲಿ ಉಲ್ಲೇಖವಿರುವುದು ಕಂಡು ಬರುತ್ತದೆ. ಹಾಗೆಯೇ ಈ ದೇವಾಲಯವನ್ನು ನಿರ್ಮಿಸಿದ ಚಿಕ್ಕಯಲ್ಲಪ್ಪ ನಾಯಕನು ನರಸಿಂಹ ವಿಗ್ರಹವನ್ನು ಸ್ಥಾಪಿಸಿ ಭೂದಾನ ಮಾಡಿದ ವಿವರಗಳು ಗಮನಿಸಬಹುದಾಗಿದೆ.

| | | |
|---|---|---|
| **ಸಂ** | – | ೭ |
| **ಹೆಸರು** | – | ನಾರಾಯಣ ದೇವರು |
| **ಗ್ರಾಮ** | – | ಸಾತೇನಹಳ್ಳಿ |
| **ತಾಲೂಕು** | – | ಹಿರೇಕೆರೂರು |
| **ಕಾಲಮಾನ** | – | ಕ್ರಿ.ಶ. ಸುಮಾರು ೧೫ನೇ ಶತಮಾನ |

ಈ ದೇವಾಲಯವು ಕ್ರಿ.ಶ. ೧೨ನೇ ಶತಮಾನದಲ್ಲಿ ನಿರ್ಮಾಣವಾಗಿದೆ. ಇದು ಚಾಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿದ್ದು ಆಗಿದೆ. ಈ ದೇವಾಲಯವನ್ನು ಸಾತೇನಹಳ್ಳಿಯಲ್ಲಿ ಕೋಟೆಗೆ ಹೊಂದಿಕೊಂಡಂತೆ ನಿರ್ಮಿಸಲಾಗಿದೆ. ಇದು ವೈಷ್ಣವ ಪರಂಪರೆಯಲ್ಲಿ ನಿರ್ಮಿತವಾದ ದೇವಾಲಯವಾಗಿದೆ. ಇದು ಚಿಕ್ಕದಾಗಿದೆ. ಈ ದೇವಾಲಯಗಳಲ್ಲಿ ನಾರಾಯಣ ಮೂರ್ತಿಯ ಶಿಲ್ಪವು ದಶವತಾರಗಳಿಂದ ಕೂಡಿದೆ. ಈ ಶಿಲ್ಪವು ಬಹು ಸೂಕ್ಷ್ಮ ಕೆತ್ತನೆಗಳಿಂದ ನಿರ್ಮಾಣಗೊಂಡಿದೆ. ಶಿಲ್ಪಿಯ ಚಾಕಚಾಕತ್ಯೆಯನ್ನು ಹೊಗಳಬೇಕಾಗಿದೆ. ವಿಷ್ಣುವಿನ ದಶವತಾರದ ಕುರುಹುವಾಗಿ ಈ ನಾರಾಯಣ ದೇವಾಲಯ ಕಂಡುಬರುತ್ತದೆ. ಅಲ್ಲದೆ ದೇವಿ ಮತ್ತು ಮಹಿಷಮರ್ಧನ ಮೂರ್ತಿ ಶಿಲ್ಪಗಳು ಕೂಡ ಸ್ಥಾನ ಪಡೆದಿರುವುದು ಕಂಡುಬರುತ್ತದೆ. ಈ ದೇವಾಲಯದಲ್ಲಿ ದೇವಗಿರಿ ಯಾದವ ಅರಸ ರಾಮಚಂದ್ರನ ಕಾಲದಲ್ಲಿನ ೧೨೯೭ರ ಶಾಸನ ಕಂಡುಬರುತ್ತದೆ. ಈ ಶಾಸನ ಗಮನಿಸಿದಾಗ ವರ್ತಕರ ಪ್ರಭಾವ ಹೆಚ್ಚಾಗಿರುವುದನ್ನು ಮತ್ತು ಅವರ ವೈಷ್ಣವ ಪರಂಪರೆಯ ನಜುಕುತನವನ್ನು ಇಲ್ಲಿ ಕಾಣಬಹುದಾಗಿದೆ.

ವರ್ತಕರುಗಳಲ್ಲಿ ಅನೇಕ ಬಗೆಯ ಪಂಗಡಗಳು ಕಂಡುಬರುತ್ತವೆ. ಅವುಗಳಲ್ಲಿ ಶೆಟ್ಟಿಯೂ ಒಂದು. ಈ ಶೆಟ್ಟಿ ವರ್ತಕ ಸಮುದಾಯದಲ್ಲಿ ಆರ್ಥಿಕವಾಗಿ ಪ್ರಾಬಲ್ಯವನ್ನು ಸಾಧಿಸಿ ದೇವಾಲಯ ನಿರ್ಮಾಣ ದಾನದತ್ತಿಗಳನ್ನು ನೀಡುವಂತ ಸಾಮರ್ಥ್ಯ ಹೊಂದಿರುವುದನ್ನು ಈ ಶಾಸನದಲ್ಲಿ ಗಮನಿಸಬಹುದಾಗಿದೆ. ಈ ದೇವಾಲಯದಲ್ಲಿ ಶಂಕರ ನಾರಾಯಣ ದೇವರನ್ನು ನಾಗರಖಂಡದ ನಾಡ ಪ್ರಭುವಾದ ಬಮ್ಮಶೆಟ್ಟಿ ಎಂಬುವನು ಪರತಿಷ್ಠಾಪನೆ ಮಾಡಿರುವುದು ಕಂಡುಬರುತ್ತದೆ. ಹಾಗೆಯೇ ಈ ದೇವಾಲಯಕ್ಕೆ ದಾನವನ್ನು ಕೂಡ ಮಾಡಿದ ಉಲ್ಲೇಖ ಕಂಡುಬರುತ್ತದೆ.

ಈ ವಿಚಾರವನ್ನು ಗಮನಿಸಿದಾಗ ಇಲ್ಲಿ ವರ್ತಕ ಸಮುದಾಯದ ಬಮ್ಮಶೆಟ್ಟಿಯು ಒಬ್ಬ ಆಡಳಿತಗಾರನಾಗಿದ್ದನೆಂದು ಮತ್ತು ಅರಸನ ಸಮೀಪವರ್ತಿಯಾಗಿದ್ದನೆಯಂದು ಈ ದೇವಾಲಯದ ಶಾಸನದಿಂದ ತಿಳಿದುಬರುತ್ತದೆ.

ಪ್ರಾಚೀನ ಭಾರತದ ಸಂದರ್ಭದಲ್ಲಿ ಹುಟ್ಟಿಕೊಂಡ ಅನೇಕ ಧರ್ಮಗಳಲ್ಲಿ ಧಾರ್ಮಿಕ ಸಂಘರ್ಷವನ್ನು ನಾವು ಚರಿತ್ರೆ ಬರವಣಿಗೆಗಳ ಮೂಲಕ ತಿಳಿಯಲಾಗಿದೆ. ಹೀಗೆ ಇದ್ದಾಗಿಯೂ ಕೂಡ ಆ ಧರ್ಮಗಳು ಹೊಂದಿರುವ ಮೂಲಗುರಿ ಮೋಕ್ಷ ಸಾಧನವಾಗಿದೆ. ಈ ಮೋಕ್ಷಕ್ಕಾಗಿ ಅನೇಕ ಧರ್ಮಗಳು ತಮ್ಮದೇ ಅದ ತತ್ವ ಸಿದ್ಧಾಂತಗಳ ಮೂಲಕ ಪ್ರಯತ್ನಿಸಿರುವುದು ಧಾರ್ಮಿಕ ಬರವಣಿಗೆಗಳಿಂದ ತಿಳಿದು ಬರುತ್ತದೆ. ಅಲ್ಲದೆ ಅವುಗಳಲ್ಲಿ ಒಂದಾದ ವೈಷ್ಣವ ಧರ್ಮವು ತನ್ನ ಮೋಕ್ಷ ಸಾಧನೆಗಾಗಿ ಅನುಸರಿಸಿದ ಮಾರ್ಗ ಭಕ್ತಿಮಾರ್ಗವಾಗಿದೆ. ಇದಕ್ಕೆ ದಾಸ ಸಾಹಿತ್ಯವೇ ಸಾಕ್ಷಿಯಾಗಿದೆ. ಈ ತರದ ಭಕ್ತಿ ಮಾರ್ಗದ ಮೂಲಕ ಜನಸಾಮಾನ್ಯ ಮನಸೂರೆಗೊಳ್ಳುವ ಮೂಲಕ ಜನಸಾಮಾನ್ಯರ ಆರಾಧನ ಧರ್ಮವಾಗಿ ವೈಷ್ಣವ ಧರ್ಮವು ಗುರುತಿಸಿಕೊಂಡಿದೆ.

## ಜೈನ ಬಸದಿಗಳು:

ಜೈನ ಧರ್ಮವು ಪ್ರಾಚೀನ ಕರ್ನಾಟಕದ ಧರ್ಮಗಳಲ್ಲಿ ಪ್ರಬಲ ಧರ್ಮವಾಗಿದ್ದು, ಇದು ಕ್ರಿಸ್ತಪೂರ್ವದಲ್ಲಿ ಉತ್ತರ ಭಾರತದಿಂದ ಕರ್ನಾಟಕಕ್ಕೆ ಬಂದು ಒಂದು ಹೊಸ ಪಂಥವನ್ನು ನಿರ್ಮಿಸಿತು[೧೮] ಹಾಗೂ ಇದು ಸುಮಾರು ಒಂದು ಸಾವಿರ ವರ್ಷಗಳವರೆಗೆ ಒಂದು ಪ್ರಬಲ ಪಂಥವಾಗಿ ಬೆಳವಣಿಗೆಗೆ ಬಂದಿತು[೧೯]. ದಕ್ಷಿಣ ಭಾರತದ ಮೈಸೂರು ಪ್ರದೇಶದಲ್ಲಿ ಬೇರೂರಿ ಶ್ರವಣಬೆಳಗೊಳಗವನ್ನು ಕೇಂದ್ರ ಸ್ಥಾನವಾಗಿಟ್ಟುಕೊಂಡು ಬೆಳವಣಿಗೆ ಹೊಂದಿದ ಜೈನರು ವಿಸ್ತಾರ ಮತ್ತು ವೈವಿಧ್ಯಮಯವಾದ ಭಾರತೀಯ ವಾಸ್ತುಶಿಲ್ಪಗಳಲ್ಲಿ ಜೈನದ ವಾಸ್ತುಶಿಲ್ಪಗಳು ಹಾಸುಹೊಕ್ಕಾಗಿ ಬೆರೆತು ಅದರ ಏಳು – ಬೀಳುಗಳಲ್ಲಿ ಪಾಲ್ಗೊಂಡು ವ್ಯಾಪಕವಾಗಿ ಬೆಳೆದು ಬಂದು ಭಾರತೀಯ ಕಲಾವೈಭವಕ್ಕೆ ಮಹತ್ತರವಾದ ಕಾಣಿಕೆಯನ್ನು ನೀಡಿವೆ[೨೦].

ಸಂ – ೧

ಹೆಸರು – ಪಾರ್ಶ್ವನಾಥ ಬಸದಿ

ಗ್ರಾಮ – ಅರಟಾಳ

ತಾಲೂಕು – ಶಿಗ್ಗಾವಿ

ಕಾಲಮಾನ – ಕ್ರಿ.ಶ. ಸುಮಾರು ೧೨ನೇ ಶತಮಾನ

ಹಾವೇರಿ ಜಿಲ್ಲೆಯ ಶಿಗ್ಗಾವಿ ತಾಲೂಕಿನ ಅರಟಾಳ ಗ್ರಾಮದ ಊರಿನಲ್ಲಿ ಪಶ್ಚಿಮಕ್ಕೆ ಪಾರ್ಶ್ವನಾಥ ಬಸದಿ ಇದೆ. ಗರ್ಭಗೃಹ, ಅಂತರಾಳ ಮತ್ತು ನವರಂಗವನ್ನು ಹೊಂದಿರುವ ಬಸದಿ ಜೀರ್ಣೋದ್ಧಾರಗೊಂಡಿದೆ. ನವರಂಗದಲ್ಲಿರುವ ಕಂಬಗಳು ಅಷ್ಟಮುಖ ರಚನೆಯವು. ಗರ್ಭಗೃಹ ದ್ವಾರದ ಲಾಲಾಟ ಬಿಂಬದಲ್ಲಿ ಜೀನಬಿಂಬದ ಉಬ್ಬುಶಿಲ್ಪವುಂಟು.

ಗರ್ಭಗೃಹದಲ್ಲಿ ಪಾರ್ಶ್ವನಾಥ ಮತ್ತು ನವರಂಗದಲ್ಲಿ ಶಾಂತಿನಾಥ ಪ್ರತಿಮೆಗಳಿವೆ. ಕ್ರಿ.ಶ. ೧೧೪೯ರ ಅರಟಾಳ ಶಾಸನದಲ್ಲಿ ಗಂಗರಬೊಮ್ಮಿಸೆಟ್ಟಿ ಬಸದಿಯನ್ನು ನಿರ್ಮಿಸಿ ದಾನ ಮಾಡಿದನೆಂದು ಶಾಸನ ಉಲ್ಲೇಖಿಸಿದೆ[೨೧].

ಸಂ – ೨

ಹೆಸರು – ಚಂದ್ರನಾಥ ಬಸದಿ

ಗ್ರಾಮ – ಯಳವಟ್ಟಿ

ತಾಲೂಕು – ಹಾನಗಲ್ಲು

ಕಾಲಮಾನ – ಕ್ರಿ.ಶ. ಸುಮಾರು ೧೨–೧೩ನೇ ಶತಮಾನ

ಹಾವೇರಿ ಜಿಲ್ಲೆಯ ಹಾನಗಲ್ಲು ತಾಲೂಕಿನ ಯಳವಟ್ಟಿ ಊರಿನ ಮಧ್ಯ ಚಂದ್ರನಾಥ ಬಸದಿಯಿದೆ. ಇದು ಇತ್ತೀಚೆಗೆ ನವೀಕರಣಗೊಂಡಿದೆ. ಗರ್ಭಗೃಹ, ಅಂತರಾಳ, ನವರಂಗ ಮತ್ತು ಪ್ರವೇಶಮಂಟಪಗಳನ್ನು ಒಳಗೊಂಡಿದೆ. ನವರಂಗದಲ್ಲಿ ದ್ವಾರದ ಲಲಾಟ ಬಿಂಬದಲ್ಲಿ ಜಿನಬಿಂಬನ ಚಿತ್ರವಿದೆ. ಪ್ರವೇಶ ಮಂಟಪದಲ್ಲಿ ಕಕ್ಷಾಸನವಿದೆ. ಅದಿಷ್ಠಾನದ ಮೇಲಿರುವ ಹೊರಬಿತ್ತಿ ಸರಳ ರಚನೆಯದು. ಮೇಲೆ ಕದಂಬ ನಾಗರ ಶೈಲಿಯ ಶಿಖರವಿದ್ದು ಸುಖನಾಸದಿಂದ ಕೂಡಿದೆ. ಮುಂಭಾಗದಲ್ಲಿ ಮಾನಸ್ತಂಭವಿದೆ. ಗರ್ಭಗೃಹದಲ್ಲಿ ಚಂದ್ರನಾಥ ಶಿಲ್ಪವಿದ್ದು, ನವರಂಗದಲ್ಲಿ ಜಿನ ಪ್ರತಿಮೆಗಳಿವೆ. ದೇವಾಲಯ ಹೊರ ಆವರಣದಲ್ಲಿ ನಿಷದಿಕಲ್ಲುಗಳು ಕಾಣುತ್ತೇವೆ[೨೨].

| | | |
|---|---|---|
| **ಸಂ** | – | ೩ |
| **ಹೆಸರು** | – | ವೃಷಭಜಿನೇಂದ್ರ (ಆದಿನಾಥ) |
| **ಗ್ರಾಮ** | – | ನದಿಹರಳಹಳ್ಳಿ (ಗೊಟ್ಟಗಡಿ ಶಾಸನೋಕ್ತನಾಮ) |
| **ತಾಲೂಕು** | – | ರಾಣೇಬೆನ್ನೂರು |
| **ಕಾಲಮಾನ** | – | ಕ್ರಿ.ಶ. ೧೧೭೮ |
| **ದೊರೆ** | – | ಕಲಚೂರಿ ಬಿಜ್ಜಳ |
| **ನಿರ್ಮಾತೃ** | – | ನಾಗಗಾವುಂಡ |

ಜೈನ ಮತ್ತು ಶೈವ ಸಂಸ್ಕೃತಿಗಳಿಗೆ ಆಶ್ರಯ ಕೊಟ್ಟ ಹಾವೇರಿ ಜಿಲ್ಲೆಯ ಪ್ರಮುಖ ಸ್ಥಳಗಳಲ್ಲಿ ರಾಣಿಬೆನ್ನೂರು ತಾಲ್ಲೂಕಿನ ನದಿಹರಳಹಳ್ಳಿಯೂ ಒಂದು. ಊರಿನ ಪೂರ್ವಕ್ಕೆ ಇರುವ ಕಲ್ಲೇಶ್ವರ ದೇವಾಲಯ ಜೈನ ಧರ್ಮದ ಕುರುಹು. ಸೋಮೇಶ್ವರ ದೇವಾಲಯ ಮೂಲತಃ ವೃಷಭಜಿನೇಂದ್ರ ತೀರ್ಥಂಕರರ ಬಸದಿಯಾಗಿತ್ತು. ಪ್ರಸ್ತುತ ದೇವಾಲಯದ ಗರ್ಭಗುಡಿಯ ಬಾಗಿಲ ಎಡಗಡೆ ೨೫.೩ ಇಂಚು ಉದ್ದ ಅಗಲ ೮೧, ಇಂಚು ಉದ್ದವಾದ ಕಲ್ಯಾಣಿ ಕಲಚೂರಿಗಳ ಕಾಲದ ಶಿಲಾಶಾಸನದಿಂದ ಈ ವಿಷಯ ಸ್ಪಷ್ಟವಾಗಿದ್ದು. ಇದು ಜೈನ ಶಾಸನವಾಗಿದ್ದು ಧಾರವಾಡ ಜಿಲ್ಲಾ ಶಾಸನ ಸೂಚಿಯಲ್ಲಿ ಅತಿತ್ರುಟಿತ ಎಂದು ಉಲ್ಲೇಖಗೊಂಡಿದೆ. ಅಲ್ಲದೆ 'ಸೌತ್ ಇಂಡಿಯನ್ ಇನ್ಸ್‌ಸ್ಕ್ರಿಪ್ಶನ್' ಸಂಪುಟ ೧೮ ರಲ್ಲಿ ತ್ರುಟಿತ ಪಾಠವೂ ಪ್ರಕಟವಾಗಿದೆ[೨೩].

## ಶಾಕ್ತ ದೇವಾಲಯಗಳು:

ಮಾತೃದೇವತೆಯ ರೂಪದಲ್ಲಿರುವ ಶಕ್ತಿ ದೇವತೆಯ ಆರಾಧಿಸುವ ಶಾಕ್ತಪಂಥವೆಂದು ಕರೆಯುತ್ತಾರೆ. ಭಾರತದಲ್ಲಿ ಶಾಕ್ತಪಂಥದ ಚರಿತ್ರೆಯನ್ನು ಸಿಂಧೂ ಸಂಸ್ಕೃತಿಯಿಂದ ಗುರುತಿಸಿದ್ದೇವೆ. ವೈದಿಕ ಕಾಲದ ನಂತರ ಶಕ್ತಿದೇವತೆ ಬೆಳವಣಿಗೆ ಪ್ರಮುಖವಾಗಿ ಕಂಡುಬರುತ್ತದೆ. ಶಾಕ್ತರ ಆರಾಧ್ಯ ದೇವತೆಯೇ ಶಕ್ತಿ ದೇವತೆ ಇವರುಗಳನ್ನು ಆದಿಶಕ್ತಿ ಪರಾಶಕ್ತಿ, ಮಹಾಶಕ್ತಿ, ಮಹಾದೇವಿ ಚೌಡೇಶ್ವರಿ, ದುರ್ಗಮ್ಮ, ಯಲ್ಲಮ್ಮ, ದ್ಯಾಮವ್ವ, ಮಾರೆಮ್ಮ ಮುಂತಾಗಿ ಕರೆಯುತ್ತಾರೆ. ಈ ಕಾಲದ ದೇವತೆಗಳನ್ನು ಗೃಹಸೂತ್ರಗಳು, ಸಂಸ್ಕೃತಿಗಳು, ಉಪನಿಷತ್ತುಗಳು, ಪುರಾಣಗಳು ಮುಂತಾಗಿ ಸಾಹಿತ್ಯ ಆಕರಗಳು ವಿವಿಧ ಬಗೆಯಿಂದ ವರ್ಣಿಸುತ್ತದೆ. ಆಯಾ ಬುಡಕಟ್ಟ ನೆಲೆಸಿರುವವ ಸ್ಥಳಗಳಲ್ಲಿ ಶಕ್ತಿದೇವತೆಯ ಆರಾಧನೆಯನ್ನು ಕಾಣಬಹುದು. ಅಲ್ಲದೆ ಗ್ರಾಮೀಣ ಮಟ್ಟದಿಂದ ಹಿಡಿದು ನಗರ ಮಟ್ಟದವರೆಗೂ ಗ್ರಾಮದೇವತೆಗಳ, ಶಕ್ತಿದೇವತೆಗಳ ಆರಾಧನೆಯನ್ನು ಕಾಣಬಹುದು.

ಜಗತ್ತಿನಲ್ಲಿ ಯಾವ ದೇವರು ನಿಷ್ಕ್ರಿಯನಾಗುತ್ತಾನೋ ಆ ಶಕ್ತಿಯನ್ನು ತಮ್ಮ ಮೂಲಾಧಾರ ಎಂದು ಶಕ್ತ ಸಂಪ್ರದಾಯದವರು ಭಾವಿಸುತ್ತಾರೆ. ಶಕ್ತಿ ಇಲ್ಲದ ಎಲ್ಲ ದೇವರೂ

ಅಪೂರ್ಣ ಹೆಣ್ಣು ದೇವತೆಯ ಶಕ್ತಿ ಮತ್ತು ಸ್ವರೂಪವನ್ನು ಗಂಡುದೇವರ ತಾಯಿಯಾಗಿ, ಸಹೋದರಿಯಾಗಿ, ಪತ್ನಿಯಾಗಿ ನಾನಾ ಮಗ್ಗಲುಗಳಿಂದ ಕಾಣಲಾಗಿದೆ. ಇವುಗಳಲ್ಲಿ ಪತ್ನಿ ರೂಪದಲ್ಲಿರುವ ಶಕ್ತಿಯೂ ಹೆಚ್ಚಾಗಿ ಕಾಣುತ್ತೇವೆ. ಶಕ್ತಿ, ಪೂಜೆ ಅಥವಾ ಮಾತೃದೇವತೆ ಉಪಾಸನೆಯು ಪ್ರಾಚೀನವಾದ ಸಿಂಧೂ ಸಂಸ್ಕೃತಿಯಲ್ಲಿ ಕಂಡುಬಂದಿದೆ. ಅಲ್ಲಿ ದೊರೆತ ಸ್ತ್ರೀ ವಿಗ್ರಹಗಳನ್ನು ಮಾತೃದೇವತೆಯ ವಿಗ್ರಹಗಳೆಂದು ಹೇಳಲಾಗಿದೆ.

ಈ ಪ್ರಸ್ತುತ ಅಧ್ಯಯನವು ಹಾವೇರಿ ಜಿಲ್ಲೆಯ ಶಾಕ್ತದೇವಾಲಯಗಳು ಪ್ರಮುಖವಾಗಿ ಎಲ್ಲಮ್ಮ, ಹೊನ್ನಮ್ಮ, ದ್ಯಾವಮ್ಮ ಎಂಬ ಶಕ್ತಿ ದೇವತೆಗಳನ್ನು ಕಾಣಬಹುದು.

| | | |
|---|---|---|
| **ಸಂ** | – | ೧ |
| **ಹೆಸರು** | – | ಪೇಟೆ ಎಲ್ಲಮ್ಮ ದೇವಾಲಯ |
| **ಗ್ರಾಮ** | – | ಬಂಕಾಪುರ |
| **ತಾಲೂಕು** | – | ಶಿಗ್ಗಾವಿ |
| **ಕಾಲಮಾನ** | – | ಆಧುನಿಕ |

ದೇವಾಲಯವು ಗರ್ಭಗೃಹ, ಆಯತಾಕಾರದ ಅಂತರಾಳ ಮತ್ತು ಸಭಾಮಂಟಪಗಳನ್ನು ಒಳಗೊಂಡಿದೆ. ಗರ್ಭಗೃಹ ದ್ವಾರ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದ್ದು ಹೊರಗೆ ಕೆಲವು ವಾಸ್ತು ಅವಶೇಷಗಳು ಕಂಡುಬರುತ್ತವೆ. ಬಹುಶಃ ಹಳೆಯ ದೇವಾಲಯ ಗರ್ಭಗೃಹದಲ್ಲಿ ಎಲ್ಲಮ್ಮ ದೇವಿಯನ್ನು ಪ್ರತಿಷ್ಠಾಪಿಸಿ, ಉಳಿದ ಭಾಗಗಳನ್ನು ಸ್ಥಳೀಯ ಶೈಲಿಯಲ್ಲಿ ನಿರ್ಮಿಸಿಕೊಂಡಂತೆ ಕಾಣುತ್ತದೆ[೨೪].

| | | |
|---|---|---|
| **ಸಂ** | – | ೨ |
| **ಹೆಸರು** | – | ರೇಣುಕ ದೇವಾಲಯ |
| **ಗ್ರಾಮ** | – | ಮಾವೂರು |
| **ತಾಲೂಕು** | – | ಸವಣೂರು |
| **ಕಾಲಮಾನ** | – | ಆಧುನಿಕ |

ಪೂರ್ವಾಭಿಮುಖವಾದ ಈ ದೇವಾಲಯದಲ್ಲಿ ಎಲ್ಲಿಂದಲೋ ತಂದು ಸ್ಥಾಪಿಸಿದ ಕಲ್ಯಾಣ ಚಾಲುಕ್ಯರ ಕಾಲದ ತಿರುಗಣೆ ಯಂತ್ರಗಳಿಂದ ಕಡೆದ ಎರಡು ಕಂಬಗಳನ್ನು ಕಾಣಬಹುದು. ಅಲ್ಲದೆ ದೇವಾಲಯದ ಮೇಲ್ಛಾವಣಿಯ ಮುಂಭಾಗದಲ್ಲಿ ನಾಗರಶೈಲಿಯ ಶಿಖರದ ಬಿಡಿಭಾಗಗಳನ್ನು ಕಾಣಬಹುದು[೨೫].

ಸಂ – ೩
ಹೆಸರು – ಕೋಡಿ ಹೊನ್ನಮ್ಮ
ಗ್ರಾಮ – ಹತ್ತಿ ಮತ್ತೂರು
ತಾಲೂಕು – ಸವಣೂರು
ಕಾಲಮಾನ – ಕ್ರಿ.ಶ. ಸುಮಾರು ೭–೮ನೇ ಶತಮಾನ

ಕೋಡಿ ಹೊನ್ನಮ್ಮನ ದೇವಾಲಯ ಇಂದು ಮನೆಯಾಗಿ ಮಾರ್ಪಟ್ಟಿದೆ. ಇದೇ ಮನೆಯಲ್ಲಿ ಪ್ರಾಚೀನ ದೇವಾಲಯದ ಕಂಬಗಳಿವೆ. ಗೋಡೆಗೆ ಸೇರಿದಂತೆ ಸಾಲಾಗಿ ಇರುವ ಮೂರ್ತಿಶಿಲ್ಪಗಳು ಪ್ರಾಚೀನತೆಯ ದೃಷ್ಟಿಯಿಂದ ಮಹತ್ವದ್ದಾಗಿದೆ.

ಸಂ – ೪
ಹೆಸರು – ದುರುಗಮ್ಮ ದೇವಾಲಯ
ಗ್ರಾಮ – ಹಿರೇಮಗದೂರು
ತಾಲೂಕು – ಸವಣೂರು
ಕಾಲಮಾನ – ಕ್ರಿ.ಶ. ಸುಮಾರು ೧೯–೨೦ನೇ ಶತಮಾನ

ದೇವಾಲಯವು ಒಂದೇ ಕೊಠಡಿಯನ್ನು ಹೊಂದಿದ್ದು, ನಡುವೆ ಕಲ್ಯಾಣ ಚಾಲುಕ್ಯ ಶೈಲಿಯ ನಾಲ್ಕು ಕಂಬಗಳನ್ನು ಅಳವಡಿಸಲಾಗಿದೆ. ಈ ಕೊಠಡಿಯ ಭಿತ್ತಿ ಭಾಗವನ್ನು ಸ್ಥಳೀಯವಾಗಿ ದೊರೆಯುವ ಚಕ್ಕೆಕಲ್ಲುಗಳನ್ನು ಸೇರಿಸಿ ನಿರ್ಮಿಸಿದ್ದಾರೆ. ಹೊರಭಿತ್ತಿಗೆ ಸೇರಿದಂತೆ ದ್ವಾರದ ಮೇಲೆ ಸಪ್ತಮಾತೃಕೆಯರ ಫಲಕವಿರುವುದು ಕಂಡುಬರುತ್ತದೆ.

ಸಂ – ೫
ಹೆಸರು – ಮಹಾಲಕ್ಷ್ಮಿ ದೇವಾಲಯ
ಗ್ರಾಮ – ರಟ್ಟಿಹಳ್ಳಿ
ತಾಲೂಕು – ಹಿರೇಕೆರೂರು
ಕಾಲಮಾನ – ಆಧುನಿಕ

ಈ ದೇವತೆಯು ಕೂಡ ರಟ್ಟಿಹಳ್ಳಿಯಲ್ಲಿ ಪ್ರಮುಖವಾಗಿ ಪೂಜಿಸಲ್ಪಡುವ ದೇವಿಯಾಗಿದ್ದಾಳೆ. ಈಕೆ ಮೂಲತಃ ಕೊಲ್ಲಾಪುರದವಳು. ಅಲ್ಲಿಂದ ಇಲ್ಲಿಗೆ ಆಗಮಿಸಿ ನೆಲೆಸಿರುವಳು. ಆ ಬಗ್ಗೆ ಜನ ಬಗೆ ಬಗೆಯ ಕಥೆಗಳನ್ನು ಹೇಳುವರು.

ರಟ್ಟಿಹಳ್ಳಿಯಿಂದ ಭಕ್ತನೊಬ್ಬ ಕೊಲ್ಲಾಪುರಕ್ಕೆ ಹೋಗಿದ್ದ. ಆಗ ದೇವಿ ರಟ್ಟೀಹಳ್ಳಿಗೆ ಬರಬೇಕೆಂದಿರುವ ತನ್ನ ಆಸೆಯನ್ನು ಭಕ್ತನಿಗೆ ಹೇಳಿದಳು. ಭಕ್ತ ದೇವಿಯನ್ನು ತಮ್ಮೂರಿಗೆ ಸ್ವಾಗತಿಸಿದ. ದೇವಿ ಒಪ್ಪಿದಳು. ಆಗ ಭಕ್ತ ದೇವಿಗೆ ನಿನ್ನ ಬರುವನ್ನು ನಾವು ಹೇಗೆ ತಿಳಿಯುವುದು ಎಂದು ಪ್ರಶ್ನಿಸಿದಾಗ ನಿಮ್ಮೂರ ಗಡಿಯಲ್ಲಿ ಬೇವಿನ ಮರದ ಟೊಂಗೆಯೊಂದು ಮುರಿದು

ಬೀಳುತ್ತದೆ. ಆಗ ನಾ ಬಂದನೆಂದು ತಿಳಿ ಎಂದು ಹೇಳಿದಳು. ನಂತರ ಒಂದು ದಿನ ಆ ಪ್ರಕಾರ ಐದು ಜನ ಮುತ್ತೈದೆಯರೊಂದಿಗೆ ಟೊಂಗೆಯ ತಪ್ಪಲನ್ನು ತಂದು ದೇವಿಯನ್ನು ಪ್ರತಿಷ್ಠಾಪಿಸಲಾಯಿತು.

ಈ ದೇವಾಲಯ ಆಧುನಿಕತೆಯನ್ನು ಹೊಂದಿದ್ದು, ದೇವಿಯ ದೇವಾಲಯದ ಪಕ್ಕದ ಸಣ್ಣಗುಡಿಯಲ್ಲಿ ಮಹಾಲಿಂಗ ಸ್ವಾಮಿ ಗದ್ದುಗೆ ಇದೆ. ಅದರ ಹಿನ್ನಲೆ ಕಥೆಯು ಇರುವುದು. ಇಲ್ಲಿ ಪ್ರತಿವರ್ಷ ದೀಪಾವಳಿ ಅಮವಾಸ್ಯೆಯ ದಿನ ಮಹಾಲಕ್ಷ್ಮಿಯ ಭಸ್ಮವನ್ನು ಆಚರಿಸಲಾಗುತ್ತಿದ್ದು ಅನೇಕ ಮಹಿಮೆಯನ್ನು ಸಾರುವ ಪ್ರತೀತಿಗಳಿವೆ[೨೬].

## ಶಿಲ್ಪಗಳು

ಯಾವುದಾದರು ಒಂದು ದೇವಾಲಯದ ಸಂಶೋಧನೆಯನ್ನು ಕೈಗೊಂಡಾಗ ಆ ದೇವಾಲಯದಲ್ಲಿ ಕಂಡುಬರುವ ಪ್ರಮುಖ ಶಿಲ್ಪಗಳು ಅಧ್ಯಯನದ ದೃಷ್ಠಿಯಿಂದ ಅಭ್ಯಸಿಸಲು ಮತ್ತು ವಿಮರ್ಶಿಸಲು ಅನಿವಾರ್ಯವಾಗಿರುತ್ತವೆ. ಕಾರಣ ಶಿಲ್ಪಗಳು ಇತಿಹಾಸದ ಕಾಲವನ್ನು ನಿರ್ಣಯಿಸುವುದರಲ್ಲಿ ಪ್ರಮುಖ ಪಾತ್ರವಹಿಸುತ್ತವೆ.

ಧಾರ್ಮಿಕ ಶ್ರದ್ಧೆಯು ಜೀವನದ ಪ್ರಮುಖ ಅಂಶಗಳಲ್ಲಿ ಒಂದು ಎನಿಸಿರುವ ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ದೇವಾಲಯಗಳನ್ನು ನಿರ್ಮಿಸಿರುವುದನ್ನು ಕಾಣುತ್ತೇವೆ. ಈ ದೇವಾಲಯದ ದೇವಾಲಯಗಳ ನಿರ್ವಿಸಿರುವುದನ್ನು ಕಾಣುತ್ತೇವೆ. ಈ ದೇವಾಲಯದ ಮುಖ್ಯ ಗರ್ಭಗೃಹದಲ್ಲಿರುವ ವಾಸ್ಥುವಿಕ್ಕೆ ದೇವತೆ ಎನ್ನುತ್ತೇವೆ. ಇವುಗಳ ರೂಪವನ್ನು ತಯಾರಿಸುವ ದೇವತಾಮೂರ್ತಿಯನ್ನು ಶಿಲ್ಪ ಎಂದು ಕರೆಯುತ್ತಾರೆ[೨೭]. ದೇವಾಲಯಗಳು ನಿರ್ಮಾಣವಾದಂತೆ ಶಿಲ್ಪಗಳು ರೂಪುಗೊಂಡ ವಾಸ್ತುವಿನ ನಿರುವಂತಿಕೆಯನ್ನು ಎಚ್ಚಿಸಿದವು. ದೇವಾಲಯದ ವಾಸ್ತುಶಿಲ್ಪವು, ಅಧಿಕ ವರ್ಷಗಳ ನಶಿಸದೆ ಉಳಿಯಬೇಕು ಶ್ರೀಮಂತಿಕೆಯಿಂದ ಕೂಡಿರಬೇಕು, ಆಕರ್ಷಣೆಯಿಂದ ಕೂಡಿರಬೇಕು ಉತ್ತಮ ಗಂಭೀರತೆಯಿಂದ ಕೂಡಿರಬೇಕು ಇತ್ಯಾದಿ ಉದಾತ್ತ ಭಾವನೆಗಳ ರೂಪದಲ್ಲಿ ಶಿಲ್ಪಗಳು ಹೆಚ್ಚಾಗಿ ದೇವಾಲಯಗಳ ವಾಸ್ತುವಿನೊಂದಿಗೆ ಶಿಲ್ಪಕ್ಕೆ ಹೆಚ್ಚು ಮೆರಗನ್ನು ನೀಡಿ ಪೋಷಿಸಿ ಬೆಳೆಸಿದ್ದರೆನ್ನುವುದು ಶ್ರೇಷ್ಠವೆನಿಸಿದೆ. ಹೀಗಾಗಿ ಹಾವೇರಿ ಜಿಲ್ಲೆಯಲ್ಲಿ ಬಾದಾಮಿ ಚಾಲುಕ್ಯ ದೇವಾಲಯಗಳು ರಾಷ್ಟ್ರಕೂಟರ ದೇವಾಲಯಗಳು, ಹೊಯ್ಸಳ ದೇವಾಲಯಗಳು, ವಿಜಯನಗರ ಅರಸರ ದೇವಾಲಯಗಳು ಇದ್ದು, ಪ್ರಮುಖವಾಗಿ ಕಲ್ಯಾಣ ಚಾಲುಕ್ಯರ ದೇವಾಲಯಗಳ ಶಿಲ್ಪಗಳು ಹೆಚ್ಚು ಕಂಡು ಬಂದಿವೆ. ಈ ದೃಷ್ಠಿಯಿಂದ ಎಲ್ಲಾ ಕಾಲಘಟ್ಟಗಳಲ್ಲಿ ಶಿಲ್ಪದ ನವೀನ ಮಾದರಿಯ ಜೊತೆಗೆ ನವರಸಗಳ ಅಭಿವ್ಯಕ್ತಿಯನ್ನು ಕಾಣಬಹುದು. ಇದರಿಂದಾಗಿ ಈ ಹಾವೇರಿ ಜಿಲ್ಲೆಯ ವಿಷ್ಣು ಮತ್ತು ಶಿವನ ವಿವಿಧ ಭಂಗಿಯ ಮೂರ್ತಿಶಿಲ್ಪಗಳು, ಗಣಪತಿ ಮತ್ತು ಮಹಿಷಮರ್ದಿನಿ ಶಿಲ್ಪಗಳೂ ದೊರೆತಿವೆ. ಅವುಗಳ ಸ್ಥೂಲ ಪರಿಚಯವನ್ನು ಕೆಳಗಿನಂತೆ ವಿವರಿಸಲಾಗಿದೆ.

### ಗಣಪತಿ:

ಪ್ರಾಚೀನ ಮತಧರ್ಮ ಪಂಥಗಳಲ್ಲಿ ಶೈವ ಪಂಥವು ಪ್ರತೀಕವಾಗಿದ್ದು, ಇದಕ್ಕೆ ಸಂಬಂಧಿಸಿದಂತೆ ನಾಗಪಂಥ. ಕೌಮಾರ ಪಂಥಗಳೂ, ಸಮಕಾಲೀನವಲ್ಲದಿದ್ದರು ಇವೆರಡೂ ಅನೇಕ ಶತಮಾನಗಳಿಂದಲೂ ಆಚರಣೆಯಲ್ಲಿವೆ. ಪಂಚಾಯತ್‌ನ ಪೂಜೆ ಕ್ರಿ.ಶ. ೮ನೇ ಶತಮಾನದಲ್ಲಿ ಹೆಚ್ಚು ಪ್ರಚಾರಕ್ಕೆ ಕಂಡು ಬಂದರೂ ಗರ್ಭಗುಡಿಯ ಎಡಬದಿಗೆ ಮಹಿಷಮರ್ದಿನಿಯನ್ನು ಬಲಬದಿಗೆ ಗಣೇಶನನ್ನು ಇಟ್ಟು ಪೂಜಿಸುವ ಪದ್ಧತಿ ಪ್ರಾರಂಭವಾಯಿತು. ತದ ನಂತರದಲ್ಲಿ ಗಣಪತಿ ವಿವಿಧ ರೀತಿಯ ಆಕಾರ ಅವತಾರಗಳೊಂದಿಗೆ ಬಂದದ್ದು ಬಹುತೇಕ ಇತ್ತೀಚಿನ ದಿನಗಳಲ್ಲಿ. ಪ್ರತಿ ಹಳ್ಳಿಯಲ್ಲಿಯೂ ಒಂದು ಗಣಪತಿ ಗುಡಿ ಕಂಡುಬರುತ್ತದೆ. ಈ ಪ್ರಾಂತ್ಯದಲ್ಲಿ ಗಳಗನಾಥ ದೇವಾಲಯ, ಬಂಕಾಪುರ ನಗರೇಶ್ವರ, ಕದರಮಂಡಲಗಿ, ಕಾಂತೇಶ ದೇವಾಲಯ, ಕಾಗಿನೆಲೆ ಲಕ್ಷ್ಮೀನರಸಿಂಹ ದೇವಾಲಯ, ಆಧಿ ಕೇಶವ, ಕರೂರು ಕಲ್ಲೇಶ್ವರ ದೇವಾಲಯಗಳಲ್ಲಿ ಸಾಮಾನ್ಯ ಲಕ್ಷಣವನ್ನು ಹೊಂದಿರುವ ದೇವಾಲಯಗಳಿವೆ. ಸಾಮಾನ್ಯವಾಗಿ ಗಣಪತಿ ವಿಗ್ರಹವು ನಾಲ್ಕು ಪುಟ್ಟ ಕೈ, ಪುಟ್ಟ ಕಾಲುಗಳನ್ನು ಹೊಂದಿರುತ್ತದೆ. ವಕ್ರತುಂಡ ಮಹಾಕಾಯ ಎಂಬ ಹೆಸರಿಗೆ ತಕ್ಕಂತೆ ದೊಡ್ಡ ಗುಡಾಣದಂತಹ ಹೊಟ್ಟೆಯನ್ನು ಹೊಂದಿರುತ್ತದೆ. ಸೊಂಡಿಲುಳ್ಳ ಆನೆಯ ಮುಖವು ಮೊದಲಾದ ಕಿವಿಗಳೂ, ಯಜ್ಞೋಪವೀತ ಉದರ ಬಂಧವನ್ನು ಹೊಂದಿರುತ್ತದೆ[೨೯]. ಗಣೇಶನಿಗೆ ಪರ್ಯಾಯ ಪದವಾದ ವಿನಾಯಕ ಎಂಬ ಹೆಸರು ಅಥರ್ವಶಿರಸ್ ಉಪನಿಷತ್ತಿನಲ್ಲಿ ಕಂಡುಬರುತ್ತದೆ. ಇದರಿಂದಾಗಿ ಈ ಜಿಲ್ಲೆಯಲ್ಲಿ ಶಿವ ಮತ್ತು ವಿಷ್ಣು ದೇವಾಲಯಗಳ ನವರಂಗದಲ್ಲಿ ಗಣಪತಿ ಶಿಲ್ಪಗಳು ಹೆಚ್ಚಾಗಿ ಕಂಡುಬರುತ್ತದೆ[೩೦]. ಕರ್ನಾಟಕದಲ್ಲಿ ಕಂಡುಬರುವ ಕೆಲವು ದೇವಾಲಯಗಳಲ್ಲಿ ವಿಶೇಷ ಲಕ್ಷಣಗಳನ್ನುಳ್ಳ ಗಣಪತಿಯನ್ನು ಗುರುತಿಸಬಹುದು. ಅವುಗಳೆಂದರೆ ಬಲಮುರಿ ಗಣಪತಿ (ಬಲಕ್ಕೆ ಸೊಂಡಿಲನ್ನೊಂದಿರುವುದು), ದ್ವಿಭುಜ ಗಣಪತಿ, ಷಡ್ಭಾಹು ಗಣಪತಿ, ಶಂಖವನ್ನು ಹಿಡಿದಿರುವ ಗಣೇಶ, ನಾಣ್ಯಗಣೇಶ, ಬಾಲಗಣಪತಿ, ಸಿದ್ಧಿವಿನಾಯಕ (ಶಕ್ತಿಯನ್ನು ಸೊಂಡಿಲಿನಿಂದ ಅಪ್ಪಿಕೊಂಡಿರುವುದು)[೩೧] ಹೀಗೆ ವಿವಿಧ ಭಂಗಿಗಳನ್ನು ಕಾಣಬಹುದು.

### ಲಿಂಗ:

ಶೈವಧರ್ಮಕ್ಕೆ ಸಂಬಂಧಿಸಿದಂತೆ ಈಶ್ವರ ಅಥವಾ ಶಿವನ ಪ್ರತೀಕವಾಗಿ ಶಿವಲಿಂಗವನ್ನು ಪೂಜಿಸಲಾಗುತ್ತದೆ. ಲಿಂಗವನ್ನು ಪುರುಷ ಶೀಲೆಯಿಂದಲೂ ಪೀಠವನ್ನು (ಯೋಗಿಪೀಠ) ಸ್ತ್ರೀ ಶಿಲೆಯಿಂದ ಮಾಡಬೇಕು[೩೨]. ಲಿಂಗದಲ್ಲಿ ಎರಡು ವಿಧಗಳುಂಟು. ಅವುಗಳಲ್ಲಿ ಚಲಲಿಂಗ ಮತ್ತು ಅಚಲಲಿಂಗ ಎಂಬುದಾಗಿದೆ[೩೩]. ಹಾಗೆಯೇ ಪೀಠಗಳಲ್ಲೂ ವಿವಿಧ ರೀತಿಯ ಮಾದರಿಗಳಿವೆ. ಒಂದೊಂದು ಚೌಕಾಕಾರದ ಪೀಠದ ಮೇಲಿದೆ. ಮತ್ತೆ ಕೆಲವು ದುಂಡಗಿರುವ ಪಾಣಿಪೀಠದ ಮೇಲಿರುತ್ತವೆ. ಹಾನಗಲ್ಲು ತಾರಕೇಶ್ವರ ದೇವಾಲಯ, ಬಾಳಂಬೀಡು ಕಲ್ಮೇಶ್ವರ ದೇವಾಲಯ, ಗಳಗನಾಥ ಗಳಗೇಶ್ವರ ದೇವಾಲಯ, ನರಗೇರ ಸರ್ವೇಶ್ವರನ ದೇವಾಲಯ. ಲಿಂಗಗಳಲ್ಲಿ ಪಾಣಿಪೀಠವನ್ನು ಕಾಣಬಹುದು. ಲಿಂಗಗಳಲ್ಲಿ ಪ್ರಾಚೀನ ಹಾಗೂ ಅರ್ವಾಚೀನ ಅಂಶಗಳ

ವ್ಯತ್ಯಾಸವನ್ನು ಗುರುತಿಸುವುದು ಕಷ್ಟವಾದರೂ ಇತ್ತೀಚೆಗೆ ವಿದ್ವಾಂಸರು ಮಂಡಿಸುವ ಸೂತ್ರವನ್ನು ಬಳಸಿ ಗುರುತಿಸಬಹುದಾಗಿದೆ. ಸುಂದರ ಅರವರ ಪ್ರಕಾರ ಬಾಣಾದಾಕಾರದ ಮಧ್ಯನಾಡಿ (ಬ್ರಹ್ಮಸೂತ್ರ) ಉಳ್ಳವು ಪ್ರಾಚೀನವಾದವುಗಳಾಗಿವೆ.

**ವಿಷ್ಣು:**

ಈ ಶಿಲ್ಪದ ಸಾಮಾನ್ಯ ಲಕ್ಷಣಗಳನ್ನು ಕೆಳಕಂಡಂತೆ ಕಾಣಬಹುದು. ಸಾಮಾನ್ಯವಾಗಿ ವಿಷ್ಣುವು ಸಮಭಂಗಿಯಲ್ಲಿದ್ದು ಚತುರ್ಭುಜದವನಾಗಿರುತ್ತಾನೆ. ಈ ದೈವನು ತನ್ನ ಕೈಗಳಲ್ಲಿ ಶಂಖ, ಚಕ್ರ, ಪದ್ಮಗದೆಯನ್ನು ಹಿಡಿದಿರುತ್ತಾನೆ[೬೪] ಮತ್ತು ಕೆಲವು ಶಿಲ್ಪಗಳಲ್ಲಿ ಬಲಮುಂಗೈಯಲ್ಲಿ ಫಲ, ಅಂಗೈಯಲ್ಲಿ ಪ್ರಯಾಗಚಕ್ರ. ಎಡ ಹಿಂಗೈಯಲ್ಲಿ ಶಂಖ, ಮುಂಗೈ ಕರಿಹಸ್ತ, ಕಿರೀಟ ಕೊಳಗದಂತಿರುತ್ತದೆ. ಕರ್ಣಕುಂಡಲ, ಕೊರಳಲ್ಲಿ ಅಗಲವಾದ ದಪ್ಪ ಅಡ್ಡಿಗೆ, ಎಡಭುಜದಿಂದ ಹಾದು ಬಲತೋಳ ಮೇಲೆ ಇಳಿದಿರುವ ಯಜ್ಞೋಪವೀತ, ಮೊಣಕಾಲವರೆಗೆ ಇಳಿ ಬಿದ್ದಿರುವ ಆರೋಪ್ಯಮಾಲೆ, ನಡುವನ್ನು ಬಿಗಿದು ಮುಂಭಾಗದಲ್ಲಿ ಗಂಟು ಬಿದ್ದಿರುವ ನಡುಬಂಧ, ನಡುವಿನ ಎರಡೂ ಕಡೆಗಳಲ್ಲಿ ಇಳಿಬಿಟ್ಟಿರುವ ಬಟ್ಟೆಯನ್ನು ಸೇರಿಸುವಂತೆ ಮಧ್ಯೆ ಅರ್ಧಚಂದ್ರಾಕಾರದ ಇಳಿಬಟ್ಟೆ, ಕೈಗಳಲ್ಲಿ ದಪ್ಪ ಕಡಗಗಳನ್ನು ಕಾಣುತ್ತೇವೆ. ಚಕ್ರವು ವಿಷ್ಣುವಿನ ಆಯುಧವಾದಾಗ ಇದಕ್ಕೆ 'ಸುದರ್ಶನ' ಎಂಬ ಹೆಸರಿನಿಂದ ಕರೆಯುತ್ತಾರೆ[೬೫]. ವಿಷ್ಣುವಿನ ಅವತಾರಗಳೂ ಋಷಿಗಳು. ಮುನಿಗಳು, ದೇವರುಗಳು, ಮನುವಿನ ಪುತ್ರರು, ಪ್ರಜಾಪತಿಗಳು ಎಲ್ಲರೂ ಅವನ ಅಂಶ ಹತ್ತು ಬಾರಿ ರಾಕ್ಷಸ ಸಂಹಾರಕ್ಕಾಗಿ ವಿಷ್ಣು ಅವತಾರ ಮಾಡಿ ಲೋಕ ರಕ್ಷಣೆ ಮಾಡಿದ್ದಾನೆ. ಇವನ ವಾಹನಗರುಡವಾಗಿದೆ. ಮೇಲಿನ ಲಕ್ಷಣಗಳನ್ನು ಹೊಂದಿರುವ ವಿಷ್ಣುವಿನ ಸ್ಥಿತಿಯನ್ನು ಗಳಗನಾಥ, ಗಳಗೇಶ್ವರ ದೇವಾಲಯ, ಹಾನಗಲ್ಲು ತಾಲೂಕಿನ ತಾರಕೇಶ್ವರ ದೇವಾಲಯ, ಬಂಕಾಪುರ ನಗರೇಶ್ವರ ದೇವಾಲಯಗಳಲ್ಲಿ ಕಾಣಬಹುದು.

ಕ್ರಿ.ಶ. ೮-೯ನೇ ಶತಮಾನದ ವಿಷ್ಣುವಿನ ೨೪ ರೂಪಗಳಲ್ಲಿ ತೋರಿಸಿರುವ ಪದ್ಧತಿ ಅಲ್ಲಲ್ಲಿ ಕಂಡು ಬಂದರೂ ೧೦ ನೇ ಶತಮಾನದಲ್ಲಿ ಇದು ವ್ಯಾಪಕವಾಗಿ ಶಿಲ್ಪಗಳಲ್ಲಿ ಪ್ರಚಾರಕ್ಕೆ ಬಂದಿತು[೬೬]. ವಿಷ್ಣುವನ್ನು ಕೇವಲ ವೈಷ್ಣವ ದೇವಾಲಯಗಳಲ್ಲಿಯೇ ಅಲ್ಲದೆ ಶೈವ ದೇವಾಲಯಗಳಲ್ಲೂ ಕಾಣಬಹುದು. ಬಾಳಂಬೀಡು ಕಲ್ಮೇಶ್ವರ ದೇವಾಲಯ, ಕ್ಯಾಸನೂರು ರಾಮೇಶ್ವರ ದೇವಾಲಯದಲ್ಲಿ ವಿಷ್ಣುವಿನ ಶಿಲ್ಪಗಳನ್ನು ಕೆತ್ತಲಾಗಿದೆ. ವಿಷ್ಣುಕೇಶವ, ನರಸಿಂಹ, ವೇಣುಗೋಪಾಲ ಮುಂತಾದ ವಿಷ್ಣುವಿನ ಅವತಾರಕ್ಕೆ ಸಂಬಂಧಿಸಿದ ಶಿಲ್ಪಗಳನ್ನು ಕೆತ್ತಲಾಗಿದೆ.

**ಕೇಶವ:**

ವೈಷ್ಣವ ದೇವರಲ್ಲಿ ಪ್ರಮುಖನಾದವನು ಕೇಶವ. ಈತನು ಚತುರ್ಭುಜವನ್ನು ಹೊಂದಿದ್ದು, ಕೈಗಳಲ್ಲಿ ಶಂಕ, ಚಕ್ರ, ಗದೆ, ಪದ್ಮಗಳಿರುತ್ತವೆ. ಕಾಗಿನೆಲೆ ಲಕ್ಷ್ಮಿನರಸಿಂಹದೇವಾಲಯ, ಬಂಕಾಪುರದ ನಗರೇಶ್ವರ ದೇವಾಲಯಗಳಲ್ಲಿ ಕೇಶವ ಶಿಲ್ಪವನ್ನು ಕಾಣಬಹುದು. ಅನೇಕ ಶಿಲ್ಪಗಳಲ್ಲಿ ಇಲ್ಲಿನ ಮುಖಭಾವ ಅತ್ಯಂತ ಸುಂದರವಾಗಿ ಕೆತ್ತಿರುವುದರಿಂದ ಇವನ ಮುಖಭಾವ ಅತ್ಯಂತ ಸುಂದರವಾಗಿ

ಕೆತ್ತಿರುವುದರಿಂದ ಇವನನ್ನು ಸೌಮ್ಯಕೇಶವ, ಚನ್ನಕೇಶವ, ಪ್ರಸನ್ನಕೇಶವ ಮುಂತಾದ ಹೆಸರುಗಳಿಂದ ಕರೆಯಲಾಗುತ್ತದೆ. ಇವನಿಗಾಗಿ ಪ್ರತ್ಯೇಕ ದೇವಾಲಯಗಳನ್ನು ನಿರ್ಮಿಸಲಾಗಿದೆ. ಕೇಶವನ ಶಿಲ್ಪ ಸಾಮಾನ್ಯವಾಗಿ ಸುಂದರ ಪ್ರಭಾವಳಿಯನ್ನು ಹೊಂದಿರುವುದರ ಜೊತೆಗೆ ಕೆಲವು ಪ್ರಭಾವಗಳಲ್ಲಿ ವಿಷ್ಣುವಿನ ದಶವತಾರಗಳನ್ನು ಕೆತ್ತಲಾಗಿದೆ. ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ ಮುಂತಾದವು. ಇವುಗಳಲ್ಲಿ ಬುದ್ಧ ಮತ್ತು ಕಲ್ಕಿ ಅವತಾರಗಳನ್ನು ಕೆಲವರು ಅವತಾರಗಳೆಂದು ಕರೆಯುವುದಿಲ್ಲ. ಬದಲಾಗಿ ಬಲರಾಮನನ್ನು ಸೇರಿಸುತ್ತಾರೆ. ಪುರಾಣಗಳಲ್ಲಿ ಈ ಅವತಾರಗಳ ಕಥೆಗಳು ವಿಶೇಷವಾಗಿ ಕಾಣಬರುತ್ತವೆ.

**ಸೂರ್ಯ:**

ಈ ಜಿಲ್ಲೆಯಲ್ಲಿ ಶಿಗ್ಗಾವಿ ತಾಲೂಕಿನ ಬನಿಕೊಪ್ಪ ಗ್ರಾಮದಲ್ಲಿ ಆಧುನಿಕ ಸೂರ್ಯ ದೇವರ ಗುಡಿಯು ಇದೆ. ಮತ್ತೆ ಸೂರ್ಯ ದೇವನಿಗಾಗಿ ಕಟ್ಟಿದ ಪ್ರಾಚೀನ ಪ್ರತ್ಯೇಕ ದೇವಾಲಯಗಳಿಲ್ಲ. ಶಿವ ಪಂಚಾಯತನದಲ್ಲಿ ಬರುವ ವಿಗ್ರಹಗಳಲ್ಲಿ ಸೂರ್ಯ ವಿಗ್ರಹವೂ ಒಂದು ಸಂಪೂರ್ಣ ಸಮಭಂಗಿಯಲ್ಲಿದು, ಕೈಗಳಲ್ಲಿ ತಾವರೆಯ ಮೊಗ್ಗುಗಳನ್ನು ಹಿಡಿದಿರುವಂತೆ ರಚಿಸಲಾಗುತ್ತದೆ. ಸಪ್ತಾಶ್ವಗಳನ್ನು ಹೂಡಿದ ರಥ ಅದರಲ್ಲಿ ಸಾರಥಿ ಅರುಣ ಇರುವ ಪೀಠದ ಮೇಲೆ ದ್ವಿಬಾಹುವುಳ್ಳ ಸೂರ್ಯ ದುಂಡಾದ ಮುಖ ಮತ್ತು ನೀಳವಾದ ಎರಡೂ ಕೈಯಲ್ಲಿದ್ದ ಕಮಲದ ಮೊಗ್ಗನ್ನು ಹಿಡಿದು ನಿಂತಿರುತ್ತಾನೆ[೩೭]. ಎರಡೂ ಕೈಗಳಿದ್ದರೆ ಕಮಲದ ಮೊಗ್ಗನ್ನು ನಾಲ್ಕು ಕೈಗಳಿದ್ದಾಗ ಅರಳಿದ ಕಮಲವನ್ನು ತೋರಿಸಬೇಕು ಎಂದು ಶಾಸ್ತ್ರಗಳಲ್ಲಿ ಹೇಳಲಾಗಿದೆ. ಸೂರ್ಯನ ಸುತ್ತಲೂ ಪ್ರಭಾವಳಿ ಇದ್ದು, ಪ್ರಭಾವಳಿಯ ಕೆಳಸ್ತರಗಳಲ್ಲಿ ಅರೆಗಂಭಗಳನ್ನು ಕೆತ್ತಿದ್ದು, ಈ ಕಂಬಗಳ ಮುಂದೆ ಬಿಲ್ಲು ಬಾಣಗಳನ್ನು ಹಿಡಿದು ನಿಂತಿರುವ ಉಕ್ಷೆ – ಪ್ರತ್ಯುಕ್ಷೆಯರಿದ್ದಾರೆ. ಶಿಲ್ಪಕ್ಕೆ ಮೆರಗು ನೀಡುವಂತೆ ಅಲಂಕಾರಿಕ ಕಿರೀಟ. ಮಕರ ಕುಂಡಲಗಳು, ಮಣಿಸರಗಳು, ಯಜ್ಞೋಪವೀತ, ಉದರಬಂಧ, ಭುಜಸರಗಳು, ಸಿಂಹಮುಖದಿಂದ ಕೂಡಿದ ಮೇಖಲ ಹಾಗೂ ಮಾಲಂಕಾರ ಮತ್ತು ನೆರಿಗಳಿಂದ ಕೂಡಿದ ಪಂಚೆ ಹಾಗೂ ಆಕರ್ಷಕವಾಗಿ ಕಲಾತ್ಮಕವಾದ ಗಂಟುಗಳನ್ನುಳ್ಳ ಕಟಿವಸ್ತ್ರ ಗುಚ್ಚಗಳು ಶಿಲ್ಪದ ಸೌಂದರ್ಯವನ್ನು ಇಮ್ಮಡಿಗೊಳಿಸುತ್ತವೆ. ಈ ರೀತಿಯ ಲಕ್ಷಣವನ್ನು ಹೊಂದಿರುವ ಶಿಲ್ಪಗಳು ಬಂಕಾಪುರ ನಗರೇಶ್ವರ ದೇವಾಲಯ, ನರೇಗಲ್ ಸರ್ವೇಶ್ವರ ದೇವಾಲಯ ಗುಡಗುಡಿ ಪಾರ್ವತಿಗುಡಿ, ಹಾನಗಲ್ಲುತಾಲೂಕಿನ ಬಾಳೆಹಳ್ಳಿ, ಸಿದ್ದೇಶ್ವರದೇವಾಲಯ, ಕುಪ್ಪೆಲೂರು ಈಶ್ವರ ದೇವಾಲಯಗಳಲ್ಲಿರುವ ಸೂರ್ಯನ ಶಿಲ್ಪದ ಪ್ರಭಾವಳಿಯಲ್ಲಿ ದಶಾವತಾರಗಳನ್ನು ಕೆತ್ತಲಾಗಿದೆ. ಇವುಗಳ ಇಕ್ಕೆಲಗಳಲ್ಲಿ ಉಷೆ ಮತ್ತು ಪ್ರತ್ಯೆಷೆಯರು ಇದ್ದು, ಇವರುಗಳು ಬಿಲ್ಲು ಮತ್ತು ಬಾಣಗಳನ್ನು ಹಿಡಿದಿರುವ ಬದಲು ಪದ್ಮದ ಮೊಗ್ಗನ್ನು ಹಿಡಿದುಕೊಂಡು ನಿಂತಿದ್ದಾರೆ.

**ನರಸಿಂಹ:**

ನರಸಿಂಹನಿಗೆ ಪ್ರತ್ಯೇಕವಾದ ದೇವಾಲಯಗಳಿವೆ. ಇವನನ್ನು ವಿವಿಧ ರೂಪದಲ್ಲಿ ರಚಿಸಲಾಗಿದೆ. ಇವನ ಅವತಾರಗಳು ಒಂದೊಂದು ರೀತಿ ಇದೆ. ಅಂದರೆ ಮತ್ಸ್ಯ ಪುರಾಣದಲ್ಲಿ ಹತ್ತು ಅವತಾರಗಳಲ್ಲಿ ಅತ್ಯಂತ ಪ್ರಚಲಿತವಾದ ನರಸಿಂಹವಾಹನ. ಪರಶುರಾಮ, ರಾಮ, ಬುದ್ಧ ಮತ್ತು ಕಲ್ಕಿಯನ್ನು ಮಾತ್ರ ಹೇಳಿದೆ. ಆದರೆ ಭಾಗವತಾ ಪುರಾಣದಲ್ಲಿ ೨೨ ಅವತಾರಗಳನ್ನು ವರ್ಣಿಸಿದ್ದರೂ ಸಹ ಪರಶುರಾಮನ ಅವತಾರದ ಉಲ್ಲೇಖವಿಲ್ಲ[೩೮]. ಮತ್ತೆ ಕೆಲವು ಗ್ರಂಥಗಳಲ್ಲಿ ೨೪ ಅವತಾರಗಳನ್ನು ಉಲ್ಲೇಖಿಸದೇ ನರಸಿಂಹನೂ ಮುಖ್ಯ ದೈವನಾಗಿ ದೇವಾಲಯಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಲಕ್ಷ್ಮಿನರಸಿಂಹ, ಉಗ್ರನರಸಿಂಹ ಮತ್ತು ಯೋಗನರಸಿಂಹನನ್ನು ಕಾಣುವುದು ಈ ದೇವನ ವಿವಿಧ ರೂಪಗಳನ್ನು ಗುಡಿಯಲ್ಲಿರುವ ಬಿಡಿಶಿಲ್ಪಗಳು ಹಾಗೂ ದೇವಾಲಯದ ಭಿತ್ತಿ ಶಿಲ್ಪಗಳಲ್ಲಿ ಕಾಣಬಹುದು. ಅಂದರೆ ಕಾಲನ್ನು ಮಡಚಿ ಯೋಗಮುದ್ರೆಯಲ್ಲಿ ಕುಳಿತಿದ್ದು ಮಂಡಿಯ ಕೆಳಭಾಗದ ಸುತ್ತಲು ಯೋಗಪಟ್ಟಿಯು ಬಂದಿದ್ದರೆ ಅದು ಯೋಗನರಸಿಂಹನೆಂದು, ಲಕ್ಷ್ಮಿಯನ್ನು ಎಡ ತೊಡೆಯ ಮೇಲೆ ಕುಳ್ಳಿರಿಸಿಕೊಂಡಿದ್ದರೆ ಅದು ಲಕ್ಷ್ಮಿನರಸಿಂಹ ಎಂದು ವಿಶ್ವರೂಪದಲ್ಲಿ ಹಿರಣ್ಯಕಶ್ಯಪುವಿನ ಸಂಹಾರ ಮಾಡುತ್ತಿರುವ ಮೂರ್ತಿಯನ್ನು ಉಗ್ರನರಸಿಂಹನೆಂದು, ಎಡ ಮತ್ತು ಬಲಭಾಗದಲ್ಲಿ ಶ್ರೀದೇವಿ ಮತ್ತು ಭೂದೇವಿಯರಿದ್ದರೆ ಭೋಗನರಸಿಂಹನೆಂದು, ಶಂಖ, ಚಕ್ರ ಹಿಡಿದು ಸಮಭಂಗಿಯಲ್ಲಿ ನಿಂತಿರುವ ಮೂರ್ತಿಯನ್ನು ಸ್ಥಾನಕ ನರಸಿಂಹನೆಂದು ಕರೆಯುತ್ತಾರೆ.

ಬ್ಯಾಡಗಿ ತಾಲೂಕಿನ ಕಾಗಿನೆಲೆ ಲಕ್ಷ್ಮಿನರಸಿಂಹ ದೇವಾಲಯದಲ್ಲಿ ಗರ್ಭಗೃಹದಲ್ಲಿ ಲಕ್ಷ್ಮಿನರಸಿಂಹ ಮೂರ್ತಿ ಶಿಲ್ಪವಿದೆ. ಲಕ್ಷ್ಮಿನರಸಿಂಹನು ಕುಳಿತ ಭಂಗಿಯಲ್ಲಿದ್ದು ಬಲಗಾಲನ್ನು ಕೆಳಗೆ ಬಿಟ್ಟು, ಎಡಗಾಲನ್ನು ಮಡಚಿ ಕೊಂಡು ಕುಳಿತಿರುವಂತೆ ರಚನೆ ಮಾಡಲಾಗಿದೆ. ಚತುರ್ಭುಜವನ್ನು ಹೊಂದಿರುವ ನರಸಿಂಹನು ಹಿಂಬದಿಯ ಕೈಗಳಲ್ಲಿ ಶಂಖ ಮತ್ತು ಚಕ್ರವನ್ನು ಹಿಡಿದಿದ್ದು ಮುಂಬದಿಯ ಕೈಗಳಲ್ಲಿ ಅಭಯ ಮತ್ತು ವರದ ಹಸ್ತವನ್ನು ಹೊಂದಿರುತ್ತಾನೆ ಮತ್ತು ಹಾವೇರಿ ತಾಲೂಕಿನ ನರಸಿಂಹಪುರ ನರಸಿಂಹದೇವಾಲಯ ಹಾಗೂ ಹಾವೇರಿ ಸಿದ್ದೇಶ್ವರ ದೇವಾಲಯ ಆವರಣದ ನರಸಿಂಹ ದೇವಾಲಯದ ಗರ್ಭಗೃಹದಲ್ಲಿ ಉಗ್ರನರಸಿಂಹನ ಎತ್ತರಮೂರ್ತಿ ಶಿಲ್ಪವಿದೆ.

**ಕಾರ್ತಿಕೇಯ:**

ಇವನನ್ನು ಕುಮಾರ ಮುರುಗ, ಸ್ಕಂದ, ಷಣ್ಮುಖ ಮುಂತಾದ ಹೆಸರುಗಳಿಂದ ಕರೆಯುತ್ತಾರೆ[೩೯]. ಇವನಿಗೆ ಈ ಜಿಲ್ಲೆಯಲ್ಲಿ ಹಾನಗಲ್ಲು ತಾಲೂಕಿನ ಕಲಕೇರಿಯಲ್ಲಿ ಕಾರ್ತಿಕೇಯ ದೇವಾಲಯವಿದೆ. ಶೈವಪಂಥದ ದೇವಾಲಯಗಳಲ್ಲಿ ಈ ದೇವನ ಬಿಡಿಶಿಲ್ಪಗಳನ್ನು ಕಾಣಬಹುದು. ಕಾರ್ತಿಕೇಯನ್ನು ಭುಜವನ್ನು ಹೊಂದಿದ್ದು, ವಾಹನವಾದ ನವಿಲಿನ ಮೇಲೆ ಕುಳಿತಿರುತ್ತಾನೆ. ಇವನು ಕೈಯಗಳಲ್ಲಿ ಬಲಗೈಯಲ್ಲಿ ಭರ್ಜಿಯನ್ನು, ಎಡಗೈಯಲ್ಲಿ ತ್ರಿಶೂಲವನ್ನು ಹಿಡಿದು ಕೊಂಡಿರುತ್ತಾನೆ. ಮುಂದಿನ ಬಲಗೈಯಲ್ಲಿ ಅಭಯಹಸ್ತವಿದ್ದು ಎಡಗೈ ಕಟಿ ಹಸ್ತದಲ್ಲಿರುತ್ತದೆ. ತಲೆಗೆ ಕಿರೀಟ ಮಕರಕುಂಡಲಗಳು ಸರಳ ಕಂಠೀಹಾರ ಕೈಹಾರ.

ಉದರಬಂಧ, ಕಟಿಬಂಧ ಮತ್ತು ಬಿಗಿಯಾಗಿ ಧರಿಸಿದ ವಸ್ತ್ರದ ಅಲಂಕಾರವಿರುತ್ತದೆ. ಕದರ ಮಂಡಲಗಿ ಕಲ್ಲೇಶ್ವರ ದೇವಾಲಯ ಎರಡು ಕಾರ್ತಿಕೇಯ ಶಿಲ್ಪಗಳು ಬಹಳ ಸುಂದರವಾಗಿದ್ದು, ಇದು ಏಕಮುಖವನ್ನು ಹೊಂದಿರುವ ಶಿಲ್ಪವಾಗಿದ್ದು ನವಿಲನ್ನು ಬಹಳ ಅಲಂಕಾರಿಕವಾಗಿ ಕೆತ್ತಲಾಗಿದೆ. ನವಿಲಿನ ಬಾಯಿಯಲ್ಲಿ ಹಣ್ಣಿನ ಗೊಂಚಲನ್ನು ಸಹ ಕೆತ್ತಲಾಗಿದೆ. ಕಾರ್ತಿಕೆಯನು ಸಮಭಂಗಿಯಲ್ಲಿದ್ದರೆ ವಾಹನವಾದ ನವಿಲು ಆಕರ್ಷಕವಾಗಿ ಹಿಂಭಾಗದಲ್ಲಿ ನಿಂತಿರುತ್ತದೆ. ಕೆಲವು ಕಡೆ ಅಭಯ ಹಸ್ತವು ನವಿಲಿನ ತಲೆಯ ಮೇಲೆ ಆಸರೆಯಾಗಿ ಇರಿಸಿರುವಂತೆಯೂ ಇರುತ್ತದೆ. ಹಿರೇಹಳ್ಳಿ ರಾಮಲಿಂಗ ದೇವಾಲಯ, ಇಟಗಿ ಬಸವಣ್ಣ ದೇವಾಲಯ ನವರಂಗದಲ್ಲಿ ಕಾರ್ತಿಕೇಯನ ಎರಡು ಶಿಲ್ಪಗಳು ಹಾಗೂ ಆಡೂರು ಕಲ್ಲೇಶ್ವರ ದೇವಾಲಯ ಕಾರ್ತಿಕೇಯ ಶಿಲ್ಪಗಳು ಕಂಡುಬರುತ್ತವೆ.

**ಸಪ್ತಮಾತೃಕೆಯರು:**

ಪುರಾಣಗಳಲ್ಲಿ ಮತ್ತು ಇತರ ಗ್ರಂಥಗಳಲ್ಲಿ ಇವರ ಉಲ್ಲೇಖ ಹಾಗೂ ವರ್ಣನೆ ಇದೆ. ಇದರ ಮೂಲತಃ ಶೈವ ಪಂಥದ ದೇವತೆಗಳು ಬ್ರಾಹ್ಮೀ, ಮಹೇಶ್ವರಿ, ಕೌಮಾರಿ, ವೈಷ್ಣವಿ, ವರಾಹಿ, ಇಂದ್ರಾಣಿ, ಚಾಮುಂಡಿ – ಇವರೆ ಸಪ್ತಮಾತೃಕೆಯರು. ಸಾಮಾನ್ಯವಾಗಿ ಸ್ತ್ರೀ ದೇವತೆಗಳೆಂದು ಕರೆಯುತ್ತಾರೆ. ಇವರು ಒಂದೊಂದು ದೈವದ ಶಕ್ತಿಯೆಂದು ಹೇಳುತ್ತಾರೆ. ಇವರನ್ನು ಕ್ರಮವಾಗಿ ಬ್ರಹ್ಮ, ಮಹೇಶ್ವರ, ಕುಮಾರ, ವಿಷ್ಣು, ವರಾಹ, ಇಂದ್ರ, ಯಮ ದೇವರುಗಳ ಶಕ್ತಿದೇವತೆಗಳೆಂದು ಹೇಳುವುದುಂಟು. ಸಪ್ತಮಾತೃಕೆಯರ ಶಿಲ್ಪವನ್ನು ದೇವಾಲಯಗಳ ನವರಂಗದ ಒಂದು ಭಾಗದಲ್ಲಿ ಪಟ್ಟಿಕೆಗಳಲ್ಲಿ ಕೆತ್ತಲಾಗಿದೆ. ಇವುಗಳು ಒಂದೊಂದೇ ಪೀಠದಲ್ಲಿ ಪದ್ಮಾಸನದಲ್ಲಿ ಕುಳಿತಂತೆ ಕಂಡುಬಂದರೂ ಅವರವರ ಲಾಂಛನ ಸಹಿತವಾಗಿ ಶಿಲ್ಪಿಸಲಾಗಿರುತ್ತದೆ. ಕೆಲವೊಮ್ಮೆ ಇವರ ಜೊತೆಯಲ್ಲಿ ಗಣಪತಿ, ಭೈರವನನ್ನು ಅಥವಾ ವೀಣಾಧಾರಿಯಾದ ಶಿವನನ್ನು ಶಿಲ್ಪಿಸಲಾಗಿದೆ. ವಾಸ್ತುವಿದ್ಯಾ ಗ್ರಂಥದಲ್ಲಿ ಸೂರ್ಯ ಮತ್ತು ಶಕ್ತಿ ದೇವತೆಗಳಿಗೆ ಈ ದೇವಿಯರು ಕ್ರಿಯೆಯೊಡನೆ ನಾಲ್ಕು ದಿಕ್ಕುಗಳ ಬಾಗಿಲು ಕಾಯುವವರಾಗಿದ್ದಾರೆ. ಇವರಲ್ಲಿ ಬ್ರಾಹ್ಮೀ ಮತ್ತು ಮಹೇಶ್ವರಿಯರು ಪಶ್ಚಿಮ ಬಾಗಿಲಲ್ಲೂ ಕೌಮಾರಿ ಮತ್ತು ವೈಷ್ಣವಿಯರು ಉತ್ತರದ ಬಾಗಿಲಲ್ಲೂ ವರಾಹಿ ಮತ್ತು ಇಂದ್ರಾಣಿಯವರು ಪೂರ್ವದ ಬಾಗಿಲಲ್ಲೂ ಚಾಮುಂಡಿ ಮತ್ತು ಶ್ರೀಯರು ದಕ್ಷಿಣ ಬಾಗಿಲಲ್ಲೂ ಇರಬೇಕೆಂದು ತಿಳಿಸಿದೆ[೪೧]. ಹಾಗೆಯೇ ಇವರುಗಳು ಶಕ್ತಿದೇವತೆಗಳಾದುದರಿಂದ ನೀರಿನ ಸೆರೆಯಲ್ಲಿಟ್ಟು ಪೂಜಿಸುವ ಪದ್ಧತಿಯಿದೆ. ಆದುದರಿಂದ ಕೆಲವು ಕಡೆ ಬಾವಿಗಳ ಹಾಗೂ ಕೆರೆಗಳ ದಡದಲ್ಲಿಟ್ಟು ಪೂಜಿಸುವುದುಂಟು[೪೨]. ಈ ರೀತಿಯಲ್ಲಿ ಬ್ಯಾಡಗಿ ತಾಲೂಕಿನ ಬೆಳಕೇರಿ ಕಲ್ಲೇಶ್ವರ ದೇವಾಲಯ ಹತ್ತಿರವಿದೆ. ಚೌಡಧಾನಪುರ ಮುಕ್ತೇಶ್ವರ ದೇವಾಲಯ ಹತ್ತಿರ ಸಪ್ತಮಾತೃಕೆಯರ ಪಟ್ಟಿಕೆಯಿದೆ ಹಾಗೂ ಬಂಕಾಪುರ ಕೋಟೆ ಎಲ್ಲಮ್ಮ ದೇವಸ್ಥಾನದ ಮುಂದೆ ಇರುವ ಒಂದು ಭಗ್ನ ಸಪ್ತಮಾತೃಕೆಯರು ಮತ್ತು ಗಾಳಿಪೂಜೆ ರಾಮಲಿಂಗೇಶ್ವರ ದೇವಾಲಯದ ಗರ್ಭಗೃಹದಲ್ಲಿ ಸಪ್ತಮಾತೃಕೆಯ ಫಲಕ ಕಂಡುಬರುತ್ತದೆ.

ಹಂಸವಾಹನೆಯಾದ ಬ್ರಾಹ್ಮೀಯು ಬ್ರಹ್ಮನ ಶಕ್ತಿದೇವತೆಯಾಗಿದ್ದು ಬ್ರಹ್ಮನ ರೀತಿಯಲ್ಲಿ ನಾಲ್ಕು ಮುಖ ಆರು ಕೈಗಳನ್ನು ಹೊಂದಿರುತ್ತಾಳೆ.

ಹಾನಗಲ್ಲು ತಾಲೂಕಿನ ತಾರಕೇಶ್ವರ ದೇವಾಲಯ ಒಳಭಾಗದಲ್ಲಿ ಬ್ರಹ್ಮ ಶಿಲ್ಪವು ಪ್ರಾಮುಖ್ಯವನ್ನು ಹೊಂದಿದ್ದು ಮೂರು ಬಲಗೈಗಳಲ್ಲಿ ವರಮುದ್ರೆ, ಪಾಶ ವಸುವಿದ್ದು ಮೂರು ಎಡಗೈಗಳಲ್ಲಿ ಅಭಯಮುದ್ರೆ, ಪುಸ್ತಕ ಕಮಂಡಲವನ್ನು ಹಿಡಿದಿರುತ್ತಾಳೆ.

**ಮಹೇಶ್ವರಿ:**

ಈಕೆಯನ್ನು ಭೈರವಿ ಎಂತಲೂ ಸಹಕರೆಯುತ್ತಾರೆ. ಈಕೆ ಮಹೇಶ್ವರನ ಶಕ್ತಿದೇವತೆಯಾಗಿದ್ದು, ವಾಹನ ವೃಷಭ, ಇವಳು ಐದು ಮುಖ, ಮೂರು ಕಣ್ಣು ಹಾಗೂ ಹತ್ತು ಕೈಗಳನ್ನು ಹೊಂದಿದ್ದು, ಬಾಲಚಂದ್ರ ಭೂಷಣಳಾಗಿದ್ದಾಳೆ. ಐದು ಬಲಗೈಗಳಲ್ಲಿ ಅಭಯ ಮುದ್ರೆ, ಕೊಡಲಿ, ಶೂಲ, ವಜ್ರ ಖಡ್ಗವನ್ನು ಐದು ಎಡಗೈಗಳಲ್ಲಿ ವರಮುದ್ರೆ, ಅಂಕುಶ, ನಾಗ ಗಂಟ ಮತ್ತು ಪಾಶವನ್ನು ಹಿಡಿದಿದ್ದಾಳೆ.

**ಕೌಮುರಿ:**

ಈಕೆಯು ಆರು ತಲೆ ಹಾಗೂ ಹನ್ನೆರಡು ಕೈಗಳನ್ನು ಹೊಂದಿರುತ್ತಾಳೆ. ಆರು ಬಲಗೈಗಳಲ್ಲಿ ವರಮುದ್ರೆ, ಶಕ್ತಿ, ಪತಾಕೆ, ದಂಡ, ಪಾತ್ರೆ, ಬಾಣವನ್ನು ಆರು ಎಡೈಗಳಲ್ಲಿ ಅಭಯಮುದ್ರೆ ಕೊಡಲಿ. ಕುಕ್ಕುಟ (ಕೋಳಿ), ಕಮಲಬಿಲ್ಲು ಮತ್ತು ಗಂಟೆಯನ್ನು ಹಿಡಿದಿರುತ್ತಾಳೆ. ಇವಳ ವಾಹನ ನವಿಲಾಗಿದ್ದು ಈಕೆ ಕುಮಾರನ ಶಕ್ತಿದೇವತೆ ಎನ್ನಲಾಗಿದೆ.

**ವೈಷ್ಣವಿ:**

ಇವಳು ಆರು ಕೈಗಳನ್ನು ಹೊಂದಿದ್ದು, ಎಡಗೈಗಳಲ್ಲಿ ಚಕ್ರ, ಶಂಖವನ್ನು ವಿಶೇಷವಾಗಿ ವನಮಾಲೆಯನ್ನು ಹೊಂದಿರುತ್ತಾಳೆ. ಬಲಗೈಗಳಲ್ಲಿ ವರಮುದ್ರೆ, ಗದೆ, ಪದ್ಮವಿದ್ದು ಎಡಗೈಯಲ್ಲಿ ಅಭಯಮುದ್ರೆ, ಚಕ್ರ ಮತ್ತು ಶಂಖವನ್ನು ಹೊಂದಿರುತ್ತಾಳೆ. ಇವಳ ವಾಹನ ಗರುಡವಾಗಿದ್ದು, ಈಕೆ ವಿಷ್ಣುವಿನ ಶಕ್ತಿದೇವತೆಯಾಗಿದ್ದಾಳೆ. ಹಿರೇಕೆರೂರು ತಾಲ್ಲೂಕಿನ ಖಂಡೇಬಾಗೂರಿನಲ್ಲಿ ವೈಷ್ಣವಿ ಶಿಲ್ಪ ಕಂಡು ಬರುತ್ತದೆ.

**ವರಾಹಿ:**

ವರಾಹದ ಮುಖವನ್ನು ಹೊಂದಿರುತ್ತಾಳೆ. ಅಂದರೆ ದೊಡ್ಡದಾದ ಹೊಟ್ಟೆಯಿಂದ ಕೂಡಿರುತ್ತಾಳೆ. ಇವಳು ಆರು ಕೈಗಳನ್ನು ಹೊಂದಿದ್ದು, ಬಲಗೈಗಳಲ್ಲಿ ವರದಹಸ್ತ, ಖಡ್ಗ ದಂಡವಿದ್ದು, ಎಡಗೈಗಳಲ್ಲಿ ಅಭಯಮುದ್ರೆ ಖೇಟಕ ಮತ್ತು ಪಾತ್ರೆಯನ್ನು ಹೊಂದಿರುತ್ತಾಳೆ ಹಾಗೂ ಇವಳ ವಾಹನ ಗರುಡವಾಗಿದ್ದು, ಈಕೆ ವರಾಹನ ಶಕ್ತಿದೇವತೆಯಾಗಿದ್ದಾಳೆ.

**ಇಂದ್ರಾಣಿ:**

ಇಂದ್ರನ ರೀತಿಯಲ್ಲಿ ಸಾವಿರ ಕಣ್ಣುಗಳನ್ನು ಹೊಂದಿರುತ್ತಾಳೆ. ಇವಳು ಆರು ಕೈಗಳನ್ನು ಹೊಂದಿದ್ದು, ಬಲಗೈಗಳಲ್ಲಿ ವರಮುದ್ರೆ, ಸೂತ್ರ, ವಜ್ರವನ್ನು ಎಡಗೈಗಳಲ್ಲಿ ಅಭಯಮುದ್ರೆ, ಪಾತ್ರೆ, ಪದ್ಮವನ್ನು ಹೊಂದಿರುತ್ತಾಳೆ. ಇವಳ ವಾಹನ ಆನೆಯಾಗಿದ್ದು, ಈಕೆಯು ಇಂದ್ರನ ಶಕಿದೇವತೆ ಎನ್ನಬಹುದು. ಈಕೆಯು ಸಪ್ತಮಾತೃಕೆಯರಲ್ಲಿ ಬಹುಮುಖ್ಯವಾದ ದೇವತೆಯಾಗಿದ್ದಾಳೆ.

**ಚಾಮುಂಡಿ:**

ಕಪ್ಪನೆಯ ಶರೀರ ಕಾಂತಿಯ ಉಗ್ರದೇವತೆಯಾಗಿದ್ದು, ಈಕೆಯು ಸರ್ಪಗಳನ್ನು ಭೂಷಣವಾಗಿ ಪಡೆದು ಕೋರೆಹಲ್ಲುಗಳಿಂದಲೂ ದೊಡ್ಡದಾದ ಶರೀರದಿಂದಲೂ ಗುಳಿ ಕಣ್ಣುಗಳಿಂದಲೂ ಸಣ್ಣ ಹೊಟ್ಟೆಯಿಂದಲೂ ಕೂಡಿದವಳಾಗಿದ್ದು, ಕಾಮ ರೂಪಿಣಿಯೂ, ಕೊರಳಿಗೆ ರುಂಡಮಾಲೆಯನ್ನು ಧರಿಸಿರುತ್ತಾಳೆ. ಇವಳನ್ನು ಹಲವು ಕಡೆ ದುರ್ಗಿ ಎಂದು ಕರೆಯುವುದುಂಟು. ಈಕೆಯು ಹತ್ತು ಕೈಗಳನ್ನು ಹೊಂದಿದ್ದು, ಬಲಗೈಗಳಲ್ಲಿ ಖಡ್ಗ, ಬಾಣ, ಒನಕೆ, ಚಕ್ರ, ಚಾಮರವಿದ್ದು ಎಡಗೈಗಳಲ್ಲಿ ಖೇಟ, ಪಾಶ, ದಂಡ, ಕೂಡಲಿ ಮತ್ತು ಬಿಲ್ಲನ್ನು ಹೊಂದಿರುತ್ತಾಳೆ. ಇವಳ ವಾಹನ ನರಿ. ಈಕೆ ಯಮನ ಶಕ್ತಿ ದೇವತೆ[೪೩].

ಚಾಮುಂಡಿಯನ್ನು ಬಿಟ್ಟು ಉಳಿದವರಿಗೆ ಎಷ್ಟು ಕೈಗಳಿರಬೇಕೆಂಬ ನಿಯಮವಿಲ್ಲ. ಚಾಮುಂಡಿಗೆ ಎಂಟರಿಂದ ಹತ್ತು ಕೈಗಳನ್ನು ಉಳಿದವರಿಗೆ ಎರಡರಿಂದ ಆರು ಕೈಗಳನ್ನು ಬಿಡಿಸಿರುವುದುಂಟು. ಕೆಲವು ಕಡೆ ನಾಲ್ಕು ಕೈಗಳನ್ನು ಕೆತ್ತಲಾಗಿದೆ. ಆಯುಧಗಳ ಸಂಖ್ಯೆಯ ವಿಚಾರದಲ್ಲಿ ಇದೇ ರೀತಿಯದ್ದಾಗಿರುತ್ತದೆ[೪೪]. ಮೇಲೆ ತಿಳಿಸಿದಂತೆ ಎಲ್ಲಾ ದೇವತೆಗಳು ವಿಶಿಷ್ಠ ಲಕ್ಷಣವನ್ನು ಹೊಂದಿದ್ದರು. ಈಗ ದೊರೆಯುವ ಏಕಶಿಲಾ ಪಟ್ಟಿಕ ಸಮೂಹದ ಶಿಲ್ಪಗಳಲ್ಲಿ ಒಂದು ತಲೆ ಹಾವು. ಎರಡರಿಂದ ನಾಲ್ಕು ಕೈಗಳನ್ನು ಹೊಂದಿರುವಂತಹ ಶಿಲ್ಪಗಳೆ ಹೆಚ್ಚಿನ ಸಂಖ್ಯೆಯಲ್ಲಿವೆ. ಸಾಮಾನ್ಯವಾಗಿ ಶಿಲ್ಪಗಳು ದೇವಾಲಯದಲ್ಲಿ ಅಥವಾ ಕೆರೆಯ ದಂಡೆಯಲ್ಲಿ ಕಾಣಬರುತ್ತದೆ. ಇವರ ರಕ್ಷಣೆಗೆ ಗಣಪತಿ, ಭೈರವ, ಸ್ಕಂದ ಇತ್ಯಾದಿ ಪುರುಷ ದೇವತೆಗಳಿರುತ್ತವೆ. ಇವರನ್ನು ಮಾತೃದೇವತೆಗಳ ಕುಮಾರರೆಂದು ಪುರಾಣಗಳು ಪರಿಗಣಿಸಿವೆ[೪೫]. ಹಾನಗಲ್ಲು ತಾಲ್ಲೂಕಿನ ತಿಳುವಳ್ಳಿ ಶಾಂತೇಶ್ವರ ದೇವಾಲಯ ನವರಂಗದಲ್ಲಿ ಚಾಮುಂಡಿ ಶಿಲ್ಪವಿದೆ. ಬ್ಯಾಡಗಿ ತಾಲ್ಲೂಕಿನ ಸಿಡೇನೂರು ವೀರಭದ್ರ ದೇವಾಲಯ ಗರ್ಭಗೃಹದ ದೇವಕೋಷ್ಠಕಗಳಲ್ಲಿ ಚಾಮುಂಡಿ ಮೂರ್ತಿ ಶಿಲ್ಪ ಕಂಡು ಬರುತ್ತದೆ.

**ಸರಸ್ವತಿ:**

ಸರಸ್ವತಿಯು ವಿದ್ಯಾದೇವತೆ. ಬ್ರಹ್ಮನ ಶಕ್ತಿ. ಶ್ವೇತ ಪದ್ಮಾಸನೆ. ಶುಭ್ರವಸ್ತ್ರಾನ್ವಿತೆ. ಧವಳವರ್ಣೆ ಇವಳ ಸುತ್ತಲೂ ಋಷಿಗಳು ಇರುತ್ತಾರೆ. ಎಲ್ಲಾ ಧರ್ಮಗಳಲ್ಲೂ ಸರಸ್ವತಿಯು ಪೂಜ್ಯನೀಯಳು. ಅಕ್ಷರಮಾಲೆ, ಪುಸ್ತಕ, ವೀಣೆ, ಪಾಶ, ಅಂಕುಶ ಮುಂತಾದವು ಅವಳ ಕೈಯಲ್ಲಿರುತ್ತದೆ. ಸಾಮಾನ್ಯವಾಗಿ ಕೆಳಭಾಗದ ಎಡಗೈಯಲ್ಲಿ ವ್ಯಾಖ್ಯಾನ ಮುದ್ರೆಯನ್ನು ಹೊಂದಿರುತ್ತಾಳೆ. ಇವಳನ್ನು ವಿಷ್ಣುವಿನ ಶಕ್ತಿ

ಎಂದು ಬಿಂಬಿಸಲಾಗುತ್ತದೆ. ಶೃಂಗೇರಿಯಲ್ಲಿ ಶಾರದೆ, ಶಾಕ್ತಶಾರದೆ ಆದರ ಮೂರ್ತಿ ಮೂಲಕ ಲಕ್ಷಣವನ್ನು ಕಾಣಬಹುದಾಗಿದೆ. ಬ್ಯಾಡಗಿ ತಾಲ್ಲೂಕು ಮೋಟೆ ಬೆನ್ನೂರು ಭುಜಲಿಂಗೇಶ್ವರ ದೇವಾಲಯ ದೇವಕೋಷ್ಠಕಗಳಲ್ಲಿ ಸರಸ್ವತಿ ಮೂರ್ತಿ ಶಿಲ್ಪವಿದೆ ಹಾಗೂ ಕಳೇಕುಮ್ಮೂರ ರಾಮಲಿಂಗೇಶ್ವರ ದೇವಾಲಯ ದೇವಕೋಷ್ಠಕಗಳಲ್ಲಿ ಸರಸ್ವತಿ ಮೂರ್ತಿ ಶಿಲ್ಪ ಕಂಡು ಬರುತ್ತದೆ.

**ಪಾರ್ವತಿ:**

ಶಿವನ ಹೆಂಡತಿಯಾದ ಈಕೆಯನ್ನು ಗೌರಿ ಎಂತಲೂ ಕರೆಯುತ್ತಾರೆ. ಶಿವನನ್ನು ಸ್ತ್ರೀ ರೂಪದಲ್ಲಿ ಪೂಜಿಸುವ ಭಕ್ತರು ಶಕ್ತಿಯ ಜೊತೆಯಿಲ್ಲದೆ ನಿರಾಕಾರ ಶಿವನಿಗೆ ಯಾವ ಅಸ್ಥಿತ್ವವೂ ಇಲ್ಲ ಎನ್ನುತ್ತಾರೆ. ಪಾರ್ವತಿ ಹಾಗೂ ಇನ್ನಿತರ ಸ್ತ್ರೀ ದೇವತೆಗಳಿಗೆ ಪ್ರತ್ಯೇಕ ಗುರಿಗಳನ್ನು ಕಟ್ಟುವ ಪದ್ಧತಿ ಇರಲಿಲ್ಲ. ಆದರೆ, ವಿಜಯನಗರದ ಕಾಲದಲ್ಲಿ ನಿರ್ಮಾಣವಾದಂತಹ ದೇವಾಲಯಗಳಲ್ಲಿ ವಾಸ್ತುಪ್ರಕಾರವಾಗಿ ಒಂದು ಗುಡಿಯನ್ನು ಕಟ್ಟಿಸಿ, ಅಲ್ಲಿ ದೇವಿಯನ್ನು ಪ್ರತಿಷ್ಠಾಪಿಸುವ ಪದ್ಧತಿ ಜಾರಿಗೆ ಬಂತು. ಸುಪ್ರಭೇದಾಗಮದಲ್ಲಿ ಪಾರ್ವತಿಯು ಉನ್ನತ ಸ್ತನದೊಂದಿಗೆ ಹೆಚ್ಚಿನ ಕಂಠಹಾರದಿಂದ ಸೌಂದರ್ಯವತಿಯಾಗುತ್ತಾಳೆ ಎಂದು ಉಲ್ಲೇಖಿಸಿದೆ. ಈಕೆ ಚತುರ್ಭುಜೆಯಾಗಿದ್ದು, ಕೈಯಲ್ಲಿ ಡಮರು, ತ್ರಿಶೂಲ, ಪಾಶ, ಅಂಕುಶ ಹೊಂದಿರುತ್ತಾಳೆ. ಕೆಲವು ಸಮಯದಲ್ಲಿ ಅಭಯಹಸ್ತದ ಜೊತೆಯಲ್ಲಿ ಅಕ್ಷರಮಾಲೆಯನ್ನು ಹೊಂದಿರುತ್ತಾಳೆ. ಕೆಲವೊಮ್ಮೆ ಶಿವನ ತೊಡೆಯ ಮೇಲೆ ಕುಳಿತಿರುವಂತೆಯೂ ಚಿತ್ರಿಸಲಾಗಿದೆ. ಹಾನಗಲ್ಲು ತಾಲ್ಲೂಕಿನ ಕೆಲವರಕೊಪ್ಪ, ಈಶ್ವರ ದೇವಾಲಯದ ಅಂತರಾಳ ಕೋಷ್ಠಕದಲ್ಲಿ ಪಾರ್ವತಿ ಶಿಲ್ಪ ಕಂಡು ಬರುತ್ತದೆ ಹಾಗೂ ರಾಣಿಬೆನ್ನೂರು ತಾಲ್ಲೂಕು ಕುಪ್ಪೆಲೂರು ಈಶ್ವರ ದೇವಾಲಯದಲ್ಲಿ ಪಾರ್ವತಿ ಶಿಲ್ಪವಿದೆ.

**ನಂದಿ:**

ನಂದಿಯು ಶಿವನ ವಾಹನವಾಗಿದ್ದು, ಶೈವ ದೇವಾಲಯಗಳಲ್ಲಿರುವ ಕಡೆಗಳಲೆಲ್ಲ ನಂದಿಯ ಶಿಲ್ಪಗಳಿರುತ್ತವೆ. ಸಾಮಾನ್ಯವಾಗಿ ಲಿಂಗಕ್ಕೆ ಎದುರಾಗಿ ಶಿಖರದ ಮೊದಲ ಹಂತದ ಮೂಲೆಗಳಲ್ಲಿ ಹಾಗೂ ಸ್ತೂರ್ತಿಯ ನಾಲ್ಕು ಮೂಲೆಗಳಲ್ಲಿ ನಂದಿ ಶಿಲ್ಪಗಳನ್ನು ಕೆತ್ತಿರುತ್ತಾರೆ. ಉಮಾಕಾಂತ ಶಿವನು ನಂದಿಯ ಮೇಲೆ ಕುಳಿತ ಶಿಲ್ಪಗಳನ್ನು ಲಲಾಟ ಬಿಂಬದಲ್ಲಿ. ಭುವನೇಶ್ವರಗಳಲ್ಲಿ ಹಾಗೂ ಬಿಡಿ ಶಿಲ್ಪಗಳಲ್ಲಿ ಕಾಣಬಹುದು. ನಂದಿ ವಿನೀತ ಮೂರ್ತಿಯಾಗಿ ಲಿಂಗಕ್ಕೆ ಎದುರಾಗಿ ಕುಳಿತಿರುವಂತೆ ಸುಖನಾಸಿ ಅಥವಾ ನವರಂಗದಲ್ಲಿ ಇಟ್ಟಿರುತ್ತಾರೆ. ಇದಕ್ಕೆ ವಿಶಿಷ್ಟ ಅಲಂಕಾರವಿರುತ್ತದೆ. ಕೆಲವು ಕಡೆಗಳಲ್ಲಿ ನಂದಿಗೆ ಪೂಜೆ ಸಲ್ಲಿಸುವ ವಿಶೇಷ ಪದ್ಧತಿ ಇದೆ. ಈ ಜಿಲ್ಲೆಯ ಪ್ರತಿಯೊಂದು ಶೈವ ದೇವಾಲಯಗಳಲ್ಲಿ ನಂದಿಯ ಶಿಲ್ಪವನ್ನು ಕಾಣಬಹುದು. ಮಾಣಸಗಿ ಕಲ್ಮೇಶ್ವರ ದೇವಾಲಯ, ಮಾಟಬೆನ್ನೂರು, ಮಲ್ಲಿಕಾರ್ಜುನ ದೇವಾಲಯ, ಹಾನಗಲ್ಲು ಈಶ್ವರ ದೇವಾಲಯ, ಹಿರೇಹಳ್ಳಿ, ರಾಮಲಿಂಗ ದೇವಾಲಯಗಳಲ್ಲಿ ಕಾಣಬಹುದಾಗಿದೆ.

**ಭೈರವ:**

ಭೈರವನು ಶಿವನ ಒಂದು ಅವತಾರ. ಭೈರವನ ಶಿಲ್ಪದ ಬಗ್ಗೆ ವಿಷ್ಣು ಧರ್ಮೋತ್ತರದಲ್ಲಿ ಉಲ್ಲೇಖವಿದೆ. ಒಟ್ಟು ೬೪ ಭೈರವನ ಅವತಾರಗಳಿವೆ. ಇವುಗಳಲ್ಲಿ ವಟುಕ ಭೈರವ ಮತ್ತು ಸೌರ್ಣಾಕರ್ಷಣ ಭೈರವ ಮುಖ್ಯವಾದವುಗಳಾಗಿವೆ[೪೬]. ಭೈರವ ನಗ್ನ ರೂಪದಲ್ಲಿದ್ದು ಪೀಠದಲ್ಲಿ ಚೇಳಿನ ಶಿಲ್ಪವಿರುತ್ತದೆ. ಚತುರ್ಭುಜವನ್ನು ಹೊಂದಿರುವ ಭೈರವನು ೩ ಕೈಗಳಲ್ಲಿ ತ್ರಿಶೂಲ, ಢಮರುಗ ಮತ್ತು ಖಡ್ಗವನ್ನು ಹೊಂದಿದ್ದು, ಮತ್ತೆರಡು ಕೈಯಲ್ಲಿ ರುಂಡವಿದ್ದು ಅದನ್ನು ನಾಯಿಯು ನೆಕ್ಕುತ್ತಿರುವ ಶಿಲ್ಪವನ್ನು ಕೆತ್ತಲಾಗಿದೆ. ಕೆಲವು ಶಿಲ್ಪಗಳಲ್ಲಿ ರುಂಡಮಾಲೆಯನ್ನು ಧರಿಸಿ ಕಿವಿಗಳಿಗೆ ಸರ್ಪದ ಕುಂಡಲಗಳನ್ನು ಧರಿಸಿರುವುದೆಂದು ಮತ್ತು ಕಾಲಲ್ಲಿ ಪಾದುಕೆಗಳನ್ನು ಧರಿಸಿರುವುದು. ಸೊಂಟದಲ್ಲಿ ಗಂಟೆಯಿರುತ್ತದೆ. ಮಂಡಿಯ ಭಾಗದಲ್ಲಿ ಸರ್ಪಸುರುಳಿ ಹಾಕಿಕೊಂಡಿರುತ್ತದೆ. ಇದರ ಇಕ್ಕೆಲಗಳಲ್ಲಿ ಬೇತಾಳಗಳು ನರ್ತಿಸುತ್ತಿರುವಂತೆ ಕೆತ್ತಲಾಗಿದೆಯಲ್ಲದೆ ಸುಂದರವಾದ ಕಿರೀಟ ಶಿರವನ್ನು ಅಲಂಕರಿಸಲಾಗಿರುತ್ತದೆ. ರಾಣಿಬೆನ್ನೂರು ತಾಲ್ಲೂಕಿನ ಅಂತರವಳ್ಳಿ ಈಶ್ವರಗುಡಿ ಒಳಭಾಗದಲ್ಲಿ ಭೈರವ ಶಿಲ್ಪವಿದೆ ಹಾಗೂ ಅಸುಂಡಿ ಕಲ್ಲೇಶ್ವರ ದೇವಾಲಯದ ದಕ್ಷಿಣಭಾಗದಲ್ಲಿ ಬೈರವ ಶಿಲ್ಪ ಕಂಡು ಬರುತ್ತದೆ.

**ವೀರಭದ್ರ:**

ಈತ ಶಿವನ ಮತ್ತೊಂದು ಅವತಾರ. ಕೂರ್ಮ ಪುರಾಣಗಳಲ್ಲಿ ವೀರಭದ್ರನ ಉಲ್ಲೇಖವಿದೆ[೪೭]. ಚತುರ್ಭುಜವನ್ನು ಹೊಂದಿರುವ ಈತನು ಕೈಯಲ್ಲಿ ಬಿಲ್ಲು, ಬಾಣ, ಕತ್ತಿ ಮತ್ತು ಗುರಾಣಿಗಳನ್ನು ಹಿಡಿದಿರುತ್ತಾನೆ. ವಸ್ತ್ರಧಾರಿಯಾಗಿದ್ದು, ಕೆಲವು ಶಿಲ್ಪಗಳಲ್ಲಿ ಶಿಲ್ಪಿಸಿರುವುದುಂಟು. ಕೊರಳಿಗ ರುದ್ರಾಕ್ಷಿಮಾಲೆಯ ಧಾರಣೆ ಇರುತ್ತದೆ. ಸುಂದರವಾದ ಕಿರೀಟವಿರುತ್ತದೆ. ಹಾನಗಲ್ಲು ತಾಲೂಕಿನ ಕಲಕೇರಿ ವೀರಭದ್ರದೇವಾಲಯ, ಕಾಗಿನೆಲೆ ವೀರಭದ್ರಗುಡಿ, ಚಿಕ್ಕ ಬಾಸೂರು ಸಿದ್ಧೇಶ್ವರ ದೇವಾಲಯ, ಗರ್ಭಗೃಹದಲ್ಲಿ ವೀರಭದ್ರ ಮೂರ್ತಿ ಶಿಲ್ಪ, ಬ್ಯಾಡಗಿ ವೀರಭದ್ರದೇವಾಲಯ, ಮಾಟಬೆನ್ನೂರು ವೀರಭದ್ರ ದೇವಾಲಯ, ಹೊನ್ನತಿ (ಹಳೆಯ) ವೀರಭದ್ರದೇವಾಲಯ, ನೀಲಗಿರಿಯ ವೀರಭದ್ರ ದೇವಾಲಯ ಗರ್ಭಗೃಹದಲ್ಲಿ ಎರಡು ವೀರಭದ್ರ ಶಿಲ್ಪಗಳನ್ನು ಕಾಣಬಹುದು.

**ಮಹಿಷಮರ್ದಿನಿ:**

ಶಕ್ತಿ ದೇವತೆಗಳಲ್ಲಿ ಮಹಿಷಮರ್ದಿನಿಯು ಒಬ್ಬಳು. ಇವಳದು ಸದಾ ಉಗ್ರರೂಪ. ಈಕೆಯು ರೌದ್ರರೂಪಿಣಿ ಸ್ತ್ರೀಯಾಗಿದ್ದು, ಒಂದು ಮುಖ ಹಾಗೂ ಅನೇಕ ಕೈಗಳನ್ನು ಹೊಂದಿರುತ್ತಾಳೆಂದು ಶಾಸ್ತ್ರಗ್ರಂಥಗಳಲ್ಲಿ ವರ್ಣಿಸಿದೆ[೪೮]. ಶಿಲ್ಪಗಳಲ್ಲಿಯೂ ಇದೇ ಭಾವವಿರುವಂತೆ ಶಿಲ್ಪಿಸಲಾಗಿದೆ. ಶಿವನ ಪ್ರಭೆಯಿಂದ ಯಮನ ಮಹಿಷಮರ್ದಿನಿಯ ಮುಖ, ಪ್ರಭೆಯಿಂದ ಕೂದಲು, ವಿಷ್ಣುವಿನ ಪ್ರಭೆಯಿಂದ ಕೈಗಳು, ಚಂದ್ರನ ಪ್ರಭೆಯಿಂದ ಸ್ತನಗಳು, ಇಂದ್ರನ

ಪ್ರಭೆಯಿಂದ ನಡುವು ಹೀಗೆ – ಒಂದೊಂದು ದೇವತೆಯ ಪ್ರಭೆಯಿಂದ ರೂಪಿತವಾಗಿರುತ್ತದೆ[೪೯]. ಮಹಿಷನು ಕೋಣದ ರೂಪವನ್ನು ಧರಿಸಿ ಬಂದಾಗ ಮಹಿಷ ಮರ್ದಿನಿಯು ಕೋಣದ ತಲೆಯನ್ನು ಕತ್ತರಿಸಿ ಕಾಲಿನಿಂದ ಮೆಟ್ಟಿ ತುಳಿದಾಗ ಅಸುರನು ಅದರ ಕತ್ತಿನಿಂದ ಹೊರಬರುತ್ತಾನೆ. ಆಗ ಅವನ ಮೇಲೆ ಯುದ್ಧ ಮಾಡಿ ಸಂಹರಿಸುತ್ತಾಳೆ. ಪಂಚಾಯತನ ಪೂಜೆ ಹೆಚ್ಚು ಪ್ರಚಾರಗಳಲ್ಲಿ ಬಂದಂತೆ ಗರ್ಭಗುಡಿಯ ಎಡಬದಿಗೆ ಮಹಿಷಮರ್ದಿನಿಯನ್ನು ಇಟ್ಟು ಪೂಜಿಸುವ ಪದ್ಧತಿ ಪ್ರಾರಂಭವಾಯಿತು. ಈ ರೀತಿಯಲ್ಲಿ ಶೈವ ದೇವಾಲಯಗಳಲ್ಲಿ ಈ ಶಿಲ್ಪವಿರುವುದನ್ನು ಕಾಣಬಹುದು. ಅಂದರೆ ಚಿಕ್ಕಬಾಸೂರು ಗವಿಸಿದ್ದೇಶ್ವರ ದೇವಾಲಯ, ಉಕ್ಕುಂದ ಕಲ್ಮೇಶ್ವರ ದೇವಾಲಯ, ಗುಡ್ಡಗಆನವೇರಿ ದೇವಾಲಯ, ನಿಟ್ಟೂರ ಕಲ್ಮೇಶ್ವರ ದೇವಾಲಯಗಳಲ್ಲಿ ಮಹಿಷ ಮರ್ದಿನಿಯ ಶಿಲ್ಪಗಳನ್ನು ಕಾಣಬಹುದು.

## ಅಷ್ಟದಿಕ್ಪಾಲಕರು:

ಪ್ರತಿಯೊಂದು ದಿಕ್ಕಿಗೂ ಒಬ್ಬೊಬ್ಬ ದೇವತೆಗಳಿರುತ್ತಾರೆ. ಇವರನ್ನು ಅಷ್ಟದಿಕ್ಪಾಲಕರು ಎಂದು ಕರೆಯುತ್ತಾರೆ[೫೦]. ಅಷ್ಟದಿಕ್ಪಾಲಕರಿಗೆ ಪ್ರತ್ಯೇಕವಾದ ದೇವಾಲಯಗಳು ಇಲ್ಲದಿದ್ದರೂ ಇವರಿಗೆ ಶೈವ ಮತ್ತು ವೈಷ್ಣವ ದೇವಾಲಯಗಳಲ್ಲಿ ಪ್ರತ್ಯೇಕವಾದ ಸ್ಥಾನವನ್ನು ಕಲ್ಪಿಸಲಾಗಿದೆ. ಇವರನ್ನು ಒಂದೊಂದು ದಿಕ್ಕಿಗೂ ಒಬ್ಬೊಬ್ಬರಂತೆ ಪರಿಗಣಿಸಲಾಗುತ್ತದೆ[೫೧]. ಸಾಮಾನ್ಯವಾಗಿ ದೇವಾಲಯಗಳಲ್ಲಿ ಪ್ರತ್ಯೇಕವಾದ ಬಿಡಿ ಶಿಲ್ಪಗಳು ಇರುವುದಿಲ್ಲ. ಇವರನ್ನು ದೇವಾಲಯಗಳ ಭುವನೇಶ್ವರಗಳಲ್ಲಿ ಆಯಾ ದಿಕ್ಕಿಗೆ ಅನುಗುಣವಾಗಿ ಸಪತ್ನಿಕರಾಗಿ ವಾಹನ ರೂಢರಾಗಿರುವಂತೆ ಶಿಲ್ಪಿಸಲಾಗಿರುತ್ತದೆ. ಕೆಲವು ಕಡೆ ಭುವನೇಶ್ವರಿಯ ಮಧ್ಯದಲ್ಲಿ ಪದ್ಮಮಂಡಲ ವಿಮಾನವಿದ್ದು, ಕೆಳಭಾಗದಲ್ಲಿ ಪಟ್ಟಿಕೆಯಲ್ಲಿ ಆಯಾ ದಿಕ್ಕಿಗೆ ಅನುಗುಣವಾಗಿ ಚಿತ್ರಿಸಲಾಗಿರುತ್ತದೆ. ಕೆಲವು ಕಡೆ ಆಯಾ ದಿಕ್ಕಿಗೆ ಅನುಗುಣವಾಗಿ ಕೇವಲ ಅಷ್ಟದಿಕ್ಪಾಲಕರನ್ನೇ ಚಿತ್ರಿಸಲಾಗಿದ್ದು, ಮಧ್ಯಭಾಗದಲ್ಲಿ ಆಯಾ ದೇವಾಲಯದ ಮುಖ್ಯ ದೇವರಮೂರ್ತಿಯ ಶಿಲ್ಪ ಅಥವಾ ಅವತಾರಗಳ ಶಿಲ್ಪವನ್ನು ಶಿಲ್ಪಿಸಲಾಗಿರುತ್ತದೆ. ಇವುಗಳಲ್ಲಿ ಪೂರ್ವದಿಕ್ಕಿನಲ್ಲಿ ಇಂದ್ರ, ಆಗ್ನೇಯ ದಿಕ್ಕಿನಲ್ಲಿ ಅಗ್ನಿ ದಕ್ಷಿಣ, ದಿಕ್ಕಿನಲ್ಲಿ ಯವ. ನೈರುತ್ಯ ದಿಕ್ಕಿನಲ್ಲಿ ನಿರುತಿ. ಪಶ್ಚಿಮದಲ್ಲಿ ವರುಣ, ವಾಯುವ್ಯದಲ್ಲಿ ವಾಯು, ಉತ್ತರದಲ್ಲಿ ಈಶನೂ (ಶಿವನು) ಇವರುಗಳು ಅಷ್ಟದಿಕ್ಕುಗಳಲ್ಲಿ ಕಂಡುಬರುತ್ತಾರೆ. ಇವರುಗಳ ಶಿಲ್ಪಗಳನ್ನು ಹಾವೇರಿ ಜಿಲ್ಲೆಯ ಹಿರೇಮಾಗನೂರ ಕಲ್ಮೇಶ್ವರ ದೇವಾಲಯದಲ್ಲಿ ಅಷ್ಟದಿಕ್ಪಾಲಕರ ಶಿಲ್ಪಗಳಿವೆ.

## ದ್ವಾರಪಾಲಕರು:

ದೇವಾಲಯಗಳಲ್ಲಿ ದ್ವಾರಪಾಲಕರಿಗೆ ವಿಶೇಷ ಸ್ಥಾನವಿರುತ್ತದೆ. ದೇವಾಲಯದ ಗರ್ಭಗೃಹ. ಸುಖನಾಸಿ. ನವರಂಗ ಮತ್ತು ಮುಖ ಮಂಟಪಗಳ ದ್ವಾರಬಂಧದ ಕೆಳಭಾಗದಲ್ಲಿ ಇವರನ್ನು ಶಿಲ್ಪಿಸಿರುವುದು ರೂಢಿಯಲ್ಲಿದೆ. ದ್ವಾರಪಾಲಕರ ಶಿಲ್ಪಗಳು ಆಯಾ ಪಂಥಗಳಿಗೆ ಅನುಗುಣವಾಗಿ ಇರುತ್ತವೆ. ಶೈವ ದೇವಾಲಯಗಳಲ್ಲಿ ಶೈವ ದ್ವಾರಪಾಲಕರನ್ನು, ವೈಷ್ಣವ ದೇವಾಲಯುದಲ್ಲಿ ವೈಷ್ಣವ ದ್ವಾರಪಾಲಕರನ್ನು ಶಿಲ್ಪಿಸಲಾಗುತ್ತದೆ. ಆಯಾ ದಿಕ್ಕಿಗೆ ಅನುಗುಣವಾಗಿ ಇರುವ ದ್ವಾರಪಾಲಕರಿಗೆ ಬೇರೆ

ಬೇರೆ ಹೆಸರುಗಳಿವೆ. ವೈಷ್ಣವ ದ್ವಾರಪಾಲಕರನ್ನು ಜಯ – ವಿಜಯ ಎಂದು ಕರೆಯುತ್ತಾರೆ. ಇವರ ಕೈಗಳಲ್ಲಿ ಶಂಖ, ಚಕ್ರ, ಗದೆ ಇದ್ದು ಮತ್ತೊಂದು ಹಸ್ತವು ಸೂಚ ಹಸ್ತವಾಗಿರುತ್ತದೆ. ಶೈವ ದ್ವಾರಪಾಲಕರಲ್ಲಿ ತ್ರಿಶೂಲ, ಢಮರು, ಪಾಶ, ಗದೆ ಮತ್ತು ಅಭಯ ಹಸ್ತ (ಚಿತ್ರ)ವನ್ನು ಹೊಂದಿರುತ್ತದೆ. ಇವರನ್ನು ನಂದಿ, ಭೃಂಗಿ ಎಂದು ಕರೆಯುತ್ತಾರೆ. ಪೂರ್ವ ಭಾಗದಲ್ಲಿರುವವರನ್ನು ಚಂಡ, ಪ್ರಚಂಡ ಎಂತಲೂ ಪಶ್ಚಿಮ ದಿಕ್ಕಿನಲ್ಲಿ ಇರುವವರನ್ನು ಧಾತ್ರ – ವಿಧಾತ್ರ ಎಂತಲೂ ದಕ್ಷಿಣ ದಿಕ್ಕಿನಲ್ಲಿರುವವರನ್ನು ಭದ್ರ – ಸುಭದ್ರ ಎಂತಲು ಕರೆಯುತ್ತಾರೆ. (ಈಶ್ವರ ಸಂಹಿತೆ, ಪದ್ಮ ಸಂಹಿತೆ) ಸಾಮಾನ್ಯವಾಗಿ ತ್ರಿಕೂಟಲ ದೇವಾಲಯಗಳಲ್ಲಿ ಬೇರೆ ಬೇರೆ ದಿಕ್ಕಿಗಿರುವ ದ್ವಾರಪಾಲಕರ ಶಿಲ್ಪಗಳನ್ನು ಗಮನಿಸಬಹುದು. ಶಿಲ್ಪಗಳು ದೇವಾಲಯದ ಲಕ್ಷಣಕ್ಕೆ ಅನುಗುಣವಾಗಿ ಶಿಲ್ಪಿಸಿರುತ್ತಾರೆ. ಇವುಗಳನ್ನು ದೇವಾಲಯದ ಎಲ್ಲಾ ಭಾಗಗಳಲ್ಲೂ ನಿರ್ಮಿಸಬಾರದೆಂದು ನಿಯಮವಿಲ್ಲ. ಆದುದರಿಂದ ಕೆಲವು ದೇವಾಲಯಗಳಲ್ಲಿ ಮುಖಮಂಟಪಗಳ ದ್ವಾರದ ಇಕ್ಕೆಲಗಳಲ್ಲಿ ಮಾತ್ರ ದ್ವಾರಪಾಲಕರ ಶಿಲ್ಪಗಳನ್ನು ಶಿಲ್ಪಿಸಿರುತ್ತಾರೆ. ಈ ತರಹದ ಶಿಲ್ಪಗಳನ್ನು ಶೇಷಗಿರಿ – ರಾಮಲಿಂಗೇಶ್ವರ ದೇವಾಲಯ, ಹೊಳೆಆನವೆರಿ ಸಂಗಮೇಶ್ವರ ದೇವಾಲಯ, ಕನ್ನೇಶ್ವರ ಕಣ್ಣಪ್ಪ (ಕಲ್ಲೇಶ್ವರ ದೇವಾಲಯ) ಕಲಕೇರಿ ಸೋಮಲಿಂಗೇಶ್ವರ ದೇವಾಲಯಗಳಲ್ಲಿ ಕಾಣಬಹುದು.

**ಟಿಪ್ಪಣಿಗಳು:**

೧. ದಿವಾಕರ ಆರ್.ಆರ್., ೨೦೦೬, ಕರ್ನಾಟಕದ ಪರಂಪರೆ, ಸಂ. – ೧, ಬೆಂಗಳೂರು, ಪುಟ ೧೭೦.

೨. ಸರ್ ಜಾನ್ ಮಾರ್ಷಲ್–೧೯೭೩, ಮಹೆಂಜೋದಾರೋ ಅಂಡ್ ದ ಇಂಡಸ್ ಸಿವಿಲೇಷನ್, ಇಂಡೋಲಾಜಿಕಲ್ ಬುಕ್ ಹೌಸ್, ಪುಟ ೫೨.

೩. ಸರ್ ಚಾರ್ಲ್ಸ್, ವಿಲಿಯಮ್ ಹಿಂದೂಯಿಸಂ ಅಂಡ್ ಬುದ್ಧಿಸಂ, ಸಂಪುಟ – ೨, ಪುಟ ೧೪೩.

೪. ಮಹದೇವ ಸಿ. ಮತ್ತು ಇತರರು, ೧೯೯೯, ಕರ್ನಾಟಕ ದೇವಾಲಯ ಕೋಶ : ಹಾವೇರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ಪುಟ ೫೬.

೫. ಅದೇ, ಪುಟ ೧೫–೧೬.

೬. ಅದೇ, ಪುಟ ೨೦.

೭. ಅದೇ, ಪುಟ ೨೧.

೮. ಕುಲಕರ್ಣಿ ಡಿ.ಜಿ., ೨೦೦೮, ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು: ಕರ್ನಾಟಕ ಇತಿಹಾಸ, ಸಂಶೋಧನ ಮಂಡಲ, ಧಾರವಾಡ, ಪುಟ. ೯೫–೯೬.

೯. ಮಹದೇವ ಸಿ. ಮತ್ತು ಇತರರು, ೧೯೯೯, ಕರ್ನಾಟಕ ದೇವಾಲಯ ಕೋಶ : ಹಾವೇರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ಪುಟ ೫೬.

೧೦. ಕ.ಇ.ಸಂ.II, ೫, ಎಸ್.ಐ.ಐ.ಸಂ.XX ೯, ಐ.ಐ.ಸಂ. XI, ಪುಟ. ೬೯.

೧೧. ಎಸ್.ಐ.ಐ.ಸಂ. ೨೦, ಪುಟ ೩೫.

೧೨. ಮಹದೇವ ಸಿ. ಮತ್ತು ಇತರರು, ೧೯೯೯, ಕರ್ನಾಟಕ ದೇವಾಲಯ ಕೋಶ : ಹಾವೇರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ಪುಟ ೫೬.

೧೩. ಎದುರ್ಕಳೆ ಕೆ. ಶಂಕರನಾರಾಯಣಭಟ್ಟ–೧೯೮೨, ಹಿಂದೂ ಧರ್ಮದ ಪರಿಚಯ, ರಾಮಕೃಷ್ಣ ಪ್ರಕಾಶನ, ಭಾಗಮಂಡಲ, ಪುಟ ೨೬೦.

೧೪. ದಿವಾಕರ ಆರ್.ಆರ್., ೨೦೦೬, ಕರ್ನಾಟಕದ ಪರಂಪರೆ : ಸಂ. – ೧, ಬೆಂಗಳೂರು, ಪುಟ ೧೮೫.

೧೫. ಮಹದೇವ ಸಿ. ಮತ್ತು ಇತರರು, ೧೯೯೯, ಕರ್ನಾಟಕ ದೇವಾಲಯ ಕೋಶ, ಹಾವೇರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ಪುಟ ೯–೧೦.

೧೬. ಅದೇ, ಪುಟ ೧೨೯.

೧೭. ಅದೇ, ಪುಟ ೨೩೭–೨೪೦.

೧೮. ಚಿದಾನಂದಮೂರ್ತಿ ಎ., ೨೦೦೮, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಬೆಂಗಳೂರು, ಪುಟ. ೭೩.

೧೯. ದಿವಾಕರ ಆರ್.ಆರ್., ೨೦೦೬, ಕರ್ನಾಟಕದ ಪರಂಪರೆ, ಸಂ. – ೧, ಬೆಂಗಳೂರು, ಪುಟ ೭೩.

೨೦. ಕನ್ನಡ ವಿಷಯ ವಿಶ್ವಕೋಶ, ಸಂಪುಟ ೮, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮಾನಸಗಂಗೋತ್ರಿ, ಮೈಸೂರು, ಪುಟ. ೩೫೬

೨೧. ಮಹದೇವ ಸಿ. ಮತ್ತು ಇತರರು, ೧೯೯೯, ಕರ್ನಾಟಕ ದೇವಾಲಯ ಕೋಶ, ಹಾವೇರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ಪುಟ ೭೩.

೨೨. ಅದೇ, ಪುಟ ೧೮೫.

೨೩. ಧಾ.ಜಿ.ಶಾ.ಸೂ.ಚಿ., ಶಾ.ಸಂ.೫೮, ಕ್ರಿ.ಶ.೧೧೬೮ ಮತ್ತು ರವಿಕುಮಾರ ಕೆ. ಅಪ್ರಕಟಿತ ನದಿಹರಳಹಳ್ಳಿ ಲೇಖನ.

೨೪. ಮಹದೇವ ಸಿ. ಮತ್ತು ಇತರರು, ೧೯೯೯, ಕರ್ನಾಟಕ ದೇವಾಲಯ ಕೋಶ : ಹಾವೇರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ಪುಟ ೮೫.

೨೫. ಅದೇ, ಪುಟ. ೧೩೦, ೧೩೪, ೧೩೭.

೨೬. ಪ್ರೊ. ಹರವಿಶೆಟ್ಟರ ಎಂ.ಎಚ್., ಪ್ರೊ. ಕಮ್ಮಾರ ಸಿ.ಎಸ್., ೨೦೧೧, ರಟ್ಟಪಳ್ಳಿ ಸ್ಮರಣ ಸಂಚಿಕೆ, ಕನ್ನಡ ಸಾಹಿತ್ಯ ಪರಿಷತ್ತು, ತಾಲೂಕು ಘಟಕ, ಹಿರೇಕೆರೂರು, ಪುಟ ೧೨.

೨೭. ಆಚಾರ್ಯ ಪಿ.ಕೆ., ೧೯೨೭, 'ಎ ಡಿಕ್ಷನರಿ ಆಫ್ ಹಿಂದೂ ಆರ್ಕಿಟೆಕ್ಚರ್', ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ಮದ್ರಾಸ್, ಪುಟ. ೩೬೨.

೨೮. ಅದೇ ಪುಟ. ೩೬೩.

೨೯. ಜ್ಞಾನಾನಂದ ಜಿ., ೨೦೦೬, ಶ್ರೀ ಕಾಶ್ಯಪ ಶಿಲ್ಪಶಾಸ್ತ್ರ (ಉತ್ತರಾರ್ಧ), ಕರ್ನಾಟಕ ಶಿಲ್ಪಾ ಅಕಾಡಮಿ, ಬೆಂಗಳೂರು, ಪುಟ ೪೫-೪೬.

೩೦. ಆಲ್ಲೈ ಎಹಿನ್ ಡ್ಯಾನಿಯಲ್, ಹಿಂದೂ ಪಾಲಿಥಿ ಇಮೇಜ್, ಪುಟ ೨೯೬

೩೧. ಮಜುಂದಾರ್ ಆರ್.ಸಿ. (ಸಂ.) ೧೯೫೭, ಭಾರತೀಯ ಇತಿಹಾಸ ಮತ್ತು ಸಂಸ್ಕೃತಿ, ಸಂ – ೪, ಬಾಂಬೆ, ಪುಟ ೧೩೩.

೩೨. ಆಲ್ಲೈ ಎಹಿನ್ ಡ್ಯಾನಿಯಲ್, ಹಿಂದೂ ಪಾಲಿಥಿ ಇಮೇಜ್, ಪೂರ್ವೋಕ್ತ, ಪುಟ ೨೨೨-೨೮.

೩೩. ಗೋಪಿನಾಥ್‌ರಾವ್ ಟಿ.ಎ., ೧೯೮೫, 'ಎಲಿಮೆಂಟ್ಸ್ ಆಫ್ ಹಿಂದೂ ಐಕಾನಾಗ್ರಫಿ'. ಸಂ-೧. ನ್ಯೂಡೆಲ್ಲಿ, ಪುಟ ೭೫.

೩೪. ಆಲ್ಲೈ ಎಹಿನ್ ಡ್ಯಾನಿಯಲ್, ಪೂರ್ವೋಕ್ತ, ಪುಟ ೧೫೩-೫೪.

೩೫. ಜ್ಞಾನಾನಂದ ಜಿ., ಶ್ರೀ ಬ್ರಾಹ್ಮೀಯ ಚಿತ್ರಕರ್ಮಶಾಸ್ತ್ರ, ಪುಟ ೭೦೮-೭೧೦.

೩೬. ಲಕ್ಷಣ ತೆಲಗಾವಿ (ಸಂ), ಸಂಶೋಧನೆ, ಪುಟ ೭೮೭

೩೭. ಆಲ್ಲೈ ಎಹಿನ್ ಡ್ಯಾನಿಯಲ್, ಪೂರ್ವೋಕ್ತ, ಪುಟ ೯೫-೯೭

೩೮. ಲಕ್ಷಣ ತೆಲಗಾವಿ (ಸಂ), ಸಂಶೋಧನೆ, ಪುಟ ೭೮೫.

೩೯. ಆಲ್ಲೈ ಎಹಿನ್ ಡ್ಯಾನಿಯಲ್, ಪೂರ್ವೋಕ್ತ, ಪುಟ ೨೯೮-೩೦೦.

೪೦. ಆಚಾರ್ಯ ಪಿ.ಕೆ., ೧೯೨೭, 'ಎ ಡಿಕ್ಷನರಿ ಆಫ್ ಹಿಂದೂ ಆರ್ಕಿಟೆಕ್ಚರ್', ಯೂನಿವರ್ಸಿಟಿ ಪ್ರೆಸ್, ಮದ್ರಾಸ್, ಪುಟ. ೩೬೨.

೪೧. ಗೋಪಿನಾಥ್‌ರಾವ್ ಟಿ.ಎ., ೧೯೮೫, 'ಎಲಿಮೆಂಟ್ಸ್ ಆಫ್ ಹಿಂದೂ ಐಕಾನಾಗ್ರಫಿ', ಸಂ-೧, ನ್ಯೂಡೆಲ್ಲಿ, ಪುಟ ೩೮೦-೮೧.

೪೨. ಲಕ್ಷಣ ತೆಲಗಾವಿ (ಸಂ), ಪೂರ್ವೋಕ್ತ, ಪುಟ ೮೫.

೪೩. ದೇವರ ಕೊಂಡಾರೆಡ್ಡಿ, ೧೯೯೬ ಗಂಗರ ದೇವಾಲಯಗಳು ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ. ೨೮೬.

೪೪. ಆಲೈ ಎಹಿನ್ ಡ್ಯಾನಿಯಲ್, ಪೂರ್ವೋಕ್ತ, ಪುಟ ೨೯೮-೩೦೦.

೪೫. ಲಕ್ಷಣ ತೆಲಗಾವಿ (ಸಂ), ೧೯೮೭, ಹರತಿಸಿರಿ (ಸಪ್ತಮಾತೃಕೆಯರು), ವಾಲ್ಮೀಕಿ ಸಾಹಿತ್ಯ ಸಂಪದ ಹರ್ತಿಕೋಟೆ, ಪುಟ ೯೧-೯೨.

೪೬. ಗೋಪಿನಾಥ್‌ರಾವ್ ಟಿ.ಎ., ಪೂರ್ವೋಕ್ತ, ಪುಟ ೧೭೭.

೪೭. ಅದೇ, ಪುಟ. ೧೮೨.

೪೮. ರಾಮಚಂದ್ರರಾವ್ ಎಸ್.ಕೆ., ೧೯೭೫, ಮೂರ್ತಿಶಿಲ್ಪ ನೆಲೆ ಹಿನ್ನಲೆ, ಬೆಂಗಳೂರು, ಪುಟ. ೧೮೧.

೪೯. ಆಲೈ ಎಹಿನ್ ಡ್ಯಾನಿಯಲ್, ಪೂರ್ವೋಕ್ತ, ಪುಟ ೨೯೮-೩೦೦.

೫೦. ರಾಜೇಶ್ವರಿ ಡಿ.ಆರ್. ೧೯೮೭, ಶಕ್ತಿ ಐಕನಾಗ್ರಫಿ, ಇಂಟೆಲೆಕ್ಚುಯಲ್ ಪಬ್ಲಿಷಿಂಗ್ ಹೌಸ್, ನ್ಯೂಡೆಲ್ಲಿ, ಪುಟ ೫೩-೫೪.

೫೧. ಆಲೈ ಎಹಿನ್ ಡ್ಯಾನಿಯಲ್, ಪೂರ್ವೋಕ್ತ, ಪುಟ ೧೩೦-೧೩೧.

# ಸಮಾರೋಪ

ಕರ್ನಾಟಕ ರಾಜ್ಯದ ೩೦ ಜಿಲ್ಲೆಗಳಲ್ಲಿ ಒಂದಾದ ಹಾವೇರಿ ಜಿಲ್ಲೆಯು ಅವಿಭಜಿತ ಧಾರವಾಡ ಜಿಲ್ಲಾ ಕೇಂದ್ರದಿಂದ ೨೪-೦೮-೧೯೯೭ ರಂದು ಪ್ರತ್ಯೇಕವಾದ ಜಿಲ್ಲೆಯಾಗಿದೆ. ಉತ್ತರ ಕರ್ನಾಟಕದ ಹೆಬ್ಬಾಗಿಲು ಎಂಬ ಕೀರ್ತಿಗೆ ಹೆಸರು ವಾಸಿಯಾಗಿರುವ ಹಾವೇರಿ ಜಿಲ್ಲೆಯು ಐತಿಹಾಸಿಕವಾಗಿ ಹೆಚ್ಚಿನ ಮಹತ್ವವನ್ನು ಹೊಂದಿದೆ. ಹಾವೇರಿ, ರಾಣೆಬೆನ್ನೂರು, ಹಾನಗಲ್, ಬ್ಯಾಡಗಿ, ಹಿರೇಕೆರೂರು, ಶಿಗ್ಗಾವಿ ಹಾಗೂ ಸವಣೂರು ಈ ಏಳು ತಾಲ್ಲೂಕುಗಳು ಈ ಜಿಲ್ಲೆಗೆ ಸೇರ್ಪಡೆಗೊಂಡಿವೆ. ಹಾವೇರಿ ಜಿಲ್ಲೆಗೆ ಇತಿಹಾಸದಲ್ಲಿ ತನ್ನದೇ ಆದ ಪ್ರತ್ಯೇಕ ಸ್ಥಾನವಿದೆ. ಪೂರ್ವದಲ್ಲಿ 'ಹಾವೇರಿ' ಹಾಗೂ 'ಪಾವರಿ' ಎಂದು ಕರೆಯಲ್ಪಡುತ್ತಿದ್ದು ಹಾವೇರಿ ಜಿಲ್ಲೆಯ ಇತಿಹಾಸ ಶಾಸನಗಳ ಮೂಲಕ ಹೆಚ್ಚಿನ ಮಹತ್ವ ಹೊಂದಿದೆ. ನನ್ನ ಮಹಾಪ್ರಬಂಧ ಶೀರ್ಷಿಕೆಯಾದ "ಹಾವೇರಿ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ಎಂಬ ವಿಷಯದಡಿಯಲ್ಲಿ ಈ ಜಿಲ್ಲೆಯಲ್ಲಿ ದೊರೆಯುವ ಸುಮಾರು ೧೧೨೬ ಶಾಸನಗಳನ್ನು ಆಧಾರವಾಗಿಟ್ಟು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿ ಹೋದ ಮತ್ತು ಅವರು ಬಿಟ್ಟು ಹೋದಂತಹ ಪ್ರಾಚೀನ ಸ್ಮಾರಕಗಳು, ಶಾಸನಗಳು ಶಿಲ್ಪಾಅವಶೇಷಗಳು, ಆ ಪ್ರದೇಶದ ಭಾಗದಲ್ಲಿ ಇತಿಹಾಸವನ್ನು ನಿರ್ಮಿಸುವ ನಿಟ್ಟಿನಲ್ಲಿ ಈ ಪರಿಸರದಲ್ಲಿ ದೊರೆಯುವ ಶಾಸನಗಳನ್ನು ಆಧಾರವಾಗಿಟ್ಟುಕೊಂಡು ರಾಜಕೀಯ ಆಡಳಿತ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಅಂಶಗಳನ್ನು ಹೊರಚೆಲ್ಲುವ ನಿಟ್ಟಿನಲ್ಲಿ ಈ ಮಹಾಪ್ರಬಂಧವನ್ನು ರಚಿಸಿದ್ದೇನೆ.

ಈ ಮಹಾ ಪ್ರಬಂಧವು ಪ್ರಮುಖವಾಗಿ ಎಂಟು ಅಧ್ಯಾಯಗಳನ್ನು ಒಳಗೊಂಡಿದ್ದು, ಅದರಲ್ಲಿ ಅಧ್ಯಯನದ ಉದ್ದೇಶ, ವಿಧಾನ, ಸ್ವರೂಪ, ಇದುವರೆಗೆ ನಡೆದ ಅಧ್ಯಯನ ಸಮೀಕ್ಷೆ, ವ್ಯಾಪ್ತಿ, ಭೌಗೋಳಿಕ ಲಕ್ಷಣಗಳು, ಐತಿಹ್ಯಗಳು, ಪೌರಾಣಿಕ ಹಿನ್ನಲೆ ಮತ್ತು ಶಾಸನಗಳು, ಶಾಸನಗಳ ಪ್ರಕಾರಗಳನ್ನು ಕುರಿತಂತೆ ಇಲ್ಲಿ ಚರ್ಚಿಸಲಾಗಿದೆ.

ಎರಡನೇ ಅಧ್ಯಾಯವು ರಾಜಕೀಯ ಇತಿಹಾಸಕ್ಕೆ ಸಂಬಂಧಿಸಿದ್ದು ಇತಿಹಾಸ ಪೂರ್ವಕಾಲದಿಂದಲೂ ಮಾನವನ ನಾಗರೀಕತೆ ಹೆಜ್ಜೆ ಗುರುತುಗಳನ್ನು ಈ ಜಿಲ್ಲೆಯು ಹೊಂದಿದ್ದು, ತುಂಗಭದ್ರ ಮತ್ತು ಅದರ ಉಪನದಿಯಾದ ವರದನದಿ ತೀರ ಪ್ರದೇಶದಲ್ಲಿ ಜನವಸತಿ ಇದ್ದ ಕುರುಹುಗಳನ್ನು ಕಾಣುತ್ತೇವೆ. ಹಾವೇರಿ ಜಿಲ್ಲೆಯ ಅನೇಕ ಗ್ರಾಮಗಳು ಇತಿಹಾಸ ಪೂರ್ವದ ಮಾನವನ ವಾಸಸ್ಥಾನವನ್ನು ಹೊಂದಿದ್ದವು. ನಲವಾಗಿಲು, ಹಳ್ಳೂರು, ಮುದೆನೂರು, ವರ್ದಿ ಪುರದಕೇರಿಗಳಲ್ಲಿ ಸೂಕ್ಷ್ಮ ಶಿಲಾಯುಗದ ಶಿಲಾಯುಧಗಳು ದೊರಕಿವೆ. ಬೃಹತ್ ಶಿಲಾಯುಗದ ಬಾರಿ ಗಾತ್ರದ ಕಲ್ಪನೆಗಳು ಈ ಜಿಲ್ಲೆಯಲ್ಲಿ ಈವರೆಗೂ ಅಸುಂಡಿ, ಕೋಟಿಹಾಳ, ಕುಸನೂರು, ಬೆನಕನಹಳ್ಳಿ, ಕದರಮಂಡಲಗಿ ಪ್ರದೇಶಗಳಲ್ಲಿ ದೊರಕಿವೆ. ಆದರೆ ಅಪರೂಪವೆನ್ನಬಹುದಾದ ಹಾವೇರಿ, ಧಾರವಾಡ, ಗದಗ ಜಿಲ್ಲೆಗಳಲ್ಲಿ ದೊರಕದ ಎರಡು

ನಿಲುಗಲ್(ಮೆನ್‌ಹರ್)ಗಳು ನೆಶ್ವಿಯಲ್ಲಿ ದೊರಕಿವೆ. ಇವು ಸುಮಾರು ಏಳು ಅಡಿ ಎತ್ತರ ಇದ್ದು ಮುಮ್ಮುಖವನ್ನು ನಯಗೊಳಿಸಲಾಗಿದೆ. ಇದು ಅಪರೂಪವೆನ್ನಬಹುದಾದ ಅಂಶವಾಗಿದೆ. ಶಾತವಾಹನರ ಶಾಸನಗಳು ದೊರಕುವುದಿಲ್ಲ. ಆದರೆ ಹರಳಿಹಳ್ಳಿ, ನಿಟ್ಟೂರು, ಶಂಖದಹಾಳ, ಸಂಗೂರು, ಹೊಸರಿತ್ತಿ, ತಡಸ, ಕದರಮಂಡಲಗಿ, ಹೊನ್ನತಿ, ಮುದೇನೂರು, ಇಟಗಿ, ಯಳವಟ್ಟಿ ಮುಂತಾದ ಕಡೆ ಈ ಕಾಲದ ಅವಶೇಷಗಳು ಕಂಡು ಬರುತ್ತವೆ. ಪ್ರಕ್ರಿಯೆಗೆ ಒಳಗಾಗಿದ್ದವು. ಇದರ ಹಿನ್ನಲೆಯಲ್ಲಿ ರಾಜಕೀಯ ಇತಿಹಾಸಕ್ಕೆ ಸಂಬಂಧಿಸಿದಂತೆ ಶಾಸನಗಳನ್ನು ಅವಲೋಕಿಸಿದಾಗ ಬನವಾಸಿ ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು, ಕಲಚೂರಿಗಳು, ಹಾನಗಲ್ಲು, ಕದಂಬರು, ಗುತ್ತಲದ ಗುಪ್ತರು, ನೂರಾಂಬಾಡದ ಕದಂಬರು, ದೇವಗಿರಿಯ ಯಾದವರು, ಹೊಯ್ಸಳರು, ವಿಜಯನಗರದ ಅರಸರು ಈ ಭಾಗದಲ್ಲಿ ತಮ್ಮದೇ ಆದ ಆಳ್ವಿಕೆ ನಡೆಸಿದ್ದಾರೆ. ಈ ದೃಷ್ಟಿಯಿಂದ ಇಲ್ಲಿ ದೊರೆಯುವ ಶಾಸನಗಳನ್ನು ಆಧರಿಸಿ ವಿವಿಧ ಆಯಾಮಗಳ ಮೂಲಕ ಅಭ್ಯಸಿಸಲು ಪ್ರಯತ್ನಿಸಲಾಗಿದೆ.

ಮೂರನೇಯ ಅಧ್ಯಾಯವು ಆಡಳಿತಕ್ಕೆ ಸಂಬಂಧಿಸಿದ್ದು ವಿಶಾಲವಾದ ಯಾವುದೇ ಸಾಮ್ರಾಜ್ಯವನ್ನು ಆಡಳಿತ ಅನುಕೂಲಕ್ಕಾಗಿ ಚಿಕ್ಕ ಚಿಕ್ಕ ಘಟಗಳಾಗಿ ವಿಭಾಗಿಸಿ ಅಧ್ಯಯನ ಮಾಡಿರುವುದನ್ನು ಪ್ರಾಚೀನ ಕಾಲದಿಂದಲೂ ರಾಜಕೀಯ ಚರಿತ್ರೆಯಲ್ಲಿ ಕಾಣುತ್ತೇವೆ. ಒಂದು ದೇಶದ ರಾಜ್ಯದ, ಗ್ರಾಮದ ಆಡಳಿತವು ನ್ಯಾಯಬದ್ಧವಾಗಿರಬೇಕಾದರೆ ಅದಕ್ಕೆ ಪೂರಕವಾದ ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗ ಅವಶ್ಯಕತೆ ಇದ್ದು ಅದರಲ್ಲಿ ರಾಜ್ಯಾಂಗದ ಪ್ರಮುಖ ಭಾಗವಾಗಿ ರಾಜರು, ರಾಣಿಯರು, ಮಂತ್ರಿ ಮಹಾಮಂಡಳೇಶ್ವರರು, ದಂಡನಾಯಕ, ಸಾಮಾಂತ ಅಧಿಕಾರಿ, ಸೈನ್ಯಾಡಳಿತ, ಗ್ರಾಮಾಡಳಿತ, ನ್ಯಾಯಾಡಳಿತ ಇನ್ನಿತರ ಅಧಿಕಾರಿಗಳು ಆಡಳಿತದ ಅವಿಭಾಜ್ಯ ಅಂಗವಾಗಿ ಕಾರ್ಯನಿರ್ವಹಿಸುತ್ತಿರುವ ಬಗ್ಗೆ ಹಾಗೂ ಇಂಥ ಕುಂತಳ ಸಾಮ್ರಾಜ್ಯದಲ್ಲಿ ಅನೇಕ ಮಂಡಲಗಳಲ್ಲಿ ಬನವಾಸಿ-೧೨೦೦೦ ಮಂಡಲವು ವಿಖ್ಯಾತವಾಗಿದ್ದಿತು. ಹಾವೇರಿ ಜಿಲ್ಲೆಯ ಭೂಪ್ರದೇಶ ಬಹುಭಾಗ ಬನವಾಸಿ ಮಂಡಲದಲ್ಲೂ ಸೇರಿದ್ದರು. ಇನ್ನೂ ಕೆಲವೊಂದಿಷ್ಟು ಭಾಗ ಮಾತ್ರ ಪುಲಿಗೆರೆ-೩೦೦ ಮಂಡಲದಲ್ಲಿಯೂ ಸೇರಿತ್ತು. ಹಾವೇರಿ ಜಿಲ್ಲೆಯಲ್ಲಿಯೇ ಕೇಂದ್ರಸ್ಥಾನ ಪಡೆದ ಅತಿದೊಡ್ಡ ಮೂರು ಕಂಪಣಗಳಿದ್ದವು. ನೂರುಂಬಾಡವೆಂದು ಹೆಸರಾದ ರಟ್ಟಪಳ್ಳಿ-೭೦, ಇಟ್ಟಿಗೆ-೩೦ ಸೇರಿದ ಕಂಪಣಕ್ಕೆ ಹಿರೇಕೆರೂರು ತಾಲೂಕಿನ ರಟ್ಟಹಳ್ಳಿಯೇ ಕೇಂದ್ರ ಸ್ಥಳವಾಗಿತ್ತು. ಅದರಂತೆ ಬಾಸವೂರು-೧೪೦ ಇನ್ನೊಂದು ಪ್ರಮುಖ ಕಂಪಣವಾಗಿದ್ದಿತ್ತು. ಹೀಗೆ ಶಾಸನಗಳಲ್ಲಿ ಉಲ್ಲೇಖವಾದ ಮಾಹಿತಿಯನ್ನು ಒಳಗೊಂಡಂತೆ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಆರ್ಥಿಕ ವ್ಯವಸ್ಥೆಯಾಗಿದ್ದು ಯಾವುದೇ ಒಂದು ದೇಶದ ಅಭಿವೃದ್ಧಿ ಆ ದೇಶದ ಆರ್ಥಿಕ ಸಂಪತ್ತು ಅವಲಂಭಿಸಿರುತ್ತದೆ. ಅಲ್ಲಿಯ ನೈಸರ್ಗಿಕ ಸಂಪನ್ಮೂಲಗಳ ಹಾಗೂ ಮಾನವನ ದುಡಿಮೆಯ ಪರಿಶ್ರಮದ ಫಲವಾಗಿ ಆ ದೇಶದ ಬೆನ್ನಲುಬಾಗಿ ಆರ್ಥಿಕ ವ್ಯವಸ್ಥೆಯಾಗಿದ್ದು ಇದು ಆರ್ಥಿಕ ಬೆಳವಣಿಗೆಯು ಕೃಷಿಗೆ ಸಂಬಂಧಿಸಿದೆ. ನೀರಾವರಿ ವ್ಯವಸ್ಥೆ, ಆ ಕಾಲದಲ್ಲಿ ಬೆಳೆಯುತ್ತಿದ್ದ ವಿಭಿನ್ನ ಜಾತಿಯ ಬೆಳೆಗಳು.

ಕೆರೆಕಟ್ಟೆಗಳ ನಿರ್ಮಾಣ ವಾಣಿಜ್ಯೀಕರಣಕ್ಕೆ ಸಂಬಂಧಪಟ್ಟಂತೆ ಆ ಕಾಲದ ಪ್ರಮುಖ ಆರ್ಥಿಕ ಪ್ರಗತಿ ಒಂದು ಭಾಗವಾಗಿದ್ದು ಇದರಿಂದಾಗಿ ಕೃಷಿ ನೀರಾವರಿ ಬೆಳೆಗಳು ತೆರಿಗೆಗಳು, ವ್ಯಾಪಾರ, ತೂಕ ಮತ್ತು ಅಳತೆಗಳು, ನಾಣ್ಯಪದ್ಧತಿ ಹೀಗೆ ವ್ಯಾಪಾರ ವಹಿವಾಟುಗಳು ಜಿಲ್ಲೆಯ ಉದ್ದಗಲಕ್ಕೂ ಹರಡಿದ್ದು, ಹಲವಾರು ವಿಧದಲ್ಲಿ ಭೌಗೋಳಿಕವಾಗಿ ಅಲ್ಲಿನ ಅವಶ್ಯಕತೆಗೆ ಅನುಗುಣವಾಗಿ ಬೆಳವಣಿಗೆ ಹೊಂದಿದ್ದವು.

ಈ ಹಿನ್ನಲೆಯಲ್ಲಿ ವ್ಯಾಪಾರ ಜಿಲ್ಲೆಯ ಬೊಕ್ಕಸಕ್ಕೆ ಆರ್ಥಿಕ ಲಾಭ ತರುವ ಉದ್ದಿಮೆಯಾಗಿತ್ತೆಂದು ಹೇಳಬಹುದು. ಇವುಗಳ ವಿವಿಧ ಆಯಾಮಗಳನ್ನು, ಶಾಸನಗಳಲ್ಲಿ ಉಲ್ಲೇಖವಾದ ಮಾಹಿತಿಯನ್ನು ಒಳಗೊಂಡಂತೆ ಆದರಿಸಿ ವಿವೇಚಿಸಲಾಗಿದೆ.

ಐದನೇ ಅಧ್ಯಾಯದಲ್ಲಿ ಸಾಮಾಜಿಕ ವ್ಯವಸ್ಥೆಯಾಗಿದ್ದು ಇದು ಸಮಾಜದ ಒಂದು ಸಂಸ್ಕೃತಿಯ ಮೌಲ್ಯಾಧಾರಿತ ವ್ಯವಸ್ಥೆಯನ್ನು ಒಟ್ಟುಗೂಡಿಸುವ ಮಾನವನ ಒಟ್ಟಾರೆ ಜೀವನಕ್ಕೆ ಒಳಪಟ್ಟಿರುತ್ತದೆ. ಏಕೆಂದರೆ ಸಾಮಾಜಿಕ ಸಂಬಂಧಗಳು ಆಚಾರ ವಿಚಾರಗಳು ಸುಸಂಸ್ಕೃತ ಜೀವನದ ಆಗುಹೋಗುಗಳನ್ನು ಜೊತೆಯಲ್ಲಿಯೇ ಸಾಮಾಜೀಕರಣ ರೂಪುಗೊಳ್ಳುತ್ತದೆ. ಇದರ ಅಡಿಯಲ್ಲಿ ಜಾತಿವ್ಯವಸ್ಥೆ, ಪ್ರಮುಖವಾಗಿದ್ದು ಇದಕ್ಕೆ ಸಂಬಂಧಪಟ್ಟಂತೆ ಬ್ರಾಹ್ಮಣ, ಕ್ಷತ್ರಿಯರು, ವೈಶ್ಯರು ಮತ್ತು ಶೂದ್ರರು ಜೊತೆಗೆ ಸ್ತ್ರೀಯರ ಸ್ಥಾನಮಾನ ವಿವಾಹವನ್ನು ಒಳಗೊಂಡು ಸಾಮಾಜಿಕ ಪ್ರಕ್ರಿಯೆಯಲ್ಲಿ ಸ್ಮಾರಕಗಳ ಕುರಿತಾದಂತೆ, ವೀರಗಲ್ಲು, ಮಾಸ್ತಿಗಲ್ಲು ಹಾಗೂ ನಿಡಧಿಗಲ್ಲುಗಳು ವಿಷಯಗಳನ್ನು ಶಾಸನಗಳ ಹಿನ್ನಲೆಯ ಮಾಹಿತಿಯನ್ನಾಧರಿಸಿ ಒಂದು ನಾಡಿನ ಸಂಸ್ಕೃತಿಯ ಅಧ್ಯಯನಕ್ಕೆ ತೊಡಗಿದ್ದರೂ, ಅಲ್ಲಿಯ ಸಂಸ್ಕೃತಿ ವಿಕಾಸಗೊಳ್ಳಲು ಆ ಪರಿಸರದಲ್ಲಿ ನೆಲೆಸಿರುವ ಜನ-ಜೀವನವೇ ಕಾರಣವಾಗುತ್ತದೆ. ಹೀಗಿರುವಾಗ ಹಾವೇರಿ ಜಿಲ್ಲೆಯ ಶಾಸನಗಳಲ್ಲಿ ಸ್ತ್ರೀಯರಿಗೆ ಇದ್ದ ಸ್ಥಾನಮಾನಗಳನ್ನು ಈ ಅಧ್ಯಾಯದಲ್ಲಿ ನಿರೂಪಿಸಲಾಗಿದೆ.

ಅಧ್ಯಾಯ ಆರರಲ್ಲಿ ಧಾರ್ಮಿಕ ವ್ಯವಸ್ಥೆಗೆ ಸಂಬಂಧಿಸಿದಂತೆ ಮಾನವನ ಸಾಂಸ್ಕೃತಿಕ ಬದುಕಿನ ಜೀವನಾಡಿ ಧರ್ಮವಾಗಿದ್ದು ಭಾರತೀಯರ ಸಂಸ್ಕೃತಿ ಬದುಕಿಗೆ ಧರ್ಮವೇ ಮಾರ್ಗದರ್ಶಿಯಾಗಿದೆ. ಹೀಗಿರುವಾಗ ವೇದೋಪನಿಷತ್ತುಗಳು, ಆಗಮ ಸ್ಮೃತಿಗಳು, ಇತಿಹಾಸ ಪುರಾಣಗಳು ರೂಪಿಸಿದ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿ ಇಂದು ಬೆಳೆದು ಬಂದಿದೆ. ಹೀಗಾಗಿ ಪ್ರಾಚೀನ ಕಾಲದಿಂದಲೂ ವಿವಿಧ ಧರ್ಮಗಳು ಬೆಳೆದು ಒಂದು ಜನತೆಯ ಧಾರ್ಮಿಕ ಶ್ರದ್ಧೆ ಸಮನ್ವಯತೆ ಮತ್ತು ಔದಾರ್ಯವನ್ನು ಕಾಣುತ್ತೇವೆ. ಭೌದ್ಧಧರ್ಮ, ಜೈನಧರ್ಮ, ಶೈವಧರ್ಮ, ವೈಷ್ಣವಧರ್ಮ, ವೀರಶೈವ ಸಂಪ್ರದಾಯ, ಕಾಳಮುಖ ಪಂಥಗಳ ಬಗ್ಗೆ ವಿಶ್ಲೇಷಿಸುತ್ತಾ ವಿದ್ಯಾಭ್ಯಾಸಕ್ಕೆ ಸಂಬಂಧಪಟ್ಟಂತೆ ದೇಶದ ಸಾಂಸ್ಕೃತಿಕ ಭವ್ಯತೆಯನ್ನು ಬಿಂಬಿಸುವುದು ಆ ದೇಶದ ಅಳಿಯದ ಸಂಪತ್ತಾದ ವಿದ್ಯೆಯಿಂದ ವಿದ್ಯಾದಾನ ಶ್ರೇಷ್ಠದಾನ ಎಂಬ ಮಾತಿಗೆ ಪೂರಕವಾಗಿಯೇ ಶಾಸನಗಳನ್ನು ಗಮನಿಸಿದಾಗ ವಿಶೇಷವಾಗಿ ದಾನದ ಉಲ್ಲೇಖದಲ್ಲಿ ಮಠದ ಹೆಸರು ಹಾಗೂ ಅಗ್ರಹಾರ ಉಲ್ಲೇಖಗಳು ಹಲವಾರು ಶಾಸನಗಳು ಕಂಡು ಬರುವ ಮಾಹಿತಿಯನ್ನು ಆಧಾರವಾಗಿಟ್ಟುಕೊಂಡು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಅಧ್ಯಾಯ ಏಳು ದೇವಾಲಯಗಳು ಮತ್ತು ಶಿಲ್ಪಗಳು ಸಂಬಂಧಿಸಿದಂತೆ ಸಮಾಜದ ಅಭಿವೃದ್ಧಿಯ ನಂಬಿಕೆಯ ಸಂಕೇತವಾಗಿ ದೇವಾಲಯವು ಪ್ರಮುಖ ಪಾತ್ರವಹಿಸುತ್ತವೆ. ಪ್ರಾಚೀನ ಕಾಲದಿಂದಲೂ ದೇವಾಲಯಗಳು ನಮ್ಮ ಸಂಸ್ಕೃತಿಯ ಅವಿಭಾಜ್ಯ ಅಂಗವೆನಿಸಿವೆ. ದೇವಾಲಯಗಳು ಸಾರ್ವಜನಿಕರ ಬದುಕಿನಲ್ಲಿ ಮಹತ್ವದ ಪಾತ್ರವಹಿಸಿದ ವಿದ್ಯಾಕೇಂದ್ರಗಳಾಗಿ ಅನ್ನಸಂತರ್ಪಣಾ ಕೇಂದ್ರಗಳಾಗಿ ಧಾರ್ಮಿಕ ಕೇಂದ್ರಗಳಾಗಿ, ಧಾರ್ಮಿಕ ಸಂಸ್ಥೆಗಳಾಗಿ ಸಂಗೀತ ನೃತ್ಯ ಕಲೆಗಳ ಬೆಳವಣಿಗೆಗಾಗಿ ಆಸರೆಯಾಗಿ ದೇವಾಲಯಗಳನ್ನು ಪ್ರಾಚೀನ ಕಾಲದಲ್ಲಿ ನಿರ್ಮಿಸಿದ್ದರು. ರಾಜರು ಅಲ್ಲದೆ ಅವರ ಪರವಾಗಿ ಅವನ ಮಂಡಳಿಕರು, ಮಹಾಸಾಮಂತರು, ಮಹಾಮಂಡಳೇಶ್ವರರು, ಮಹಾಪ್ರಧಾನಿಗಳು, ದಂಡನಾಯಕರು ಅಲ್ಲದೆ ಸೆಟ್ಟಿಗಳು, ಗಾವುಂಡರು, ಸ್ತ್ರೀಯರು ಈ ಜಿಲ್ಲೆಯಲ್ಲಿ ಲಿಂಗ ಪ್ರತಿಷ್ಠಾಪನೆ ಮಾಡಿದ ಶಾಸನಗಳಲ್ಲಿ ಉಲ್ಲೇಖವಾಗಿದೆ. ಹೀಗಾಗಿ ದೇವಾಲಯಗಳಲ್ಲೂ ಶೈವ ದೇವಾಲಯಗಳು, ವೈಷ್ಣವ ದೇವಾಲಯಗಳು, ಜೈನಬಸದಿಗಳು, ಶಾಕ್ತ ದೇವಾಲಯಗಳಿಗೆ ಸಂಬಂಧಿಸಿದಂತೆ ವಿವರಣೆ ನೀಡಿದ್ದು ಜೊತೆಗೆ ದೇವಾಲಯಗಳಲ್ಲಿ ಕಂಡು ಬರುವ ಮೂರ್ತಿಶಿಲ್ಪಗಳ ಬಗ್ಗೆಯೂ ಸಂಕ್ಷಿಪ್ತ ಮಾಹಿತಿಯನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಅಧ್ಯಾಯ ಎಂಟು ಸಮಾರೋಪ ಇದು ಕೊನೆಯ ಅಧ್ಯಾಯವಾಗಿದ್ದು, ಇದರಲ್ಲಿ ಮೇಲೆ ತಿಳಿಸಿದ ಎಲ್ಲಾ ವಿಷಯಗಳನ್ನು ಅವಲೋಕಿಸಿ ಒಟ್ಟಾರೆ ಅಭಿಪ್ರಾಯವನ್ನು ಈ ಅಧ್ಯಾಯದಲ್ಲಿ ತಿಳಿಸಲಾಗಿದ್ದು ಇದರ ಜೊತೆಗೆ ಅನುಬಂಧ ಗ್ರಂಥಋಣ, ನಕಾಶೆಗಳು ಛಾಯಾಚಿತ್ರಗಳನ್ನು ಒಳಗೊಂಡಂತಹ ಮಾಹಿತಿಯನ್ನು ಹಾವೇರಿ ಜಿಲ್ಲೆಯಲ್ಲಿ ದೊರೆಯುವ ಶಾಸನಗಳನ್ನು ಆಧರಿಸಿ ಸಂಪೂರ್ಣ ಮಾಹಿತಿಯನ್ನು ಒಂದೆಡೆ ದಾಖಲಿಸಿ ಈ ಮಹಾಪ್ರಭಂದವನ್ನು ಸಿದ್ದಪಡಿಸಿದನೆಂದು ಸಮಾರೋಪಿಸಬಹುದು.

ಮೇಲೆ ತಿಳಿಸಿದ ಒಟ್ಟಾರೆ ನನ್ನ ಸಂಶೋಧನ ಫಲಿತಗಳನ್ನು ಆಧರಿಸಿದ ಅಧ್ಯಾಯಗಳನ್ನು ಹೊರತುಪಡಿಸಿ ಮುಂದೆ ಕೈಗೊಳ್ಳಬೇಕಾದ ಸಂಶೋಧನಾ ಶೀರ್ಷಿಕೆಗಳು ಹಾವೇರಿ ಜಿಲ್ಲೆಗೆ ಸಂಬಂಧಿಸಿದಂತೆ ದೇವಾಲಯಗಳ ಕಲೆ ಮತ್ತು ವಾಸ್ತುಶಿಲ್ಪ, ಜೈನಧರ್ಮ, ನೀರಾವರಿ ವ್ಯವಸ್ಥೆ, ಆಡಳಿತವ್ಯವಸ್ಥೆ, ಹಾವೇರಿ ಜಿಲ್ಲೆಯ ಶಾಸನೋಕ್ತ ದೇವಾಲಯಗಳು, ಕಾಳಮುಖರು, ಹಾವೇರಿ ಜಿಲ್ಲೆಯ ಕಲ್ಯಾಣಿ ಚಾಲುಕ್ಯರ ದೇವಾಲಯಗಳು, ಇನ್ನಿತರ ಶೀರ್ಷಿಕೆಯನ್ನು ಪ್ರತ್ಯೇಕವಾಗಿ ತೆಗೆದುಕೊಂಡು ಸಂಶೋಧನಾ ಕಾರ್ಯವನ್ನು ನಡೆಸಬಹುದೆಂದು ತಿಳಿಯಪಡಿಸುತ್ತೇನೆ.

# ಗ್ರಂಥ ಋಣ


**ಎ. ಶಾಸನಗಳು :**

೧. ಕಲಬುರ್ಗಿ ಎಂ.ಎಂ.(ಸಂ.),೧೯೭೫, **ಧಾರವಾಡ ಜಿಲ್ಲೆ ಶಾಸನ ಸೂಚಿ**, ಧಾರವಾಡ.

೨. ಕಲಬುರ್ಗಿ ಎಂ.ಎಂ. ೧೯೭೪ ಮತ್ತು ಹಿರೇಮಠ ಆರ್.ಸಿ., ಸಂಪದ.

೩. ದೇವರಕೊಂಡಾರೆಡ್ಡಿ, ಭಟ್‌ಸೂರಿ, ಡಿ.ವಿ.ಪರಮಶಿವಮೂರ್ತಿ, ಮನ್ವಾಚಾರ್ (ಸಂ.) ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟಗಳು.

೪. ದೇಸಾಯಿ ಪಾಂಡುರಂಗರಾಯರು, ೧೯೫೬, ಶಾಸನ ಪರಿಚಯ, ಧಾರವಾಡ.

೫. ಪಂಚಮುಖಿ ಆರ್.ಎಸ್., ೧೯೭೧, ಕರ್ನಾಟಕದ ಶಾಸನಗಳು, ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ.

೬. ಶ್ರೀನಿವಾಸ ರಿತ್ತಿ, ೧೯೬೬, ಅಶೋಕನ ಧರ್ಮಶಾಸನಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೭. Epigraphia Carnatica

೮. Epigraphia Indica

೯. Indian Antiquary

೧೦. Karnataka Inscriptions

೧೧. South Indian Inscriptions, Vol. IX, XI, XV, XVIII, XX.

**ಬಿ. ವರದಿಗಳು :**

೧. Annual Report on South Indian Epigraphy

೨. A Guide to the K.R.I Museum.

೩. Annual Report of the Mysore Archaeological Department

೪. Kannada Research in Bombay Province, 1935-40.

೫. Progress Report of the K.R.I.

**ಕನ್ನಡ :**


೧. ಅಣ್ಣಿಗೇರಿ ಎ.ಎಂ. ಮತ್ತು ಮೇವುಂಡಿ ಮಲ್ಲಾರಿ, **ಶಾಸನ ಸಂಚಯ,** ಕನ್ನಡ ಸಂಶೋಧನಾ ಸಂಸ್ಥೆ, ಧಾರವಾಡ.

೨. ಅರಿಷಿಣಗುಪ್ಪೆ ಬಸವರಾಜ, ೧೯೯೮, **ತಿಳುವಳ್ಳಿ ಪ್ರದೇಶದ ದೇವಾಲಯಗಳು ಒಂದು ಅಧ್ಯಯನ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೩. ಅಣ್ಣಾರಾಯ ಮಿರ್ಜಿ, ೧೯೫೨, **ಜೈನ ಧರ್ಮ,** ಶೇಡಬಾಳ, ಬೆಳಗಾವಿ.

೪. ಕರಿಬಸವಯ್ಯ ಆರ್., ೧೯೯೮, **ಹಿರೇಕೆರೂರು ಪ್ರದೇಶದ ಮೂರ್ತಿಶಿಲ್ಪ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ,.

೫. ಕಲಬುರ್ಗಿ ಎಂ.ಎಂ. (ಸಂ.), ೧೯೭೩, **ಕವಿರಾಜ ಮಾರ್ಗ ಪರಿಸರದ ಕನ್ನಡ ಸಾಹಿತ್ಯ,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೬. ಕಲಬುರ್ಗಿ ಎಂ.ಎಂ. (ಸಂ.), ೧೯೭೫, **ಶಾಸನ ವ್ಯಾಸಂಗ ೧ ಮತ್ತು ೨,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೭. ಕಲಬುರ್ಗಿ ಎಂ.ಎಂ. (ಸಂ.), ೧೯೭೯, **ಶಾಸನಗಳಲ್ಲಿ ಶಿವಶರಣರು,** ವೀರಶೈವ ಅಧ್ಯಯನ ಕೇಂದ್ರ, ಗದಗ.

೮. ಕಲಬುರ್ಗಿ ಎಂ.ಎಂ., **ಸಾಹಿತ್ಯ ಸಂಪಾದನೆ,** ಮದ್ರಾಸ್ ವಿಶ್ವವಿದ್ಯಾಲಯ, ಮದ್ರಾಸ್.

೯. ಕಪಟರಾಳ ಕೃಷ್ಣರಾವ್, ೧೯೫೫, **ಕರ್ನಾಟಕ ಲಾಕುಳ ಶೈವರ ಇತಿಹಾಸ,** ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ.

೮. ಕಪಟರಾಳ ಕೃಷ್ಣರಾವ್, ೧೯೭೦, **ಕರ್ನಾಟಕ ಸಂಸ್ಕೃತಿ ಶೋಧನೆ,** ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ.

೧೦. ಕನವಳ್ಳಿ ಸದಾನಂದ, ವೀರಣ ರಾಜೂರ, **ಕರ್ನಾಟಕ ಪರಂಪರೆ,** ಸಂ. ೧, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಸರಕಾರ, ಬೆಂಗಳೂರು.

೧೧. ಕಲ್ಲುಗಿಡಿ, ಬಸವರಾಜ, ೧೯೮೫, **ಮಹಾಸತಿ ಆಚರಣೆ ಒಂದು ಅಧ್ಯಯನ,** ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೧೨. **ಕರ್ನಾಟಕ ಭಾರತಿ ಸಂಪುಟಗಳು,** – ೧೮, ೨-೩, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೩. **ಶಾಸನ ಅಧ್ಯಯನ ಸಂಪುಟಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೪. ಕಾರಂತ ಶಿವರಾಮ, ೧೯೮೨, **ಕರ್ನಾಟಕದಲ್ಲಿ ಶಿಲ್ಪ**, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೧೫. ಕಾರಂತ ಶಿವರಾಮ,೧೯೭೫, **ಚಿತ್ರಶಿಲ್ಪ, ವಾಸ್ತುಕಲೆಗಳು**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೬. ಕಾರಂತ ಶಿವರಾಮ, ೧೯೭೫, **ಭಾರತೀಯ ಶಿಲ್ಪಗಳು**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೧೭. ಕುಲಕರ್ಣಿ ಸತೀಶ್, ೧೯೮೭, **ಹಾವೇರಿ ತಾಲೂಕು ದರ್ಶನ**, ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು.

೧೮. ಕುಲಕರ್ಣಿ ಡಿ.ಜಿ. ೨೦೦೭-೦೮, **ಹಾವೇರಿ ಜಿಲ್ಲೆಯ ತ್ರಿಕೂಟ ದೇವಾಲಯಗಳು**, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ.

೧೯. ಕೃಷ್ಣರಾವ್ ಎಂವಿ., ಕೇಶವಭಟ್ಟ ಎಂ., ೧೯೭೦, **ಕರ್ನಾಟಕ ಇತಿಹಾಸ ದರ್ಶನ**, ಕರ್ನಾಟಕ ಸರಕಾರಿ ಪ್ರಕಾಶನ, ಬೆಂಗಳೂರು.

೨೦. ಕೊಟ್ರೇಶ್ ಎಂ., ೨೦೧೧, **ಬಳ್ಳಾರಿ ಜಿಲ್ಲೆಯ ಕೋಟೆಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೧. ಕೊಟ್ರೇಶ್ ಎಂ., ೨೦೧೦, **ಕರ್ನಾಟಕ ಕಲ್ಯಾಣ ಅರಸರು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೨. ಕೊಪ್ಪ ಎಸ್. ಕೆ. ೧೯೯೦, **ತರ್ದವಾಡಿ ನಾಡು ಒಂದು ಅಧ್ಯಯನ**, ಪ್ರತಿಭಾ ಪ್ರಕಾಶನ, ಇಂಡಿ,.

೨೩. ಗಣೇಶ್ ಕೆ.ಆರ್. ೧೯೯೬, **ಆಂಧ್ರಪ್ರದೇಶದ ಕನ್ನಡ ಶಾಸನಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೪. ಗುರುವ ಆರ್.ಎನ್. ೧೯೭೯, **ತರ್ದವಾಡಿನಾಡು**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨೫. ಗೋಪಾಲ ಬಾ.ರಾ. ೧೯೭೧, **ಬಾದಾಮಿ ಚಾಲುಕ್ಯರು**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨೬. ಗೋಪಾಲರಾವ್ ಎಚ್.ಎಸ್., ೧೯೯೩, **ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲ್ಯುಕ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ**, ನಿರ್ದೇಶಕರು, ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

೨೭. ಚನ್ನಕ್ಕ ಯಲಿಗಾರ, ೧೯೯೦, **ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨೮. ಚನ್ನಕ್ಕ ಯಲಿಗಾರ, ೧೯೯೦, **ಬಂಕಾಪುರದ ಶೋಧ**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨೯. ಚಾಮರಾಜ ಎಸ್. ಕಮ್ಮಾರ, ಪ್ರೊ. ಕರೇಗೌಡ, ರು. ಕೋಣತಿ, **ರಟ್ಟಿಹಳ್ಳಿ ಸ್ಮರಣ ಸಂಚಿಕೆ**, ಕನ್ನಡ ಸಾಹಿತ್ಯ ಪರಿಷತ್ತು, ರಟ್ಟಿಹಳ್ಳಿ.

೩೦. ಚಿದಾನಂದಮೂರ್ತಿ ಎಂ., ೧೯೬೬, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೩೧. ಚಿದಾನಂದಮೂರ್ತಿ ಎಂ., ೧೯೭೫, **ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು**, ಬೆಂಗಳೂರು.

೩೨. ಚಿದಾನಂದಮೂರ್ತಿ ಎಂ., **ಸಂಶೋಧನ ತರಂಗ**, ಸಂ. ೨, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೩೩. ಚೆನ್ನಕ್ಕ ಪಾವಟೆ, ೧೯೯೯, **ರಾಷ್ಟ್ರಕೂಟ ಸಾಮಂತ ಚಲ್ಲಕೇತನರು**, ಚನ್ನಗಂಗಾ ಪ್ರಕಾಶನ, ಧಾರವಾಡ.

೩೪. ಚೆನ್ನಕ್ಕ ಪಾವಟೆ, ೧೯೯೮, **ಹಾನಗಲ್ಲ ಕದಂಬರು**, ಚನ್ನಗಂಗಾ ಪ್ರಕಾಶನ, ಧಾರವಾಡ.

೩೫. ತಿಪ್ಪೇರುದ್ರಸ್ವಾಮಿ ಎಚ್., ೧೯೯೨, **ಕರ್ನಾಟಕ ಸಂಸ್ಕೃತಿ ಸಮೀಕ್ಷೆ**, ಮೈಸೂರು.

೩೬. ದೇಸಾಯಿ ಪಾಂಡುರಂಗರಾಯ, ೧೯೮೯, **ಕರ್ನಾಟಕದ ಕಲಚೂರಿಗಳು**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೩೭. ದೇವರಕೊಂಡಾರೆಡ್ಡಿ, ೧೯೯೬, **ಗಂಗರ ದೇವಾಲಯಗಳು ಒಂದು ಅಧ್ಯಯನ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩೮. ದೇಸಾಯಿ ಪಿ.ಬಿ., ೧೯೩೮, **ಕನ್ನಡ ಸಾಹಿತ್ಯ ಮಿಂಚಿದ ಮಹಿಳೆಯರು**, ಧಾರವಾಡ.

೩೯. ದೇಸಾಯಿ ಪಿ.ಬಿ., ೧೯೬೭, **ಕರ್ನಾಟಕ ಇತಿಹಾಸ**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೪೦. ದೇಸಾಯಿ ಪಿ.ಬಿ., ೧೯೯೭, **ಕರ್ನಾಟಕದ ಕಲಚೂರಿಗಳು**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೪೧. ಧೃವರಾಜ ನಾ. ಗದಗಕರ, ೧೯೯೯, **ದೇಗುಲ ರಥಸಪ್ತಮಿ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೨. ನಾಗಯ್ಯ ಜೆ.ಎಂ., ೧೯೯೨, **ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ**, ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರು ರುದ್ರಾಕ್ಷಿಮಠ, ಬೆಳಗಾವಿ.

೪೩. ನಾಗಯ್ಯ ಜೆ.ಎಂ., ೧೯೯೫, **ಕಲಕೇರಿ**, ಶ್ರೀ ಬಸವೇಶ್ವರು ಜೀರ್ಣೋದ್ಧಾರ ಟ್ರಸ್ಟ್, ಕಲಕೇರಿ, ಹಾನಗಲ್ಲು ತಾಲ್ಲೂಕು, ಧಾರವಾಡ ಜಿಲ್ಲೆ.

೪೪. ನಾಗಯ್ಯ ಜೆ.ಎಂ., ೨೦೦೪, **ಕರ್ನಾಟಕದ ಶಿಲ್ಪಗಳಲ್ಲಿ ಶಿವಶರಣರು**, ಶ್ರೀ ಚನ್ನಬಸವೇಶ್ವರ ಸಂಸ್ಥಾನ ಹಿರೇಮಠ, ಸುಕ್ಷೇತ್ರ, ಹಾರಕೂಡ.

೪೫. ನಾಗಯ್ಯ ಜೆ.ಎಂ., ೨೦೦೨, **ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ**, ಲೋಹಿಯಾ ಪ್ರಕಾಶನ, ಬಳ್ಳಾರಿ.

೪೬. ನೇಗಿನಹಾಳ, ೧೯೮೩, **ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೪೭. ನಾಗರಾಜ್ ಎಂ.ಜಿ., ೧೯೯೦, **ಶಾಸನ ಶಿಲ್ಪಗಳು**, ಶ್ರೀ ಗೌರಿಗಂಗಾ ಪ್ರಕಾಶನ, ಬೆಂಗಳೂರು,.

೪೮. ನಾಗರಾಜಯ್ಯ ಹಂಪ, ೧೯೯೯, **ಯಾಪನಿಯ ಸಂಘ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೯. ಪರಮಶಿವಮೂರ್ತಿ ಡಿ.ವಿ. ೧೯೯೯, **ಕನ್ನಡ ಶಾಸನಶಿಲ್ಪ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೦. ಪತ್ತಾರ ಶಿಲಾಕಾಂತ, ೨೦೦೦, **ಬಾದಾಮಿ ಸಾಂಸ್ಕೃತಿಕ ಅಧ್ಯಯನ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೧. ಪಂಚಮುಖಿ ಆರ್.ಎಸ್., ೧೯೪೬, **ಕರ್ನಾಟಕದ ಅರಸು ಮನೆತನಗಳು**, ಧಾರವಾಡ.

೫೨. ಪಾಟೀಲ ಬೋಜರಾಜ, ೧೯೯೩, **ನಾಗರಖಂಡ – ೭೦ ಒಂದು ಅಧ್ಯಯನ**, ಮಲೆನಾಡ ವೀರಶೈವ ಅಧ್ಯಯನ ಅಕಾಡೆಮಿ, ಆನಂದಪುರ.

೫೩. ಪಾಟೀಲ ಮಂಜುನಾಥ ಎಚ್., ೧೯೯೬, **ರಾಣೆಬೆನ್ನೂರು ತಾಲೂಕು ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಕರ್ನಾಟಕ ವಿಶ್ವವಿದ್ಯಲಯ, ಧಾರವಾಡ.

೫೪. ಬಸವರಾಜ ಕಲ್ಗುಡಿ, ೧೯೮೫, **ಮಹಾಸತಿ ಆಚರಣೆ ಒಂದು ಅಧ್ಯಯನ**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೫೫. ಬಾಲಸುಬ್ರಮಣ್ಯ ಮತ್ತು ಇತರರು, **ಕರ್ನಾಟಕ ದೇವಾಲಯ ಕೋಶ – ಗದಗ ಜಿಲ್ಲೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೬. ಮಹದೇವ ಸಿ., ವಾಸುದೇವನ್ ಸಿ.ಎಸ್., ರಮೇಶನಾಯ್ಕ, ೧೯೯೯, **ಕರ್ನಾಟಕ ದೇವಾಲಯ ಕೋಶ, ಹಾವೇರಿ ಜಿಲ್ಲೆ,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಹಂಪಿ.

೫೭. ಮೇವುಂಡಿ ಮಲ್ಲಾರಿ, ೧೯೭೧, **ಕನ್ನಡನಾಡಿನ ಶಾಸನ ಕವಿಗಳು**, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೫೮. ರಮೇಶ ನಾಯಕ, ೧೯೯೬, **ಹಾವೇರಿ ಒಂದು ಸಾಂಸ್ಕೃತಿಕ ಅಧ್ಯಯನ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೯. ರಾಜಶೇಖರ ಸಿಂದಗಿ, ೧೯೮೮, **ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ**, ಸುಜಾತ ಪಬ್ಲಿಕೇಶನ್, ಧಾರವಾಡ.

೬೦. ರಿತ್ತಿ ಶ್ರೀನಿವಾಸ, ೧೯೬೯, **ಮುಳುಗುಂದನಾಡು**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೬೧. ರಿತ್ತಿ ಶ್ರೀನಿವಾಸ (ಸಂ.), ೨೦೦೦, **ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾಕೋಶ**, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು.

೬೨. ಲಿಂಗಾರ ಕಮ್ಮಾರ, ಗಿರಿಜಾ ದುರ್ಗನ ಮಠ, ೨೦೦೭, **"ಹೆಬ್ಬಾಗಿಲು"**, ಹಾವೇರಿ ಜಿಲ್ಲಾ ಉತ್ಸವ, ಹಾವೇರಿ.

೬೩. ವಿನೋದಾ ಪಾಟೀಲ, ೧೯೯೮,. **ಪಾನುಂಗಲ್ಲಯ್ಯೂರು, ಒಂದು ಸಾಂಸ್ಕೃತಿಕ ಅಧ್ಯಯನ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೬೪. ಶಿವತಾರಕ್ ಕೆ.ಬಿ., ೧೯೯೧, **ಕರ್ನಾಟಕದ ಪುರಾತತ್ವ ನೆಲೆಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೫. ಶೇಷಶಾಸ್ತ್ರಿ ಆರ್., ೧೯೮೨, **ಕರ್ನಾಟಕದ ವೀರಗಲ್ಲುಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೬೬. ಶೇಠ ಬಿ.ಎಸ್., ೧೯೯೧, **ಕರ್ನಾಟಕದಲ್ಲಿ ಸತಿಪದ್ಧತಿ**, ವೀರಶೈವ ಅಧ್ಯಯನ ಅಕಾಡೆಮಿ, ಶ್ರೀನಾಗನೂರು ರುದ್ರಾಕ್ಷಿಮಠ, ಬೆಳಗಾವಿ.

೬೭. ಸತೀಶ ಕುಲಕರ್ಣಿ, ೨೦೦೯, **"ಕದಂಬ"** ಸ್ವಾಗತ ಸಮಿತಿ, ಹಾವೇರಿ ಜಿಲ್ಲಾ ಸಾಹಿತ್ಯ ಸಮ್ಮೇಳನ, ಹಾವೇರಿ,

೬೮. ಸಾಲಿಮಠ ಸುರೇಶ, ೧೯೯೬, **ಹಿರೇಕೆರೂರು ಮತ್ತು ಅದರ ಸುತ್ತಮುತ್ತಲಿನ ಶಾಸನಗಳು**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೬೯. ಸೊಟ್ಟಪ್ಪಮ್ಮನವರ ವಿ.ಜಿ., ೧೯೯೮, **ರಾಣೆಬೆನ್ನೂರು ಪ್ರದೇಶದ ದೇವಾಲಯಗಳು ಒಂದು ಅಧ್ಯಯನ**, ಕರ್ನಾಟಕ ವಿಶ್ವವಿದ್ಯಾಲಯ.

೭೦. ವಾಸುದೇವ ಬಡಿಗೇರ, ೨೦೦೮, **ಹಾನಗಲ್ಲು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೧. ಹಾಜವಗೋಳ ಧನವಂತ, ೨೦೦೪, **ಮುಳುಗುಂದ ನಾಡು**, ಮಹಾದೇವಿ ಪ್ರಕಾಶನ, ಧಾರವಾಡ.

೭೨. ಹಿರೇಮಠ ಬಿ.ಆರ್., ೧೯೮೬, **ಶಾಸನಗಳಲ್ಲಿ ಕರ್ನಾಟಕದ ವರ್ತಕರು**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೭೩. ಹಿರೇಮಠ ಬಿ.ಆರ್., ೧೯೭೬, **ವೀರಗಲ್ಲುಗಳು**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೭೪. ಹಿರೇಮಠ ಆರ್.ಸಿ., ಮತ್ತು ಕಲಬುರ್ಗಿ ಎಂ.ಎಂ., ೧೯೭೪, **ಕನ್ನಡ ಶಾಸನ ಸಂಪದ**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೭೫. ರಾಮಚಂದ್ರರಾವ್ ಎಸ್.ಕೆ. ೧೯೭೫, ಮೂರ್ತಿಶಿಲ್ಪ ನೆಲೆ–ಹಿನ್ನಲೆ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೭೬. ನಾಗರಾಜು ಡಿ.ಎಂ. ೨೦೧೨, ಕಲ್ಯಾಣ ಚಾಳುಕ್ಯರ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು.

೭೭. ಗುಡ್ಡದೇಶ್ವರಪ್ಪ ಹೆಚ್. ೨೦೧೦, 'ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಪೂಜಾ ಪ್ರಕಾಶನ, ಚಿತ್ರದುರ್ಗ

೭೮. ಜ್ಞಾನಾನಂದ ಜಿ. ೨೦೦೧, ಶಿಲ್ಪಾದರ್ಶ, ಸಂಪುಟ–೧, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೯. ಜ್ಞಾನಾನಂದ ಜಿ. ೨೦೦೨, ಶಿಲ್ಪಾದರ್ಶ, ಸಂಪುಟ–೨, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು.

೮೦. ಜ್ಞಾನಾನಂದ ಜಿ. ೨೦೦೬, ಶ್ರೀ ಕಾಶ್ಯಪ ಶಿಲ್ಪಶಾಸ್ತ್ರಂ, ಸಂ–೨, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು.

೮೧. ವಿರೂಪಾಕ್ಷ ಕುಲಕರ್ಣಿ, ೨೦೦೫, ಅನು. ಕಾಪಾಲಿಕರು ಮತ್ತು ಕಾಳಾಮುಖರು ಕನ್ನಡ ಪುಸ್ತಕ ಪ್ರಾಧಿಕಾರ.

೮೨. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೮, ವಿಜಯನಗರ ಕಾಲದ ಸಂಸ್ಕೃತಿ, ಹಂಪಿ.

**ನಿಘಂಟುಗಳು, ಗ್ಯಾಸೆಟಿಯರ್‌ಗಳು :**

೧. **ಕನ್ನಡ ನಿಘಂಟು,** ಸಂ. ಪರಿಷ್ಕೃತ ೨೦೦೧, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨. ನಾಯಕ ಹಾ.ಮ. (ಸಂ.), ೧೯೭೫, **ಕನ್ನಡ ವಿಷಯ ವಿಶ್ವಕೋಶ**, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩. ಸೂರ್ಯನಾಥ ಯು. ಕಾಮತ್ ೧೯೮೨, ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಧಾರವಾಡ ಜಿಲ್ಲೆ.

**ಇಂಗ್ಲೀಷ್ :**

1. Basavaraj K.R. , 1966, **Administrative System Under the Chalukyas of Kalyana**.
2. Desai P.B. (Ed.) 1957, **Jainism in South India and some Jaina Epigraphs** Kolhapur.
3. Ghatapanadi S.G., 1977, **Taxation in Ancient and Medieval Karnataka**, K.H.D.,
4. Gopal B.R. (Ed.), 1969, **Karnataka Inscriptions, Vol. V**, Dharwad.
5. Gopal B.R., 1981, **The Chalukyas of Kalyana and Kalachuries**, Dharwad.
6. Gopal B.R., 1981, **Minor Dynasties of South India**, Karnataka, Madras.
7. Gopal B.R., 1987, **Epigraphical Studies**, Archaeology and Museums, Mysore.
8. Jagadish, Measurement 2005, **System in Karnataka (A.D. 325 to 1700)** Directorate of Archaeology and Museums, Hospet..
9. Ramesh K.V., 1984, **Indian Epigraphy**, Vol. 1., Delhi.
10. Sharma S., 1946, **Jainism and Karnataka Culture**.
11. Shanthkumari S.C. 1986, **History of the Agraharas, Karnataka**, Madras.
12. Altekar, A.S. 1962, **The position of women in Hindu Civilization**.

# ಹಾವೇರಿ ಜಿಲ್ಲೆಯ ನಕಾಶೆ



# ಬ್ಯಾಡಗಿ ತಾಲ್ಲೂಕು ನಕಾಶೆ




1. ಚಿಕ್ಕಬಾಸೂರು
2. ಸುದಂಬಿ
3. ಹಿರೇಹಳ್ಳಿ
4. ಕಾಗಿನೆಲೆ
5. ಮಲ್ಲೂರು
6. ಮಾನಗಿ
7. ಸಿಡೇನೂರು
8. ಕದರ ಮಂಡಲಗಿ
9. ಕಲ್ಲೇದೇವರಪುರ
10. ಮೋಟೇ ಬೆನ್ನೂರು
11. ಬಿಸಲಹಳ್ಳಿ
12. ಕುಮ್ಮಾರ
13. ಕೊಲ್ಲಾಪುರ
14. ಹಿರೇಅಣಜಿ
15. ತಡಸ

# ರಾಣೆಬೆನ್ನೂರು ತಾಲೂಕು ನಕಾಶೆ




1. ರಾಣೆಬೆನ್ನೂರು
2. ಹಲಗೇರಿ
3. ಇಟಗಿ
4. ಕರೂರು
5. ಮಕನೂರು
6. ಕುಪ್ಪೆಲೂರು
7. ಹೆಡಿಯಾಳ
8. ಕೋಳಾಳ
9. ತುಮ್ಮಿದಕಟ್ಟೆ
10. ನದಿಹರಳಹಳ್ಳಿ
11. ಚೌಡದಾನಪುರ
12. ಹಳೇಹೊನ್ನತ್ತಿ
13. ಚಿಕ್ಕಕುರವತ್ತಿ
14. ಅರೇಮಲ್ಲಾಪುರ
15. ಮುದೆನೂರು
16. ಗಣಾಪುರ

# ಶಿಗ್ಗಾಂವಿ ತಾಲೂಕು ನಕಾಶೆ



1. ಶಿಗ್ಗಾಂವಿ
2. ತಡಸ
3. ಕೊಣ್ಣೂರು
4. ಬಂಕಾಪುರ
5. ಹುಲಗೂರು
6. ಹೀರೆಬೆಂಡಗೇರಿ
7. ಬನ್ನೂರು
8. ಗುಂಡಗೇರಿ
9. ಅಂದಲಗಿ
10. ಚಂದ್ರಪುರ
11. ಮಡ್ಲಿ
12. ಅರಟಾಳ
13. ಹೊಸೂರು
14. ಬಸವನಕೊಪ್ಪ
15. ಹಿರೇಮಲ್ಲೂರು
16. ಕಬ್ಬನೂರು

# ಸವಣೂರು ತಾಲೂಕು ನಕಾಶೆ




1. ಸವಣೂರು
2. ಹತ್ತಿಮತ್ತೂರು
3. ತೆಗ್ಗಿಹಳ್ಳಿ
4. ಗುಂಡೂರು
5. ಚಿಲ್ಲೂರ ಬಂದ್ನಿ
6. ಯಲವಗಿ
7. ಅಲ್ಲಿಪುರ
8. ಬರಡೂರು
9. ಕಡಕೋಳ
10. ಹಿರೇಮಲ್ಲೂರು
11. ಹೂವಿನಶಿಗ್ಲಿ

# ಹಾನಗಲ್ಲು ತಾಲೂಕು ನಕಾಶೆ




1. ಹಾನಗಲ್ಲು
2. ಆಡೂರು
3. ನರೇಗಲ್ಲು
4. ಮಂತಗಿ
5. ಬೆಳವಲ
6. ಕೊಸನೂರು
7. ತಿಳುವಳ್ಳಿ
8. ಹಿರೇಬಾಸೂರು
9. ಹಿರೆಕಣಗಿ
10. ಹರವಿ
11. ಅಕ್ಕಿಆಲೂರು
12. ಯಲಿವಾಳ
13. ಹೆರೂರು
14. ಮಸಣಕಟ್ಟೆ
15. ಕಲಕೇರಿ
16. ಸಿರಗೊಂಡ

# ಹಾವೇರಿ ತಾಲೂಕು ನಕಾಶೆ




1. ಹಾವೇರಿ
2. ಆಲದಕೇರಿ
3. ದೇವಿಹೊಸೂರು
4. ದೇವಿಗೇರಿ
5. ಕರ್ಜಗಿ
6. ಅಗಡಿ
7. ಹೊಸರಿತ್ತಿ
8. ಕನವಳ್ಳಿ
9. ಗುತ್ತಲ
10. ನೆಗಳೂರು
11. ಹಾವನೂರು
12. ಬಾಸಪುರ
13. ಬೆಳವಗಿ
14. ಹರಳಹಳ್ಳಿ
15. ಹಂದಿಗನೂರು
16. ಕೋಣನ ತಂಬಿಗೆ
17. ಕುಳೇನೂರು

# ಹಿರೇಕೆರೂರು ತಾಲೂಕು ನಕಾಶೆ




1. ಹಿರೇಕೆರೂರು
2. ರಟ್ಟಿಹಳ್ಳಿ
3. ಮಾಸೂರು
4. ಹೆಗ್ಗೇರಿ
5. ಅಬಲೂರು
6. ಬೆಟಕೆರೂರು
7. ಸತೇನಹಳ್ಳಿ
8. ಚಿನ್ನಮುಳವಂದ
9. ಮಕರಿ
10. ಕಡೂರು
11. ಹಂಸಬಾವಿ
12. ಮೇದೂರು
13. ಚಿಕ್ಕೇರೂರು
14. ಚಿಕ್ಕಕೋಣತಿ
15. ನೀಡನೇಗಿಲು



ಬೃಹತ್ ಶಿಲಾಯುಗ ಸಮಾಧಿಗಳು – ನೆಶ್ವಿ



ದಾನಶಾಸನ – ಕಾಗಿನೆಲೆ



ದಾನಶಾಸನ–ಇಟಗಿ ರಾಣೆಬೆನ್ನೂರು



ಜೈನಮೂರ್ತಿ ಶಿಲ್ಪ–ನೇಶ್ವಿ



ಕಾಳಹಸ್ತಿ ದೇವಾಲಯ – ಕಾಗಿನೆಲೆ





ಒಕ್ಕೈ ಮಹಾಸತಿ ಕಲ್ಲುಗಳು–ಚಿಕ್ಕೆರೂರು, ಹಿರೇಕೆರೂರು ತಾಲೂಕು





ಸಂಗೂರು ಗ್ರಾಮದ ವೀರಗಲ್ಲುಗಳು-ಹಾನಗಲ್ಲು ತಾಲೂಕು



ಗೋಸಾಸನಗಳು-ಗಳಗನಾಥ, ಹಾವೇರಿ ತಾಲೂಕು




ವೀರಗಲ್ಲುಗಳು – ಹಳೇಹೊನ್ನತ್ತಿ



ಬಿಲ್ಲೇಶ್ವರ ದೇವಾಲಯ – ಹಾನಗಲ್ಲು ತಾಲ್ಲೂಕು



ಸೋಮೇಶ್ವರ ದೇವಸ್ಥಾನ – ಅಬಲೂರು



ಉಬ್ಬುಶಿಲ್ಪಗಳು – ಅಬಲೂರು



ಮಹಿಷಾಸುರ ಮರ್ಧಿನಿ ಶಿಲ್ಪ – ಅಬಲೂರು



ವೀರಗಲ್ಲು – ಅಬಲೂರು



ಸೋಮೇಶ್ವರ ದೇವಸ್ಥಾನದ ಹಿಂಬದಿಯ ನೋಟ – ಅಬಲೂರು



ಜೈನಮೂರ್ತಿ ಶಿಲ್ಪ–ಅರಟಾಳ, ಶಿಗ್ಗಾಂವಿ, ತಾ



ದಾನಶಾಸನ–ಚೌಡದಾನಪುರ, ರಾಣೆಬೆನ್ನೂರು ತಾ.



ಭೈರವಮೂರ್ತಿ ಶಿಲ್ಪ, ಚೌಡದಾನಪುರ



ಮಹಾಸತಿ ಕಲ್ಲು-ಚೌಡದಾನಪುರ



ನಾಗಕನ್ಯೆ ದಂಪತಿಗಳು - ಹಳೇಹೊನ್ನತ್ತಿ



ಮುಕ್ತೇಶ್ವರ ದೇವಾಲಯದ ಹಿಂಬದಿಯ ನೋಟ



ಮುಕ್ತೇಶ್ವರ ದೇವಾಲಯ-ಚೌಡದಾನಪುರ



ವೀರಭದ್ರ ದೇವಾಲಯ–ಹಳೇಹೊನ್ನತ್ತಿ



ಗಣಪತಿ ಮೂರ್ತಿ ಶಿಲ್ಪ – ಹಳೇಹೊನ್ನತ್ತಿ



ಶಿವಲಿಂಗ – ಹಳೇಹೊನ್ನತ್ತಿ



ಸ್ತಂಭಶಾಸನ–ಹಳೇಹೊನ್ನತ್ತಿ



ಸ್ತಂಭಶಾಸನ–ರಟ್ಟಿಹಳ್ಳಿ



ವೀರಗಲ್ಲು – ಚಿಕ್ಕಕೋಣತಿ



ವೀರಗಲ್ಲು – ಹಂಸಬಾವಿ



ವೀರಗಲ್ಲು–ಗುತ್ತಲ



ಜಿನಶಾಸನ – ನದಿಹರಳಹಳ್ಳಿ



ಸೋಮೇಶ್ವರ ದೇವಸ್ಥಾನ – ನದಿಹರಳಹಳ್ಳಿ



ದಾನಶಾಸನ–ಸುತಕೋಟೆ



ನಾಗಶಿಲ್ಪಗಳು–ಭುವನಹಳ್ಳಿ



ದಾನಶಾಸನ–ಭುವನಹಳ್ಳಿ



ಗೋಸಾಸನ – ಭುವನಹಳ್ಳಿ




ವೀರಗಲ್ಲುಗಳು – ರಟ್ಟಿಹಳ್ಳಿ




ವೀರಗಲ್ಲುಗಳು–ಹೀರೇಕೊಣತಿ



ಕದಂಬೇಶ್ವರ ದೇವಸ್ಥಾನದ ಹಿಂಬದಿಯ ನೋಟ – ರಟ್ಟೇಹಳ್ಳಿ



ಈಶ್ವರ (ಹರಿಹರ) ದೇವಾಲಯ – ಸಾತೇನಹಳ್ಳಿ



ಸ್ತಂಭ ಶಾಸನ – ಮಂತಗಿ



ಈಶ್ವರ ದೇವಾಲಯ – ಹಾನಗಲ್ಲು




ನಗರೇಶ್ವರ ದೇವಾಲಯ–ಬಂಕಾಪುರ, ಶಿಗ್ಗಾಂವಿ ತಾ.



ಗಳಗೇಶ್ವರ ದೇವಾಲಯ–ಗಳಗನಾಥ



ತಾರಕೇಶ್ವರ ದೇವಾಲಯ - ಹಾನಗಲ್ಲು ತಾಲ್ಲೂಕು



ಸಿದ್ದೇಶ್ವರ ದೇವಾಲಯ - ಹಾವೇರಿ ಜಿಲ್ಲೆ